ಸತ್ಯ ಸುಗುಣ ಸುಂದರ ಸಾಹಿತ್ಯಮಾಲೆ



# ಶ್ರೀ ರಾಮಾನುಜ ಸಿದ್ಧಾಂತ ದರ್ಪಣ

## ಆಳ್ವಾರಾಚಾರ್ಯರ ಪರಿಚಯದೊಂದಿಗೆ ವಿಶಿಷ್ಟಾದ್ವೈತ ವೇದಾಂತ ಮತ್ತು ಶ್ರೀ ವೈಷ್ಣವ ಧರ್ಮದ ಹುಟ್ಟು ಮತ್ತು ಬೆಳವಣಿಗೆ.

ಲೇಖಕ :
ಹೆಚ್. ಜೆ. ರಾಮಯ್ಯಂಗಾರ್
(ನಿವೃತ್ತ ವಿಷಯ ತನಿಖಾಧಿಕಾರಿ)
117/5ಎ, ಶ್ರೀ ಲಕ್ಷ್ಮೀ ವೆಂಕಟೇಶ ಸದನ
ಬಸವಣ್ಣನ ಗುಡಿ ಬೀದಿ ಅಡ್ಡ ರಸ್ತೆ
ಬೆಂಗಳೂರು-560 019

೧೯೮೨] [ಬೆಲೆ : ರೂ. ೩೦

SHREE RAMANUJA SIDDHANTHA DARPANA — A Book on the origin and Development of Visistadvaita Vedanta & Shreevaishnava Religion, with the Alwars and Acharyas, by H.J. Ramaiengar, 117/5A, Shree Lakshmi Venkatesha Sadana, Nagaraj Layout, Bull Temple Road Cross, Bangalore-560 019.

First Published 1982
1,000 Copies

Pages : 312+8
Price : Rs. 30/-

ಈ ಗ್ರಂಥವು ದೊರಕುವ ಸ್ಥಳ :

೧) **ಲೇಖಕರು.**

೨) **ವೇದಾಂತ ಬುಕ್ ಹೌಸ್,**
ಉಮಾ ಟಾಕೀಸ್ ಬಳಿ, ಚಾಮರಾಜಪೇಟೆ, ಬೆಂಗಳೂರು-18.

೩) **ಟಿ. ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್ಸ್,**
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು,
235, ಚಿಕ್ಕಪೇಟೆ, ಬೆಂಗಳೂರು–53.

೪) **ಗೀತಾ ಏಜನ್ಸೀಸ್,**
ಸಗಟು ಪುಸ್ತಕ ಮಾರಾಟಗಾರರು,
ಬಳೇಪೇಟೆ ಚೌಕ, ಬೆಂಗಳೂರು-53.



Printed at :
**Praja Printers Private Limited**
Praja Bhavan, 53/2, Bull Temple Road
Bangalore-560 019



This Book is Published
with the Financial Assistance of
Tirumala Tirupathi Devasthanams
under their Scheme
Aid to Religious Books

ಧರ್ಮಗ್ರಂಥಗಳಿಗೆ ನೆರವು
ಎಂಬ ಯೋಜನೆಯ ಅಂಗವಾಗಿ
ತಿರುಮಲ ತಿರುಪತಿ ದೇವಸ್ಥಾನದಿಂದ
ದೊರೆತ ಆರ್ಥಿಕ ಸಹಾಯದಿಂದ
ಈ ಗ್ರಂಥವು ಪ್ರಕಟಿಸಲ್ಪಟ್ಟಿದೆ.

# ಅರ್ಪಣೆ

ಇಳೈಯ ಪೆರುಮಾಳ್, ರಾಮಾನುಜನ್, ಎಂಬೆರುಮಾನಾರ್,
ಶಠಗೋಪನ್ ಪೊನ್ನಡಿ, ಕೋಯಿಲಣ್ಣನ್, ಲಕ್ಷ್ಮಣಮುನಿ,
ಉಡೈಯವರ್, ಯತಿರಾಜ, ದೇಶಿಕೇಂದ್ರನ್, ಸ್ವಾಮಿತಂದೆ,
ಶ್ರೀ ಭಾಷ್ಯಕಾರ, ಗೋದಾಗ್ರಜ, ಗೋದಾಭೀಷ್ಟಪ್ರಪೂರಕ,
ತಿರುಪ್ಪಾವೈಜೀಯರ್, ರಾಜಹಂಸ, ಭೃಂಗರಾಜ,
ಯಾಮುನಾಂಗುಳಿ ಮೋಚಕ,
ಎಂಬ **ಬಿರುದು**ಗಳನ್ನು ಪಡೆದಿದ್ದ,
ಅಪೂರ್ವವಾದ ಜ್ಞಾನ ಭಕ್ತಿ, ವಿರಕ್ತಿ,
ಭವ್ಯ ಹಾಗೂ ಉದಾರವಾದ ವಿಶಾಲಮನೋಭಾವ,
ಮಾನವ ವರ್ಗದಲ್ಲಿನ ಅಪರಿಮಿತ ಸಹಾನುಭೂತಿ,
ಕಣ್ಣಿಗೆ ಕಾಣಿಸಿಕೊಂಡವರೆಲ್ಲರನ್ನೂ ಸಲಹಬೇಕೆಂಬ
ಕರುಣಾದ್ರ್ರ ಹೃದಯ, ನಿಜವಾದ ತತ್ತ್ವಹಿತ ಪುರುಷಾರ್ಥಗಳನ್ನು
ಉಪದೇಶಿಸಿ ಜನರ ವಿಪರೀತ ವೃತ್ತಿಯನ್ನು ತಡೆಯಬೇಕೆಂಬ
ಹಿರಿಯಾಸೆ, ಶಿಥಿಲವಾದ ವಿಶಿಷ್ಟಾದ್ವೈತ ಸಂಪ್ರದಾಯ ಮತ್ತು
ಶ್ರೀವೈಷ್ಣವ ಸಮಾಜಗಳನ್ನು ಸುಸಂಘಟಿಸಬೇಕೆಂಬ ದೃಢ ನಿರ್ಧಾರ,
ಎಂಥವರ ಹೃದಯವನ್ನೂ ಪರಿವರ್ತನಗೊಳಿಸಬಲ್ಲ
ಸಹಜ ಸುಂದರ ಗಂಭೀರ ಯಥಾವಸ್ಥಿತ ವಾಕ್ಸಂಪತ್ತು,
ನಿಷ್ಕಪಟ ನಿಸ್ವಾರ್ಥ ಉದಾತ್ತ ಪರಿಶುದ್ಧ ಸಂತೋಷ ಜನಕ
ವ್ಯಕ್ತಿ ಜೀವನ,
ಎಂಬೀ ವೈಶಿಷ್ಟ್ಯಗಳನ್ನು ಹೊಂದಿದ್ದ,
**ಆಚಾರ್ಯ ರಾಮಾನುಜರ**
**965ನೆಯ ತಿರುನಕ್ಷತ್ರ ಮಹೋತ್ಸವ ಸಂಧರ್ಭದಲ್ಲಿ**
"ಶ್ರೀ ನಲ್ಲಾನಿತಿ ಮೇಘೋಯಂ ವನಮಧ್ಯೇ ಪ್ರವರ್ಷತಿ"
ಎಂಬುದಾಗಿ ರಾಮಾನುಜರಿಂದಲೇ ಹೊಗಳಿಸಿಕೊಂಡ
ಶ್ರೀ ನಲ್ಲಾನ್ ಚಕ್ರವರ್ತಿ ಪರಂಪರೆಗೆ ಸೇರಿದ ಭಕ್ತನೊಬ್ಬನು
**ಶ್ರೀ ವೈಷ್ಣವ ಜನಾಂಗಕ್ಕೆ**
ಅರ್ಪಿಸಿದ ಕಿರಿಯ ಕಾಣಿಕೆ

# ಅರಿಕೆ

ಭಾರತದ ಮತ ಚರಿತ್ರೆಗೆ ದಕ್ಷಿಣ ಭಾರತದ ಕೊಡುಗೆಯು ಅಪಾರವಾದುದು. ಇದಕ್ಕೆ ಆಂತರಿಕ ಕ್ರಾಂತಿ ಹಾಗೂ ಬಾಹ್ಯ ಮುತ್ತಿಗೆಗಳಿಲ್ಲದ ಇಲ್ಲಿನ ಶಾಂತವಾದ ವಾತಾವರಣವೇ ಕಾರಣ. ಉತ್ತರ ಭಾರತವು ಅಂಧಕಾರದಲ್ಲಿ ಪರಿತಪಿಸುತ್ತಿದ್ದಾಗ, ಅಲ್ಲಿಗೆ ಬೆಳಕನ್ನು ಚೆಲ್ಲಿದುದು ದಕ್ಷಿಣ ಭಾರತವೇ. ದಕ್ಷಿಣ ಭಾರತದ ಆಚಾರ್ಯ ಪರಂಪರೆಯು, ಭಾರತದ ಸನಾತನ ಧರ್ಮವನ್ನು ರಕ್ಷಿಸಿ, ಬೆಳೆಸಿ, ಲೋಕೋದ್ಧಾರ ಮಾಡಲು ಕಾರಣವಾಗಿದೆ.

ವೈವಿಧ್ಯ, ರುಚಿಭೇದ, ವೈಲಕ್ಷಣ್ಯಗಳಿಂದ ಕೂಡಿದ ಈ ಪ್ರಪಂಚದಲ್ಲಿ, ಯಾವ ರೀತಿಯ ಜೀವನವನ್ನು ನಡೆಸಿದರೆ ಸಾರ್ಥಕವಾಗುತ್ತದೆ ಎಂಬ ಸಮಸ್ಯೆಯನ್ನು, ಪ್ರಕೃತಿ ನಿಯಮವನ್ನು ಅರಿತು ಪರಿಹರಿಸುವ ವಿಚಾರದಲ್ಲಿ, ಋಷಿಗಳೂ, ಆಚಾರ್ಯರೂ ಪಟ್ಟ ಪ್ರಯತ್ನದ ಫಲವಾಗಿ, ವೇದ ಮತ್ತಿತರ ಶಾಸ್ತ್ರಗಳು ನಮಗೆ ದೊರೆತಿವೆ. ಮೋಕ್ಷ ಪ್ರಾಪ್ತಿಯೇ ನಮ್ಮ ಧ್ಯೇಯವಾದುದರಿಂದ, ಎಲ್ಲ ದರ್ಶನ–ಶಾಸ್ತ್ರಗಳ ಬೆಳವಣಿಗೆಯೂ ಇದಕ್ಕೆ ಉಪಾಯರೂಪವಾಗಿಯೇ ಆಗಿದೆ. ಆದರೆ ಇವುಗಳಲ್ಲಿ ವೇದಾಂತ ದರ್ಶನವೇ ಎಲ್ಲಕ್ಕಿಂತಲೂ ನಿಷ್ಕೃಷ್ಟವಾದುದು.

ವೇದಾಂತ ದರ್ಶನಕ್ಕೆ ಆಚಾರ್ಯ ರಾಮಾನುಜರ ಕೊಡುಗೆ ಅಪಾರವಾದುದು. ಇಡೀ ಮಾನವ ಕುಲದ ಉದ್ಧಾರಕ್ಕಾಗಿ ಹಾಗೂ ಮೋಕ್ಷ ಪ್ರಾಪ್ತಿಗಾಗಿ, ಅನುಕಂಪದಿಂದ, ಆಜನ್ಮ ಪರ್ಯಂತ, ಶ್ರಮಿಸಿದವರಲ್ಲಿ, ರಾಮಾನುಜರು ಅಗ್ರಗಣ್ಯರು. ಇವರ ವಿಶಿಷ್ಟಾದ್ವೈತ ವೇದಾಂತವು, ಇವರ ಅನುಯಾಯಿಗಳಲ್ಲಿ ಮುಖ್ಯರಾದ ಸುದರ್ಶನ ಸೂರಿ, ಪಿಳ್ಳೈ ಲೋಕಾಚಾರ್ಯ, ವೇದಾಂತ ದೇಶಿಕ, ಮಣವಾಳ ಮಾಮುನಿ, ಶ್ರೀನಿವಾಸಾಚಾರ್ಯ, ಮುಂತಾದವರಿಂದ ವಿವರಿಸಲ್ಪಟ್ಟು, ಪರಿಷ್ಕಾರ ಹೊಂದಿ, ಅಭಿವೃದ್ಧಿಯಾಗಿದೆ. ರಾಮಾನುಜರೇ ಮೊದಲಾದ ಆಚಾರ್ಯರ ತತ್ತ್ವ ಚಿಂತನೆ, ಆ ಚೈತನ್ಯದಿಂದ ಪ್ರೇರಿತರಾಗಿ ಪರಿಪಾಕಗೊಂಡ ಆಚಾರ ಸರಣಿ, ಅದರ ಪರಿಣಾಮವಾಗಿ ಉಂಟಾದ ಸುಧಾರಿತ ಜೀವನ–ಇವು ಈಗ ಅವಶ್ಯಕವಾಗಿ ಬೇಕಾಗಿವೆ.

ರಾಮಾನುಜರ ಈ ವೈದಿಕ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಇರುವ ತತ್ತ್ವ ಹಿತಪುರುಷಾರ್ಥಗಳು, ಅವುಗಳಲ್ಲಿ ಅಡಗಿರುವ ಸಾರಾಂಶ ಹಾಗೂ ಅವುಗಳನ್ನು

ಗೌರವಿಸಿ, ಅನುಷ್ಠಾನಮಾಡಿ, ಸ್ಪಷ್ಟಪಡಿಸಿ, ಪ್ರಚಾರಮಾಡಿರುವ, ಆಳ್ವಾರಾಚಾರ್ಯರುಗಳು – ಈ ವಿಷಯವಾಗಿ ಸರಳ ಹಾಗೂ ಸುಲಭ ಶೈಲಿಯಲ್ಲಿ ಹೇಳಿ, ವಾಚಕರಲ್ಲಿ ರಾಮಾನುಜ ಪಂಥದ ಬಗ್ಗೆ, ಶ್ರದ್ಧಾಸಕ್ತಿಗಳು ಉಂಟಾಗುವಂತೆ ಮಾಡುವುದೇ ಈ ಗ್ರಂಥದ ಮುಖ್ಯೋದ್ದೇಶವಾಗಿದೆ. ವಿವಿಧ ಭಾಷೆಗಳಲ್ಲಿ ಇದುವರೆಗಿನ ಪ್ರಕಟಿತ ಆಧಾರಗ್ರಂಥಗಳನ್ನೆಲ್ಲಾ ಓದಿ, ಟಿಪ್ಪಣಿ ಮಾಡಿ, ಅದರಲ್ಲಿ ಅತಿ ಮುಖ್ಯವಾದುವನ್ನು ಮಾತ್ರ ಕೆಲವೇ ಮಾತುಗಳಲ್ಲಿ ಸಂಗ್ರಹಿಸಿ ಬರೆಯಲಾಗಿದೆ. ಈ ಗ್ರಂಥದಲ್ಲಿರುವ ಸಮಸ್ತ ವಿಷಯಗಳೂ ಎಲ್ಲಾ ಸಂಪ್ರದಾಯಸ್ಥರಿಗೂ ಸೇರಿದ್ದು, ಯಾರ ಮನಸ್ಸನ್ನೂ ನೋಯಿಸದಂತೆ ಎಚ್ಚರಿಕೆ ವಹಿಸಲಾಗಿದೆ. ಇನ್ನೂ ಹೆಚ್ಚು ತಿಳಿದುಕೊಳ್ಳಬೇಕೆಂದು ಅಪೇಕ್ಷೆ ಪಡುವವರ ಸಲುವಾಗಿ, ಆಧಾರ ಗ್ರಂಥಗಳ ಪಟ್ಟಿಯನ್ನು ಅನುಬಂಧದಲ್ಲಿ ಕೊಡಲಾಗಿದೆ. ರಾಮಾನುಜರು ಇಚ್ಛಿಸಿದ ನಿತ್ಯ ಕರ್ಮಗಳನ್ನು ಅರಿತು, ಆಚರಿಸುವವರಿಗಾಗಿ, ಮುಖ್ಯವಾದುದನ್ನು ಕೊಡಲಾಗಿದೆ. ಇದನ್ನು, ತಮ್ಮ ತಮ್ಮ ಸಂಪ್ರದಾಯ ಕ್ರಮದಂತೆ ಬದಲಾಯಿಸಿಕೊಂಡು ಉಪಯೋಗಿಸಬಹುದು.

ಈ ಗ್ರಂಥದ ಪಠಣ, ಚಿಂತನ, ಸ್ಮರಣಗಳಿಂದ, ಭಕ್ತರೆಲ್ಲರ ಇಷ್ಟಾರ್ಥ ಫಲಸಿದ್ಧಿಯಾಗಲೆಂದು ಹಾರೈಕೆ. ವಿಲಕ್ಷಣವಾದ ವೈದಿಕ ಸಂಪ್ರದಾಯದ ಹಿರಿಮೆಯನ್ನು ಅರಿಯದವರಿಗೆ, ಇದು ಅತ್ಯವಶ್ಯಕವಾದ ಸ್ವರೂಪಜ್ಞಾನ ಆನಂದಗಳನ್ನಿತ್ತು, ವೈದಿಕ ಸಂಪ್ರದಾಯದಲ್ಲಿ ಭಕ್ತಿ ವಿಶ್ವಾಸಗಳನ್ನು ಹೆಚ್ಚಿಸಿ, ಹೃದಯವನ್ನು ಮಾರ್ಪಡಿಸುತ್ತದೆಂದು ನಂಬಲಾಗಿದೆ. ಹೀಗೆ ಶ್ರೀವೈಷ್ಣವ ಸಮಾಜದ ರಕ್ಷಣೆ, ವಿಕಾಸ ಮತ್ತು ಸಮನ್ವಯಗಳಿಗೆ ಅಲ್ಪವಾದರೂ ನೆರವು ದೊರೆತಲ್ಲಿ, ಲೇಖಕನ ಆರು ವರ್ಷಗಳ ಶ್ರಮವು ಸಾರ್ಥಕವಾಯಿತೆಂದು ಭಾವಿಸಲಾಗುತ್ತದೆ.

ಇಂಥಹ ದೊಡ್ಡ ಗ್ರಂಥವನ್ನು ಬರೆಯುವಾಗ ಸಾಧ್ಯವಾದಷ್ಟು ಎಚ್ಚರಿಕೆ ವಹಿಸಿದರೂ, ಸಣ್ಣಪುಟ್ಟ ನ್ಯೂನತೆಗಳು ಬರುವುದು ಸಹಜ. ಆದುದರಿಂದ ಇದನ್ನು ಉತ್ತಮಪಡಿಸಲು ಬರುವ ಸಲಹೆ–ಸೂಚನೆಗಳನ್ನು ಕೃತಜ್ಞತಾಪೂರ್ವಕವಾಗಿ ಸ್ವಾಗತಿಸಲಾಗುತ್ತದೆ.

ಕನ್ನಡ ರಾಜ್ಯದ ಉದಯದೊಂದಿಗೆ ನನ್ನ ಸಾಹಿತ್ಯ ನಿರ್ಮಾಣ ಕಾರ್ಯವು ಆರಂಭವಾಗಿ, ಮುಂದುವರೆದು ಬಂದಿದೆ. ಈ ಸಂದರ್ಭದಲ್ಲಿ ಕೆಲವರನ್ನು ನೆನೆಯುವುದು ಉಚಿತವಾದುದು. ಗ್ರಂಥ ನಿರ್ಮಾಣ ಕಾರ್ಯದಲ್ಲಿ ನನ್ನನ್ನು ಮೊಟ್ಟಮೊದಲು ತೊಡಗಿಸಿದವರು ನನ್ನ ಸಹೋದ್ಯೋಗಿ ಶ್ರೀ ಕೆ. ಟಿ. ರಾಮಸ್ವಾಮಿ ; ಯೋಗ್ಯ ಶಿಕ್ಷಣಕ್ಕೆ ಅವಕಾಶ–ಅನುಕೂಲ ಕಲ್ಪಿಸಿ, ನನ್ನಲ್ಲಿ ಧರ್ಮಶ್ರದ್ಧೆ ಉಂಟಾಗುವಂತೆ ಪ್ರೋತ್ಸಾಹಿಸಿದವರು ನನ್ನ ಪೂಜ್ಯ ತಂದೆ ಹೆಚ್. ಆರ್. ಜನಾರ್ದನಯ್ಯಂಗಾರ್ ;

ಧರ್ಮ ಮಾರ್ಗದಲ್ಲಿ ನಡೆಯಲು ಮಾರ್ಗದರ್ಶನ ಮಾಡಿದವರು ಶ್ರೀಮತಿ ತಂಗಮ್ಮ ಮತ್ತು ಶ್ರೀ ಡಾ|| ಎಸ್.ಟಿ. ಪಾರ್ಥಸಾರಥಿ ದಂಪತಿಗಳು ; ನನಗೆ ಶ್ರೀ ಮಹಾ ಲಕ್ಷ್ಮಿಯ ಅನುಗ್ರಹ ಆಗಲು ಕಾರಣರಾದವರು ಶ್ರೀಮತಿ ತಂಗಮ್ಮನವರ ತಾಯಿ ಲಕ್ಷ್ಮಮ್ಮ ; ಹಾಗೆಯೇ ವಿದ್ಯಾಧಿ ದೇವತೆಯಾದ ಶ್ರೀ ಲಕ್ಷ್ಮೀ ಹಯಗ್ರೀವನ ಅನು ಗ್ರಹ ಆಗಲು ಕಾರಣರಾದವರು ಶ್ರೀ ಡಾ|| ಎಸ್.ಟಿ. ಪಾರ್ಥಸಾರಥಿಯವರ ತಂದೆ ಎಸ್.ಟಿ. ರಾಘವಾಚಾರ್; ರಾಮಾನುಜ ದರ್ಶನದ ಬಗ್ಗೆ ಅಧ್ಯಯನ ಮಾಡಿ, ಉಪನ್ಯಾಸ ಕೊಡಲು ಹಾಗೂ ಗ್ರಂಥ ರಚಿಸಲು ಕಾರಣರಾದವರು ಇಂಜಿನಿಯರ್ ಶ್ರೀ ಹೆಚ್. ಎಸ್. ನರಸಿಂಹಮೂರ್ತಿ ; ಈ ಗ್ರಂಥವನ್ನು ಸಿದ್ಧಪಡಿಸುವಾಗ, ಹತ್ತಾರು ಜನ ಮಿತ್ರರು, ತಮ್ಮ ಬಳಿ ಇದ್ದ ಅಪೂರ್ವ ಗ್ರಂಥಗಳನ್ನು ಎರವಲಾಗಿ ನೀಡಿ, ಸಲಹೆಗಳನ್ನು ಇತ್ತು, ಸಹಾಯ ಮಾಡಿರುತ್ತಾರೆ. ಅನೇಕ ಮಂದಿ ಹಿರಿಯರು, ಅನುಭವಿಗಳು ತಮ್ಮ ಉಪನ್ಯಾಸಗಳ ಮೂಲಕ, ಅನೇಕ ಕ್ಲಿಷ್ಟ ವಿಷಯ ಗಳನ್ನು ಸ್ಪಷ್ಟಪಡಿಸಿ ನೆರವಾಗಿದ್ದಾರೆ ; ನನ್ನ ವ್ಯಾಸಂಗ ಹಾಗೂ ಗ್ರಂಥ ರಚನಾ ಕಾರ್ಯದಲ್ಲಿ ಸಹಾಯ, ಸಹಕಾರ, ಸಲಹೆಗಳನ್ನು ನೀಡುತ್ತಿರುವವಳು ನನ್ನ ಪತ್ನಿ ಚಿ|| ಸೌ|| ಅಂಬುಜ ; ಇದನ್ನು ಬರೆಯುವಾಗ ನೂರಾರು ಗ್ರಂಥಕರ್ತರ ನೆರವನ್ನು ಚೆನ್ನಾಗಿ ಉಪಯೋಗಿಸಿಕೊಂಡಿದ್ದೇನೆ. ಈ ಗ್ರಂಥವನ್ನು ಪ್ರಕಟಿಸಲು ಹೆಚ್ಚು ಭಾಗ ಧನಸಹಾಯ ಕೊಡಿಸಿದವರು ತಿರುಮಲ ತಿರುಪತಿ ದೇವಸ್ಥಾನದ ಆಡಳಿತಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ ಮತ್ತು ಸಂಪಾದಕ ಶ್ರೀ ಕೆ. ಸುಬ್ಬರಾವ್ ; ಇದನ್ನು ಅಂದವಾಗಿ ಮುದ್ರಿಸಿ ಕೊಟ್ಟವರು ಪ್ರಜಾ ಪ್ರಿಂಟರ್ಸ್ (ಪ್ರೈ.) ಲಿಮಿಟೆಡ್‌ನ ಮಾಲೀಕರು ಹಾಗೂ ಕೆಲಸಗಾರರು—ಈ ಎಲ್ಲ ವ್ಯಕ್ತಿಗಳಿಗೂ ನಾನು ತುಂಬಾ ಆಭಾರಿಯಾಗಿದ್ದೇನೆ.

ಹಿರಿಯರ ಭಾವ ಮತ್ತು ಮಾತುಗಳೆಂಬ ಹೂಗಳನ್ನು ಆಯ್ದು, ಮಾಲೆಯಾಗಿ ಕಟ್ಟಿ, ಭಗವಂತನ ಪ್ರತಿನಿಧಿಯಾದ ಆಚಾರ್ಯರ ಪಾದಾರವಿಂದಗಳಲ್ಲಿ ಅರ್ಪಿಸುವ ಈ ಪವಿತ್ರ ಕಾರ್ಯದಲ್ಲಿ ನಾರಿನ ಪಾತ್ರ ಮಾತ್ರ ನನ್ನದು.

ಕನ್ನಡ ನಾಡಿನ ಹಾಗೂ ಕನ್ನಡ ತಿಳಿದಿರುವ ಹೊರನಾಡಿನ ಜನರೆಲ್ಲರೂ, ಇದನ್ನು ಕೊಂಡು ಓದಿ, ಸಾಧ್ಯವಿದ್ದರೆ ಕೆಲವು ಪ್ರತಿಗಳನ್ನು ಕೊಂಡು ದಾನಮಾಡಿ, ಬಂಧು ಮಿತ್ರರನ್ನು ಕೊಂಡು ಓದುವಂತೆ ಹೇಳಿ, ಲೇಖಕನ ಶ್ರಮವನ್ನು ಸಾರ್ಥಕ ಗೊಳಿಸಬೇಕೆಂದು ಪ್ರಾರ್ಥನೆ.

ಬೆಂಗಳೂರು-೧೯
೩—೪—೧೯೮೨

ಸೇವಾಕಾಂಕ್ಷಿ
**ಹು. ಜ. ರಾಮಯ್ಯಂಗಾರ್**

# ವಿಷಯ ಸೂಚಿಕೆ

|| ಶ್ರೀ ||

# ಶ್ರೀ ರಾಮಾನುಜ ಸಿದ್ಧಾಂತ ದರ್ಪಣ

## ಭಾಗ ಒಂದು – ಸಿದ್ಧಾಂತದ ಪರಿಚಯ

### ಅಧ್ಯಾಯ ೧

### ಹಿ ನ್ನೆ ಲೆ

ಮಾನವನಿಗೆ ತಾನು ಮತ್ತು ತನ್ನ ಸುತ್ತಲೂ ಇರುವುದು ಇವೆರಡೂ ಮೊದಲು ಕಾಣಬಂದು, ಆಮೇಲೆ ಇವೆರಡಕ್ಕೂ ಕಾರಣವಾದುದೊಂದು ಇರಬಹುದು ಎಂಬ ಕಲ್ಪನೆ ಬಂದಿತು. ಹೀಗೆ ನಾವು ಇರುವ ಈ **ಪ್ರಪಂಚದ ಮೂರು ತತ್ತ್ವ**ಗಳಾದ ಚಿತ್-ಅಚಿತ್-ಈಶ್ವರ ಅಥವಾ ಪುರುಷ-ಪ್ರಕೃತಿ-ಪರಮಾತ್ಮ ಅಥವಾ ಜೀವ-ಜಗತ್ತು-ಜಗನ್ನಿಯಾಮಕ ಈ ಮೂರನ್ನೂ ವಿವರಿಸಿ, ಇವುಗಳ ಪರಸ್ಪರ ಸಂಘಟನೆ-ಸಂಬಂಧಗಳನ್ನು ತಿಳಿಸುವುದೇ ಎಲ್ಲ ದರ್ಶನ, ಶಾಸ್ತ್ರ, ಸಿದ್ಧಾಂತಗಳ ಗುರಿಯಾಗಿದೆ. ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆದ ಜಗನ್ನಿಯಾಮಕನೊಬ್ಬ ನಿದ್ದಾನೆ ಎಂಬುದನ್ನು ಎಲ್ಲ ಸೇಶ್ವರವಾದಿಗಳೂ ಅಂದರೆ ಆಸ್ತಿಕರು ಒಪ್ಪುತ್ತಾರೆ; ಜ್ಞಾನಸ್ವರೂಪಿಯಾದ ಜೀವ ಹಾಗೂ ಅಚೇತನವಾದ ಜಗತ್ತು ಇವುಗಳ ಅಸ್ತಿತ್ವದಲ್ಲಿಯೂ ಭಿನ್ನಾಭಿಪ್ರಾಯವಿಲ್ಲ; ಆದರೆ ಈ ಜಗನ್ನಿಯಾಮಕನ ಸ್ವರೂಪ, ಜಗನ್ನಿಯಾಮಕ–ಜೀವ, ಜಗನ್ನಿಯಾಮಕ–ಜಗತ್ತು, ಜೀವ–ಜಗತ್ತು ಇವುಗಳಿಗಿರುವ ಪರಸ್ಪರ ಸಂಬಂಧ ಇವುಗಳ ಬಗ್ಗೆ ಭಿನ್ನಾಭಿಪ್ರಾಯವಿರುವುದರಿಂದ ಈ ಮೂರು ತತ್ತ್ವಗಳ ವಿಷಯದಲ್ಲಿ ಅನೇಕ ಸಿದ್ಧಾಂತಗಳು ಹುಟ್ಟಿ ಬೆಳೆದಿವೆ. ಒಂದೇ ಸತ್ಯವನ್ನು ಭಿನ್ನಭಿನ್ನ ದೃಷ್ಟಿಕೋನದಿಂದ ನೋಡಿದಾಗ ಅಥವಾ ವಿಚಾರಮಾಡಿದಾಗ ಕಾಣಿಸಿದ ದೃಶ್ಯಗಳು ಅಥವಾ ಕಲ್ಪನೆಗಳು ಈ ರೀತಿಯ ಭಿನ್ನಾಭಿಪ್ರಾಯಕ್ಕೆ ಕಾರಣವಾಗಿದೆ ಎಂದು ಹೇಳಬಹುದು. ಆದರೂ ಎಲ್ಲ ದರ್ಶನ ಸ್ಥಾಪಕರೂ ತಾವು ರೂಪಿಸಿದ ಅಭಿಪ್ರಾಯಗಳಿಗೆಲ್ಲ ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆ ಎಂಬೀ **ಪ್ರಸ್ಥಾನತ್ರಯ**ಗಳನ್ನೇ ಆಧಾರವಾಗಿ ಇಟ್ಟುಕೊಂಡಿದ್ದಾರೆಂದರೆ ಆಶ್ಚರ್ಯವಾಗದಿರದು.

ಈ ವಿವಿಧ ದರ್ಶನ-ಸಿದ್ಧಾಂತಗಳನ್ನು ಅನುಸರಿಸುವ ಮತಗಳ ದೇವದೇವತೆ, ಪೂಜಾಪ್ರಕ್ರಿಯೆ, ತೀರ್ಥಕ್ಷೇತ್ರ ಎಲ್ಲವೂ ಬೇರೆ ಬೇರೆ ಆಗಿದ್ದರೂ, ಅವುಗಳೆಲ್ಲದರ ನೀತಿ-ನಿಯಮ, ವಿಧಿ-ನಿಷೇಧಗಳೆಲ್ಲವೂ ಸಾಮಾನ್ಯವಾಗಿ ಒಂದೇ ಆಗಿರುತ್ತವೆ. ಲೋಕದ ಹೊರನೋಟಕ್ಕೆ ಭಿನ್ನವಾಗಿ ಕಾಣಬರುವ ಜನರೆಲ್ಲರ ದೇಹ ರಚನೆಯು ಏಕರೂಪವಾಗಿರುವಂತೆ ಎಲ್ಲ ದರ್ಶನ-ಸಿದ್ಧಾಂತಗಳ ಹಿನ್ನೆಲೆಯಲ್ಲಿ ಸಾಮ್ಯ-ಏಕರೂಪತೆಗಳನ್ನು ಕಾಣಬಹುದಾಗಿದೆ. ಅಪೂರ್ಣರಾದ ಮಾನವ ಕುಲವನ್ನು ಪೂರ್ಣತೆಯೆಡೆಗೆ ಕರೆದೊಯ್ಯಲು ಇವೆಲ್ಲ ಯತ್ನಿಸುತ್ತಿವೆ, ಹಾಗೂ ಕತ್ತಲೆಯಲ್ಲಿ ದಾರಿಕಾಣದೆ ತಡವರಿಸುತ್ತಿರುವ ಮಾನವರಿಗೆ ಇವು ಶ್ರೇಯಸ್ಸಿನ ದಾರಿಯನ್ನು ತೋರಿಸುವಂತಹ ಸ್ಥಿರವಾದ ಜ್ಞಾನದೀಪಗಳಾಗಿವೆ ಎಂದರೆ ಅತಿಶಯೋಕ್ತಿಯಾಗಲಾರದು.

ಈ ಲೋಕದಲ್ಲಿರುವ ಎಲ್ಲ ದರ್ಶನ-ಸಿದ್ಧಾಂತಗಳೂ ಎಲ್ಲರಿಗೂ ಬೇಕಾಗುವುದಿಲ್ಲ. ಸತ್ವ ರಜೋ ತಮೋ ಗುಣಗಳ ವಿವಿಧ ಪ್ರಮಾಣದ ಸಮ್ಮಿಲನದಿಂದ ಆವಿರ್ಭವಿಸಿರುವ ಈ ಲೋಕದ ಬಗೆಬಗೆಯ ಸ್ವಭಾವದ ಜನರಿಗೆ ಹಿಡಿಸುವಂತಹ, ಬಗೆಬಗೆಯ ವಿಚಾರ ವಿವೇಚನೆಗಳಿಂದ ಕೂಡಿದ ವಿಕಾಸದ ವಿವಿಧ ಹಂತಗಳಲ್ಲಿರುವ ವಿವಿಧ ಮಾನವರಿಗೆ, ಮಾರ್ಗದರ್ಶಕ ಮತ್ತು ಸಹಾಯ ಆಗುವ ವಿವಿಧ ರೀತಿಯ ಈ ಮತ-ಪಂಥಗಳೆಲ್ಲವೂ ದೈವೀ ಪುರುಷರ ಹಾಗೂ ಮಹಾನುಭಾವರ ಬಹುಕಾಲದ ಚಿಂತನೆಯ ಫಲವಾಗಿ ಕಾಡುಗಳಲ್ಲಿ, ಗುಡಿಸಲುಗಳಲ್ಲಿ, ಅರಮನೆಗಳಲ್ಲಿ ರೂಪುಗೊಂಡಿವೆ. ಆದ ಕಾರಣ ಜೀವಿಗಳು ತಮ್ಮತಮ್ಮ ಸ್ವಭಾವಗುಣಗಳಿಗೆ ಅನುಗುಣವಾಗಿ, ತಮತಮಗೆ ಹೊಂದಿಕೆಯಾಗುವ ಮಾರ್ಗದಲ್ಲಿ ಹೋಗಿ, ಜಗನ್ನಿಯಾಮಕನ ದರ್ಶನದ ಆನಂದ–ಅನುಭವಗಳನ್ನು ಪಡೆದು, ತಮ್ಮ ಜನ್ಮದ ಸಾರ್ಥಕತೆಯನ್ನು ಪಡೆಯಲು ಯತ್ನಿಸಿದ್ದಾರೆ.

ನಮಗೆ ಕಾಣುವ ಈ ಜಗತ್ತಿನ ಸರಿಯಾದ ಸ್ವರೂಪವನ್ನು ತಿಳಿಯುವುದು ಸುಲಭವೇನಲ್ಲ. ಅಪರಿಮಿತ, ಅಗಾಧ ಮತ್ತು ಸೂಕ್ಷ್ಮ ಆದ ಈ ಜಗತ್ತನ್ನು ತಿಳಿದುಕೊಳ್ಳಲು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ **ಮೂರು** ವಿಧವಾದ **ಪ್ರಮಾಣಗಳು** ಇವೆ. ನಮ್ಮ ತಿಳಿವಿಗೆ ಸಾಧನವಾದ ಇಂದ್ರಿಯಗಳ ಶಕ್ತಿಯು ಒಹುಮಿತ, ಸ್ಥೂಲ ಆಗಿದೆ. ಇಂದ್ರಿಯಾನುಭವವನ್ನು ಪಡೆಯಲು ಮುಖ್ಯವಾದ ಬುದ್ಧಿಯ ಸಹಾಯದಿಂದ ನಿಲುಕುವ ಪ್ರತ್ಯಕ್ಷದ ಜೊತೆಗೆ ತರ್ಕ-ಅನುಮಾನಗಳೂ ಆವಶ್ಯಕವಾಗುತ್ತವೆ. ಜೊತೆಗೆ ವಿವಿಧ ಕ್ಷೇತ್ರಗಳಲ್ಲಿನ ಸಮರ್ಥಜನರ ಅನುಭವವನ್ನು ಅವರ ಮಾತು-ಕೃತಿಗಳಲ್ಲಿನ ಶಬ್ದಗಳ ಆಧಾರದ ಮೇಲೆ ಕೂಡಿಸಿಕೊಂಡು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಬುದ್ಧಿಯು ತೀಕ್ಷ್ಣವಾದಷ್ಟೂ ಜಗತ್ತಿನ ಸ್ವರೂಪದ ಜ್ಞಾನ ಬೆಳೆಯುತ್ತ ಹೋಗುತ್ತದೆ. ಆದರೂ ಇದು ಇನ್ನೂ ಪರ್ಯಾಪ್ತಿಯನ್ನು ಪಡೆದಿರುವುದಿಲ್ಲ. ಏಕೆಂದರೆ ಈ ವಿಶ್ವವು ಸೃಷ್ಟಿಯಾದಾಗಿನಿಂದಲೂ ಇದರಲ್ಲಿ

ಉಂಟಾಗಿರುವ ಧ್ವನಿ, ಬೆಳಕು, ಚಲನೆ, ಚಿಂತನೆ ಎಲ್ಲವೂ ಅಮೂರ್ತರೂಪದಲ್ಲಿ ನಿಗೂಢವಾಗಿ ಆಕಾಶದಲ್ಲಿ ಲೀನವಾಗಿವೆ. ಇದನ್ನೆಲ್ಲ ನೋಡಲು ಹಾಗೂ ತಿಳಿದು ಕೊಳ್ಳಲು ನಮಗೆ ಅತೀಂದ್ರಿಯಶಕ್ತಿ ಬೇಕಾಗುತ್ತದೆ.

ಈ ಪ್ರಪಂಚದಲ್ಲಿರುವ ವಿಷಯಗಳಲ್ಲಿ ಸಾರತಮವಾದುದು ಯಾವುದು ? ಯಾವುದನ್ನು ತಿಳಿಯಬೇಕು ? ಯಾವುದನ್ನು ಬಿಡಬೇಕು ? ಯಾವುದು ನಮಗೆ ಇಷ್ಟವಾದ ಫಲವನ್ನು ನೀಡುತ್ತದೆ ? ಯಾವುದರಿಂದ ನಮಗೆ ಅನಿಷ್ಟ ಫಲ ಉಂಟಾಗುತ್ತದೆ ? ಇಷ್ಟವಾದ ಫಲವನ್ನು ದೊರಕಿಸುವ ಸಾಧನಗಳಾವುವು ? ಯಾವುದನ್ನು ನೆನಪಿಡಬೇಕು ? ಯಾವುದನ್ನು ಮರೆಯಬೇಕು ? ಪ್ರಪಂಚ ಎಂದರೇನು ? ನಾನು ಯಾರು ? ಈ ಜಗತ್ತಿಗೆ ನಾನು ಎಲ್ಲಿಂದ, ಏಕೆ ಬಂದೆ ? ಮುಂದೆ ಎಲ್ಲಿಗೆ, ಏಕೆ ಹೋಗುತ್ತಿದ್ದೇನೆ ? ನಾನು ಇಲ್ಲಿರುವುದು ಯಾವ ಉದ್ದೇಶದಿಂದ ? ಈ ಜಗತ್ತಿನಲ್ಲಿ ಸ್ಥಿರವಾದ ತತ್ತ್ವವೊಂದಿದೆಯೇ ? ದೇವರು ಇದ್ದಾನೆಯೇ ? ಇದ್ದರೆ ಅವನ ಸ್ವರೂಪ-ಸ್ವಭಾವ ಎಂತಹುದು ? ಜೀವ-ಜಗತ್ತು-ಜಗನ್ನಿಯಾಮಕ ಇವರ ಪರಸ್ಪರ ಸಂಬಂಧ ಎಂತಹುದು ? ನಮ್ಮ ಬದುಕಿಗೆ ನಿರ್ದಿಷ್ಟ ಗುರಿ, ಅರ್ಥ ಇದೆಯೇ ? ಆ ಗುರಿಯನ್ನು ಸಾಧಿಸುವುದು ಎಂತು ? ಗುರಿಮುಟ್ಟಿದಾಗ ಜೀವ ಏನಾಗುತ್ತದೆ ಹಾಗೂ ಹೇಗಿರುತ್ತದೆ ? ವಿಚಿತ್ರ ಮತ್ತು ವಿವಿಧ ಆದ ಮಾನವ ಜೀವನಕ್ಕೆ ವ್ಯವಸ್ಥಿತ ಕಾರಣ ಒಂದಿದೆಯೇ ? ಸುಖ ದುಃಖಗಳ ಹಿನ್ನೆಲೆ ಏನು ? ಸುಖವು ಐಹಿಕವೇ, ಆಮುಷ್ಮಿಕವೇ ಅಥವಾ ಎರಡೂ ಸೇರಿದುದೇ ? ಸಾವೆಂದರೆ ಏನು ? ಸಾವಿನ ಆಚೆ ಏನಿದೆ ? ಕಾಣುವ ಜಗತ್ತು ವಾಸ್ತವವೇ, ತೋರಿಕೆಯೇ, ಹುಚ್ಚಾಟವೇ, ಇದಕ್ಕೆ ಕೊನೆಯುಂಟೇ ? ಇದ್ದರೆ ಯಾವಾಗ, ಎಲ್ಲಿ, ಏಕೆ, ಹೇಗೆ ? ಜೀವ–ಜಗತ್ತು ಸ್ವತಂತ್ರರೇ ಅಥವಾ ನಿಯಮಗಳಿಗೊಳಪಟ್ಟ ದಾಸರೇ ? ಈ ಜಗತ್ತಿನಲ್ಲಿ ಬಾಳುವೆ ಮಾಡುವುದು ಹೇಗೆ ?—ಎಂಬೀ ಹತ್ತಾರು ಪ್ರಶ್ನೆ–ಸಂದೇಹಗಳಿಗೆ ಸರಿಯಾದ ಉತ್ತರ–ವಿವರಣೆ ಪಡೆಯಲೋಸುಗ ಮಾನವರು ಅನಾದಿಕಾಲದಿಂದಲೂ ಯತ್ನಿಸುತ್ತ ಬಂದಿದ್ದಾರೆ.

ಈ ಪ್ರಶ್ನೆ–ಸಂದೇಹಗಳಿಗೆ ಸಮಾಧಾನವನ್ನು ಹುಡುಕುವ ಯತ್ನವು ಅಂದರೆ ವಿಚಾರ ಮಾಡುವುದು, ಬುದ್ಧಿಶಕ್ತಿಯುಳ್ಳ ಎಲ್ಲ ಜನರ ಸಹಜ ಗುಣ, ಸಮಾಧಾನವನ್ನು ಕಾಣುವುದೇ ದರ್ಶನ ; ಕಂಡುದನ್ನು ತನ್ನದಾಗಿ ಮಾಡಿಕೊಳ್ಳುವುದೇ ಅನುಭವ ಅಥವಾ ಸಾಕ್ಷಾತ್ಕಾರ. ಹೀಗೆ ಈ ವಿಚಾರ, ದರ್ಶನ, ಸಾಕ್ಷಾತ್ಕಾರಗಳು ಬಹುಕಾಲದಿಂದಲೂ ನಡೆಯುತ್ತ ಬಂದಿವೆ. ವಿಚಾರಗಳಲ್ಲಿ ವೈವಿಧ್ಯತೆ, ದರ್ಶನಗಳು ಅನೇಕ ಆಗಿದ್ದರೂ ಸಾಕ್ಷಾತ್ಕಾರದಲ್ಲಿ ಏಕತೆ ಇದೆ. ಅಂದರೆ ದಾರಿಗಳು ಹಲವು ಆದರೂ ಗುರಿ ಮಾತ್ರ ಒಂದೇ ಆಗಿದೆ. ಒಟ್ಟಿನಲ್ಲಿ ಈ ಎಲ್ಲ ಪ್ರಶ್ನೆ-ಸಂದೇಹಗಳಿಗೂ ಆಸ್ತಿಕ ದರ್ಶನಗಳೆಲ್ಲದರ ಏಕೈಕ ಪ್ರತಿನಿಧಿಯಾಗಿ ಉಳಿದು ಬಂದಿರುವ **ವೇದಾಂತವು** ಸೂಕ್ತ

ವಿವರಣೆಯನ್ನು ನೀಡಿವೆ ಎಂದು ಹಿಂದೂ ಜನರೆಲ್ಲರೂ ಭಾವಿಸಿದ್ದಾರೆ. ಏಕೆಂದರೆ ಪ್ರಸ್ಥಾನತ್ರಯವೇ ವೇದಾಂತದ ಪರಮಾಧಾರವಾಗಿದೆ.

ಅಪೌರುಷೇಯ ಹಾಗೂ ದೋಷರಹಿತ ಆದ **ಶಬ್ದವು** ಅಂದರೆ **ವೇದವು** ಎರಡು ಭಾಗಗಳನ್ನೊಳಗೊಂಡಿದೆ. ವೇದಗಳ ಪೂರ್ವಭಾಗವು ಅಂದರೆ ಕರ್ಮಕಾಂಡವು ಇಹಲೋಕದಲ್ಲಿ ಸಿಗುವ ಪಶು ಪುತ್ರ ಧನಕನಕ ಮಳೆ ಆಹಾರ ಮೊದಲಾದ ಫಲ ಗಳಿಗೋಸ್ಕರ ಹಾಗೂ ಪರಲೋಕದಲ್ಲಿ ಸಿಗುವ ಅಲ್ಪ ಮತ್ತು ನಶ್ವರ ಆದ ಫಲ ಗಳಿಗೋಸ್ಕರ ಅನುಷ್ಠಿಸಬೇಕಾದ ಕೆಲವು ಸಾಧನಗಳನ್ನು ತಿಳಿಸುತ್ತದೆ. ಆದರೆ ವೇದ ಗಳ ಉತ್ತರ ಭಾಗವಾದ ಉಪನಿಷತ್ತುಗಳು ಅಂದರೆ ಜ್ಞಾನಕಾಂಡವು ಅತಿ ಶ್ರೇಷ್ಠವಾದ ಮೋಕ್ಷವೆಂಬ ಪುರುಷಾರ್ಥವನ್ನೂ, ಅದನ್ನು ಪಡೆಯುವ ಉಪಾಯವನ್ನೂ ತೋರಿಸಿ ಕೊಡುತ್ತದೆ. ಹೀಗೆ ವೇದಗಳ ಪೂರ್ವಭಾಗವು ಸಾರವಾದುದು, ವೇದಗಳ ಉತ್ತರ ಭಾಗವು ಸಾರತರವಾದುದು. ಇವೆರಡೂ ಒಂದೇ ಶಾಸ್ತ್ರದ ಎರಡು ಅವಿಚ್ಛಿನ್ನ ಭಾಗ ಗಳು. ಆದರೆ ಇವರಲ್ಲಿ ತತ್ತ್ವಹಿತ ಪುರುಷಾರ್ಥಗಳನ್ನು ಸಂಗ್ರಹವಾಗಿ ತಿಳಿಸುವ ರಹಸ್ಯತ್ರಯವೇ ಸಾರತಮವಾದುದು. ಆದುದರಿಂದ ಇದನ್ನು ಅವಶ್ಯವಾಗಿ ತಿಳಿದು ಕೊಳ್ಳಬೇಕು.

ಜಗತ್ತಿನಲ್ಲಿ ನಿರ್ಲಿಪ್ತತೆ, ನಿರಭಿಮಾನ, ವೈರಾಗ್ಯಗಳಿಂದ ಬಾಳುವೆ ನಡೆಸಿ, ತಮ್ಮ ಅತೀಂದ್ರಿಯ ಶಕ್ತಿಯಿಂದ ದೊರೆತ ಬ್ರಹ್ಮಾನಂದವನ್ನು ಅನುಭವಿಸಿದ ಋಷಿ ಗಳು, ಯೋಗಿಗಳು, ಸಂತರು, ಮಹಾತ್ಮರು ಜಗತ್ತಿನ ಕಲ್ಯಾಣಕ್ಕಾಗಿ ತಿಳಿಸಿರುವ ಅಮರವಾಣಿಗಳೇ **ಉಪನಿಷತ್ತು**ಗಳು ಎನಿಸಿಕೊಳ್ಳುತ್ತವೆ. ಉಪನಿಷತ್ ಎಂದರೆ ಪರಮಾತ್ಮನಿಗೆ ನೇರವಾಗಿ ಅನ್ವಯಿಸುವ ಜ್ಞಾನ ಎಂದರ್ಥ. ಅನೇಕ ಶತಮಾನಗಳ ಕಾಲ ಶ್ರಮಿಸಿ, ಸತ್ಯದ ಅನ್ವೇಷಣೆ ಮಾಡಿ, ಕಣ್ಣುಗಳಿಂದ ನೋಡಿ, ಕಿವಿಯಿಂದ ಕೇಳಿ, ಆತ್ಮವೆಂಬ ಪ್ರಯೋಗಶಾಲೆಯಲ್ಲಿ ಪರೀಕ್ಷಿಸಿ ದೃಢಪಡಿಸಿಕೊಂಡು, ಭಿನ್ನ ಭಿನ್ನವಾದ ದೃಷ್ಟಿ ಕಲ್ಪನೆಗಳಿಗೆ ಗೋಚರಿಸಿದ ಏಕ ಸತ್ಯದ ಹಲವು ತತ್ವ–ಸಿದ್ಧಾಂತಗಳು ಈ ಉಪ ನಿಷತ್ತುಗಳಲ್ಲಿವೆ. ವೇದಗಳ ಕೊನೆಯ ಅಥವಾ ಅಂತ್ಯ ಭಾಗವಾದ ಈ ಉಪ ನಿಷತ್ತುಗಳಲ್ಲಿ ಮುಖ್ಯವಾದ ಬ್ರಹ್ಮ ವಿಷಯದ ಜ್ಞಾನವು ವಿವರಿಸಲ್ಪಟ್ಟಿರುವುದರಿಂದ ಇವಕ್ಕೆ **ವೇದಾಂತ** ಎಂಬ ಹೆಸರು ಬಂದಿತು. ಉಪನಿಷತ್ತುಗಳಲ್ಲಿ ಅಡಗಿರುವ ಈಶ್ವರ, ಜೀವ, ಪ್ರಪಂಚ ಈ ಮೂರರ ತತ್ತ್ವ ಮತ್ತು ಪರಸ್ಪರ ಸಂಬಂಧಗಳನ್ನು ಬೋಧಿಸುವುದೇ ವೇದಾಂತದ ಉದ್ದೇಶವಾಗಿದೆ.

ನಮ್ಮ ಪೂರ್ವಾಚಾರ್ಯರುಗಳು ಉಪನಿಷತ್ತುಗಳ ಅರ್ಥಗಳನ್ನು ಬಹು ಚೆನ್ನಾಗಿ ವಿವರಿಸಿದ್ದಾರೆ. ಇದರಲ್ಲಿರುವ ವಿಚಾರಗಳು ಗಹನ, ರಹಸ್ಯ ಆಗಿದ್ದು, ಅತಿ ಸಮೀಪ ದಲ್ಲಿ ಕುಳಿತು ಗುರುಗಳಿಂದ ಶಿಷ್ಯರಿಗೆ ಪರಂಪರೆಯಾಗಿ ಕೇಳಿ ತಿಳಿದು ಆಚರಣೆಗೆ ಬಂದಿ ರುವುದರಿಂದ ಇದಕ್ಕೆ ಶ್ರುತಿ ಎಂದೂ ಹೆಸರು ಬಂದಿತು. ಪರಮಾತ್ಮ–ಜೀವಾತ್ಮ

ಎಂದು ಎರಡು ವಿಧವಾಗಿರುವ ಆತ್ಮ ಸ್ವರೂಪದ ವಿವೇಚನೆಗೆ ಶ್ರುತಿಯು ಪರಮ ಪ್ರಮಾಣವಾಗಿದೆ. ಮರ್ತ್ಯಲೋಕದಿಂದ ಅಮೃತತ್ವವಿರುವ ಸ್ವರ್ಗಲೋಕಕ್ಕೆ ಹೋಗಲು ಮಾನವನು ನಿರ್ಮಿಸಿದ ಏಣಿಯಂತಿರುವ ಉಪನಿಷತ್ತುಗಳು ಹಿಂದೂಗಳ ದರ್ಶನ-ಸಿದ್ಧಾಂತ-ತತ್ತ್ವಗಳಿಗೆಲ್ಲ ತಳಹದಿ ಹಾಗೂ ಕೈಮರ ಆಗಿ ಉಳಿದು ಬಂದಿವೆ.

ಹೀಗೆ ವೇದಾಂತವೆಂದು ಹೆಸರು ಪಡೆದ ಉಪನಿಷತ್ತುಗಳಲ್ಲಿ ವಿಚಾರವೇ ಪ್ರಧಾನ ವಾಗಿ, ಸ್ತುತಿ ಪ್ರಾರ್ಥನೆಗಳು ಕಡಮೆಯಾಗಿವೆ. ಆದರೆ ಪರಮ ಪ್ರಮಾಣವಾದ ಈ ಶ್ರುತಿಯಲ್ಲಿಯೂ ಕೆಲವು ಕಡೆ ಭೇದ, ಕೆಲವು ಕಡೆ ಅಭೇದ ಕಾಣಬರುತ್ತದೆ ಯಾದುದರಿಂದ ಪರಮಾತ್ಮ-ಜೀವಾತ್ಮ ಸ್ವರೂಪದಲ್ಲಿ ಪರಸ್ಪರ ಸಮನ್ವಯವನ್ನು ಸಾಧಿಸುವುದು ಸಾಮಾನ್ಯ ಜನರಿಗೆ ಸಾಧ್ಯವಾಗಲಿಲ್ಲ. ಇಲ್ಲಿ ಹೇಳಲ್ಪಟ್ಟ ಪುರುಷಾರ್ಥ ಜ್ಞಾನದಿಂದಲೇ ಮೋಕ್ಷಪ್ರಾಪ್ತಿಯಾದರೂ, ಅರ್ಥಜ್ಞಾನದಲ್ಲಿ ವ್ಯತ್ಯಾಸವೇರ್ಪಟ್ಟರೆ ಆತ್ಮನು ಸಂಸಾರವನ್ನು ತ್ಯಜಿಸಿ ಹೋಗಲಾರನು ಹಾಗೂ ಮೋಕ್ಷವು ಸಿದ್ಧಿಸಲಾರದು. ಆದುದರಿಂದ ಈ ಉಪನಿಷತ್ತುಗಳ ಅರ್ಥಜ್ಞಾನವನ್ನು ನಿರ್ಣಯಿಸಿ ಕೊಡುವುದು ಅವಶ್ಯವಾಯಿತು. ಇದನ್ನು ಆಗಮಾಡಿಸಲು ಭಗವಾನ್ ವ್ಯಾಸರು ಅಥವಾ ಬಾದ ರಾಯಣ ಮಹರ್ಷಿಗಳು **ವೇದಾಂತಸೂತ್ರ** ಅಥವಾ **ಬ್ರಹ್ಮಸೂತ್ರ**ಗಳನ್ನು ರಚಿಸಿ ಮಹೋಪಕಾರ ಮಾಡಿದ್ದಾರೆ. ಇವು ಸಂಸ್ಕೃತ ಭಾಷೆಯಲ್ಲಿರುವ ಅಮೂಲ್ಯ ಸಾಹಿತ್ಯ ವೆನಿಸಿವೆ.

ಉಪನಿಷತ್ತಿನಲ್ಲಿ ಬರುವ ಮುಖ್ಯವಾದ ವಾಕ್ಯಗಳನ್ನು ಸಯುಕ್ತಿಕವಾಗಿ ವಿವರಿಸುವುದರಿಂದ ಬ್ರಹ್ಮಸೂತ್ರವು ಉಪನಿಷದ್ಭಾಷ್ಯ ಎನಿಸಿಕೊಂಡಿದೆ. ಉಪನಿಷತ್ತು ಲಕ್ಷ್ಯ ಗ್ರಂಥವಾದರೆ ಬ್ರಹ್ಮಸೂತ್ರವು ಲಕ್ಷಣ ಗ್ರಂಥ. ಬ್ರಹ್ಮಸೂತ್ರವೇ ಅಲ್ಲದೆ ಷಡ್ದರ್ಶನ ಮತ್ತು ಭಗವದ್ಗೀತೆಗಳಿಗೂ ಉಪನಿಷತ್ತುಗಳೇ ಮೂಲಾಧಾರವಾಗಿವೆ. ವೇದಾಂತಮತವನ್ನು ಪರಿಷ್ಕರಿಸಿದ ಶಂಕರ, ರಾಮಾನುಜ, ಮಧ್ವ ಎಂಬೀ ಮೂವರು ಆಚಾರ್ಯರೂ ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ ಎಂಬ ಪ್ರಸ್ಥಾನತ್ರಯಕ್ಕೆ **ವ್ಯಾಖ್ಯಾನ**ವನ್ನು ರಚಿಸಿ, ತಮ್ಮತಮ್ಮ ಅಭಿಪ್ರಾಯ ಅಥವಾ ಮತವನ್ನು ಸ್ಪಷ್ಟಪಡಿಸಿರುತ್ತಾರೆ. ಶಂಕರಾಚಾರ್ಯರು ಮತ್ತು ಅದ್ವೈತಿಗಳು ನಿಷ್ಪ್ರಪಂಚ ಬ್ರಹ್ಮವಾದ ಅಥವಾ ನಿರ್ಗುಣವಾದವನ್ನು ಪೋಷಿಸಿದರು ; ರಾಮಾನು ಜರು ಮತ್ತು ವಿಶಿಷ್ಟಾದ್ವೈತಿಗಳು ಹಾಗೂ ಮಧ್ವರು ಮತ್ತು ದ್ವೈತಿಗಳು ಸಪ್ರಪಂಚಬ್ರಹ್ಮವಾದ ಅಥವಾ ಸಗುಣವಾದವನ್ನು ಪೋಷಿಸಿದರು. ಮುಖ್ಯವಾಗಿ ವೇದಾಂತಿಗಳೆಲ್ಲರೂ ಇವುಗಳನ್ನು ಪ್ರಮಾಣಗ್ರಂಥವೆಂದು ಒಪ್ಪಿಕೊಂಡಿರುವುದು ಸಂತಸದ ವಿಷಯವಾಗಿದೆ.

ನಾವು ಉಪಯೋಗಿಸುವ ಇಂದ್ರಿಯಜ್ಞಾನ ಅಥವಾ ಪ್ರಮಾಣವನ್ನು ಮುಖ್ಯ ವಾಗಿ ಅನುಮಾನದಿಂದ ಶೋಧನೆಮಾಡಿ, ಅವುಗಳ ಸಹಾಯದಿಂದ ಪರತತ್ತ್ವ

ಅಥವಾ ಪ್ರಪಂಚದ ಪರಿಚಯವನ್ನು ಮಾಡಿಕೊಳ್ಳುವ ರೀತಿಯನ್ನು **ದರ್ಶನ** ಎನ್ನಬಹುದು. ದರ್ಶನವೆಂದರೆ ವಿಮರ್ಶಾತ್ಮಕ ದೃಷ್ಟಿ, ನೋಟ, ಅಭಿಪ್ರಾಯ, ಸಿದ್ಧಾಂತ ಎಂಬ ನಾನಾ ಅರ್ಥಗಳುಂಟು. ದಾರ್ಶನಿಕರು ಏರ್ಪಡಿಸಿದ ಹೆದ್ದಾರಿಗಳಲ್ಲಿ ಅವರ ಅನುಯಾಯಿಗಳು ಅಥವಾ ಪ್ರಮಾತಾಗಳು ಸಂಚರಿಸಿ, ಮಾರ್ಗಗಳನ್ನು ಪರಿಷ್ಕರಿಸಿ ತತ್ತ್ವಜ್ಞಾನವು ಚೆನ್ನಾಗಿ ಪ್ರಕಾಶಿಸುವಂತೆ ಮಾಡಿದ್ದಾರೆ. ನ್ಯಾಯ–ವೈಶೇಷಿಕ, ಸಾಂಖ್ಯ–ಯೋಗ, ಪೂರ್ವಮೀಮಾಂಸೆ–ಉತ್ತರಮೀಮಾಂಸೆ, ಇವು ವೇದಗಳನ್ನು ಅವಲಂಬಿಸಿ ಹೊರಟ, ಮೂರುಗುಂಪಾಗಿ ಕರೆಸಿಕೊಳ್ಳುವ ಷಡ್ದರ್ಶನಗಳು.

ಒದಗಿರುವ ದುಃಖಗಳನ್ನು ದೂರಮಾಡಿ, ಸ್ಥಿರವಾದ ಸುಖವನ್ನು ಗಳಿಸಲು ನಾವು ತಿಳಿಯಬೇಕಾದ ಸತ್ಯ ಅಥವಾ ವಸ್ತುವೇ **ತತ್ತ್ವ**; ಅದನ್ನು ತಿಳಿದುಕೊಂಡು ಪಡೆಯಬೇಕಾದ ಫಲವೇ **ಪುರುಷಾರ್ಥ**; ಈ ಫಲವನ್ನು ಪಡೆಯಲು ಅನುಷ್ಠಿಸಬೇಕಾದ ಮಾರ್ಗ, ಉಪಾಯ, ಸಾಧನಗಳೇ **ಹಿತ.** ತತ್ತ್ವವು ಬುದ್ಧಿಶಕ್ತಿಗೆ, ಹಿತವು ಭಾವಶಕ್ತಿಗೆ, ಪುರುಷಾರ್ಥವು ಇಚ್ಛಾ ಅಥವಾ ಕ್ರಿಯಾಶಕ್ತಿಗೆ ಅನ್ವಯಿಸುವಂತಹುದು. ಆಸೆಗೆ ಕಾರಣವಾದ ತತ್ತ್ವವು ಆಮೇಲೆ ಕ್ರಿಯೆಗೆ ಕಾರಣವಾಗುತ್ತದೆ. ಹೀಗೆ ಪ್ರತಿಯೊಂದು ದರ್ಶನ–ಸಿದ್ಧಾಂತದಲ್ಲಿಯೂ ತತ್ತ್ವ, ಹಿತ, ಪುರುಷಾರ್ಥವೆಂಬ ಮೂರು ಭಾಗಗಳ ಬಗ್ಗೆಯೂ ವಿವರಣೆಯಿರುತ್ತದೆ.

ಈ ಪ್ರಪಂಚವನ್ನು ಶರೀರವಾಗಿ ಹೊಂದಿರುವ ಪರಮಾತ್ಮನನ್ನು ಕುರಿತು ಹೇಳಿರುವುದರಿಂದ ಶ್ರೀವೈಷ್ಣವಮತೀಯರ ಸಿದ್ಧಾಂತಕ್ಕೆ **ಶಾರೀರಕಶಾಸ್ತ್ರ** ಅಥವಾ **ವಿಶಿಷ್ಟಾದ್ವೈತ ವೇದಾಂತ**ವೆಂದು ಹೆಸರು ಬಂದಿದೆ. ಇದು ಅನಾದಿಯಾದ ವೈದಿಕ ದರ್ಶನವೆಂದು ಅನೇಕರು ಒಪ್ಪಿಕೊಂಡಿದ್ದಾರೆ. ಪ್ರಸ್ಥಾನತ್ರಯಗಳ ನಿಜವಾದ ಅರ್ಥವನ್ನು ಶ್ರುತಿ, ಸ್ಮೃತಿ, ಆಗಮ, ಪುರಾಣ, ಇತಿಹಾಸಗಳಿಗೆ ಅನುಗುಣವಾಗಿ ತಿಳಿಸುವ ಸಿದ್ಧಾಂತ ಇದೊಂದೇ ಎಂಬುದಾಗಿ ಖ್ಯಾತಿವೆತ್ತ ಪಾಶ್ಚಿಮಾತ್ಯ ವಿದ್ವಾಂಸರೂ ಅಭಿಪ್ರಾಯಪಟ್ಟಿರುತ್ತಾರೆ. ಪ್ರಾಪಂಚಿಕವಾದ ನಡವಳಿಕೆಗಳಿಗೂ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೂ ಹೆಚ್ಚು ಸಾಮರಸ್ಯವಿದೆ ಎಂದು ಅನೇಕ ದಾರ್ಶನಿಕರ ಅಭಿಪ್ರಾಯ. 'ವಸುಧೈವ ಕುಟುಂಬಕಂ', 'ಲೋಕಸೇವೆಯೇ ಈಶಸೇವೆ' ಎನ್ನುವ ಈ ಸಿದ್ಧಾಂತವನ್ನು ಸರಿಯಾಗಿ ತಿಳಿದು ಆಚರಿಸಿದರೆ ಮಾತ್ರ ಈ ಪ್ರಪಂಚದಲ್ಲಿ ಸುಖ ಶಾಂತಿ ಸಮಾಧಾನಗಳೇರ್ಪಟ್ಟು ಮಾನವ ಜನಾಂಗವು ಸುರಕ್ಷಿತವಾಗಿ ಬಾಳಲು ಸಾಧ್ಯ. ಆದುದರಿಂದ ಇದರ ಅರಿವು ಹಾಗೂ ಪ್ರಚಾರ ಬೇಗ ಆಗಬೇಕಾಗಿದೆ ಎಂಬುದು ಅನೇಕರ ಅಭಿಪ್ರಾಯ.

ವಿಶಿಷ್ಟಾದ್ವೈತ ತತ್ತ್ವವು ಸಂಸ್ಕೃತ ಭಾಷೆಯಲ್ಲಿರುವ ವೇದಗಳಿಂದ ಪ್ರಾರಂಭವಾಗುತ್ತದೆ. ಪುರುಷಸೂಕ್ತದಲ್ಲಿ ಹೇಳಿರುವಂತೆ ಪರಬ್ರಹ್ಮನು ತನಗೆ ಬೇಕೆನಿಸಿದಾಗ ಅಚಿತ್ ರೂಪದಲ್ಲಿ ವ್ಯಕ್ತವಾಗುತ್ತಾನೆ. ಈಶ, ಪ್ರಶ್ನ, ಕಠ, ಕೇನ, ಮುಂಡೂಕ, ಶ್ವೇತಾಶ್ವತಾರ ಉಪನಿಷತ್ತುಗಳಲ್ಲಿ ಸ್ವಲ್ಪವಾಗಿದ್ದರೂ ತೈತ್ತಿರೀಯ, ಛಾಂದೋಗ್ಯ,

ಬೃಹದಾರಣ್ಯಕ ಉಪನಿಷತ್ತುಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ತತ್ತ್ವಗಳೆಲ್ಲ ಸ್ಫುಟವಾಗಿ ಪ್ರತಿಪಾದಿತವಾಗಿವೆ. ಮನು, ಆಪಸ್ತಂಭ, ಯಾಜ್ಞವಲ್ಕ್ಯ ಸ್ಮೃತಿಗಳಲ್ಲಿ, ಪುರಾಣಗಳಲ್ಲಿ ರತ್ನವೆನಿಸಿದ ವಿಷ್ಣುಪುರಾಣದಲ್ಲಿ, ರಾಮಾಯಣ–ಮಹಾಭಾರತ ಕಾವ್ಯಗಳಲ್ಲಿ, ಪಾಂಚರಾತ್ರ ಆಗಮದಲ್ಲಿ ಸಹ ವಿಶಿಷ್ಟಾದ್ವೈತ ತತ್ತ್ವವು ವಿಶದವಾಗಿ ನಿರೂಪಿಸಲ್ಪಟ್ಟು ಆಚಾರ್ಯರುಗಳ ಅನುಷ್ಠಾನದಲ್ಲಿ ಪ್ರತಿಫಲಿಸಿದೆ.

ವಿಶಿಷ್ಟಾದ್ವೈತವು ಸಂಸ್ಕೃತಸಾಹಿತ್ಯವೇ ಅಲ್ಲದೆ ತಮಿಳಿನಲ್ಲಿರುವ ಆಳ್ವಾರುಗಳ ದಿವ್ಯ ಪ್ರಬಂಧದಿಂದಲೂ ಸ್ಫೂರ್ತಿ ಪಡೆದಿದೆ. ಏಕೆಂದರೆ ಸಂಸ್ಕೃತದ ವೇದ, ಉಪನಿಷತ್ತು, ಪುರಾಣ, ಇತಿಹಾಸಗಳಲ್ಲಿ ಬಂದಿರುವ ಭಾವನೆಗಳೆಲ್ಲವೂ ತಮಿಳಿನಲ್ಲಿರುವ ಆಳ್ವಾರುಗಳ ಪ್ರಬಂಧವೆಂಬ ಗೀತಾತ್ಮಕ ಕೃತಿಗಳಲ್ಲಿ ಅಡಗಿವೆ. ಅಲ್ಲದೆ ಸಂಸ್ಕೃತ ವೇದಾಂತಸಾಹಿತ್ಯವು ಹೇಳದೆ ಬಿಟ್ಟಿರುವ ಅನೇಕ ಸಮಸ್ಯೆಗಳ ಪರಿಹಾರವು ಆಳ್ವಾರುಗಳ ತಮಿಳು ಪ್ರಬಂಧಗಳಲ್ಲಿ ಕಾಣಬರುತ್ತವೆ ಎಂಬುದು ವೇದಾಂತದೇಶಿಕರ ಅಭಿಪ್ರಾಯ. ಈ ಕಾರಣದಿಂದ ತತ್ತ್ವವು ದ್ರಾವಿಡ ವೇದಾಂತದಿಂದ ಮತ್ತಷ್ಟು ವಿಶದವಾಗಿ ತಿಳಿಯುತ್ತದೆ ಎಂಬುದರಲ್ಲಿ ಸ್ವಲ್ಪವೂ ಸಂದೇಹವಿರುವುದಿಲ್ಲ.

ಭಗವಾನ್ ವ್ಯಾಸಮಹರ್ಷಿಗಳು ರಚಿಸಿದ ಬ್ರಹ್ಮಸೂತ್ರಗಳಿಗೆ ಶಂಕರಾಚಾರ್ಯರಿಗಿಂತಲೂ ಹಿಂದೆ ಇದ್ದ ವ್ಯಾಸರ ಪ್ರಿಯಶಿಷ್ಯರಾದ **ಬೋಧಾಯನ** ಮಹರ್ಷಿಗಳು, ತಮ್ಮ ಗುರುಗಳ ಅಭಿಪ್ರಾಯಕ್ಕೆ ಅನುಸಾರವಾಗಿ ವಿಶಿಷ್ಟಾದ್ವೈತಪರವಾದ **ವೃತ್ತಿ** ಎಂದು ವ್ಯವಹರಿಸಲ್ಪಡುವ ವಿಸ್ತೀರ್ಣವಾದ ವ್ಯಾಖ್ಯಾನಗ್ರಂಥವನ್ನು ಬರೆದಿದ್ದಾರೆ. ಅಲ್ಲದೆ ಉಪನಿಷತ್ತು ಹಾಗೂ ಭಗವದ್ಗೀತೆಗಳಿಗೂ ಭಾಷ್ಯವನ್ನು ರಚಿಸಿದ್ದಾರೆ. ಆಮೇಲೆ ಆಚಾರ್ಯ ಬ್ರಹ್ಮನಂದಿ ಅಥವಾ **ಟಂಕ**ರು **ವಾಕ್ಯ**ವೆಂಬ ಗ್ರಂಥರೂಪವಾದ ಸಂಗ್ರಹವ್ಯಾಖ್ಯಾನವನ್ನು ಸೂತ್ರಚ್ಛಾಯೆಯಿಂದಲೇ ರಚಿಸಿದರು. **ದ್ರಮಿಡಾಚಾರ್ಯ**ರೆಂದು ವಿಖ್ಯಾತರಾದ ನೈಧ್ರುವಮಾಡಪೂಶಿಆಳ್ವಾನ್ ಎಂಬುವರು ಭಾಷ್ಯವನ್ನು ಸಂಗ್ರಹವಾಗಿ ಬರೆದರು. **ಗುಹದೇವ, ಭಾರುಚಿ, ಕಪರ್ದಿ**ಗಳ ವ್ಯಾಖ್ಯಾನ, **ನಾಥಮುನಿ**ಗಳ ನ್ಯಾಯತತ್ತ್ವ, **ಯಾಮುನಾಚಾರ್ಯ**ರ ಸಿದ್ಧಿತ್ರಯ, ಆಗಮಪ್ರಾಮಾಣ್ಯ ಇವುಗಳಲ್ಲೂ ಈ ಭಾವನೆಗಳು ನಿರೂಪಿತವಾಗಿವೆ.

"ಭಗವದ್ಬೋಧಾಯನ ಟಂಕದ್ರಮಿಡಗುಹದೇವಕಪರ್ದಿಭಾರುಚಿ ಪ್ರಭೃತ್ಯವಿಗೀತ ಶಿಷ್ಟ ಪರಿಗೃಹೀತ ಪುರಾತನ ವೇದ ವೇದಾಂತ ವ್ಯಾಖ್ಯಾನ ಸುವ್ಯಕ್ತಾರ್ಥ ಶ್ರುತಿನಿಕರದರ್ಶಿತೋಽಯಂ ಪಂಥಾಃ" ಎಂಬಂತೆ ಬೋಧಾಯನರವೃತ್ತಿ, ಟಂಕರ ವಾಕ್ಯ, ದ್ರಮಿಡರ ಭಾಷ್ಯ, ನಾಥಮುನಿ ಮತ್ತು ಯಾಮುನ ಮುನಿ ಇವರ ಗ್ರಂಥಗಳು ಇವೆಲ್ಲವನ್ನೂ ಆಧಾರವಾಗಿ ಇಟ್ಟುಕೊಂಡು, ಅವುಗಳಲ್ಲಿನ ಪಂಕ್ತಿಗಳನ್ನು ಪ್ರಮಾಣೀಕರಿಸಿ, ಬ್ರಹ್ಮಸೂತ್ರಗಳಿಗೆ ಆಚಾರ್ಯ ರಾಮಾನುಜರು ಬರೆದ **ಶ್ರೀಭಾಷ್ಯ** ಹಾಗೂ ಅದಕ್ಕೆ ಸುದರ್ಶನ ಸೂರಿಗಳು ರಚಿಸಿದ **ಶ್ರುತಪ್ರಕಾಶಿಕೆ** ಈಗ ಹೆಚ್ಚು

ಪ್ರಚಾರದಲ್ಲಿರುವ ವಿಶಿಷ್ಟಾದ್ವೈತ ಗ್ರಂಥಗಳು. ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಆಧಾರ ವಾಗಿದ್ದು, ವಾದರೂಪದಲ್ಲಿರುವ ಶ್ರೀಭಾಷ್ಯವು ಶಾಸ್ತ್ರಜ್ಞರಿಗೆ ಮಾತ್ರ ತಿಳಿಯು ವುದರಿಂದ, ಸಾಮಾನ್ಯರಿಗಾಗಿ ಈ ವಿಷಯವನ್ನು ಕುರಿತು ರಾಮಾನುಜರು ತಮ್ಮ ಗದ್ಯತ್ರಯದಲ್ಲಿ ಸ್ಪಷ್ಟವಾಗಿ ನಿರೂಪಣೆ ಮಾಡಿದ್ದಾರೆ.

ರಾಮಾನುಜರು ಪರಂಪರಾಪ್ರಾಪ್ತವಾದ ಮತವನ್ನು ಪ್ರಚಾರ ಮಾಡಿದರೇ ಹೊರತು, ಸ್ವತಂತ್ರವಾಗಿ ನೂತನ ಮತವೊಂದನ್ನು ಸೃಷ್ಟಿಸಲಿಲ್ಲವೆಂಬುದನ್ನು ವೇದಾಂತ ದೇಶಿಕರು ಸಮರ್ಥಿಸಿದ್ದಾರೆ. ಆದರೆ ರಾಮಾನುಜರು ತಮಗಿಂತ ಮೊದಲು ಪ್ರಚಾರದಲ್ಲಿದ್ದ ಒಂದು ವಿಧವಾದ ಸಂಪ್ರದಾಯವನ್ನು ಯಾಮುನರ ಇಚ್ಛೆಯಂತೆ ಶಾಸ್ತ್ರ ಅಥವಾ ಸಿದ್ಧಾಂತದ ಮಟ್ಟಕ್ಕೆ ಏರಿಸಿ, ಅದಕ್ಕೆ ಗಣ್ಯವಾದ ಸ್ಥಾನವನ್ನು ಸಂಪಾದಿಸಿಕೊಟ್ಟದ್ದು ನಿಜ. ಹೀಗೆ ಸಂಪ್ರದಾಯ ಸಿದ್ಧವಾದ ವಿಷಯಗಳನ್ನು ಸ್ವಬುದ್ಧಿಯಿಂದ ಪರಿಷ್ಕರಿಸಿ, ಶಾಸ್ತ್ರರೂಪವಾಗಿ ಸ್ಥಾಪಿಸಿದುದಲ್ಲದೆ, ಇದರ ರಹಸ್ಯ ವನ್ನು ಜನರಿಗೆ ತಿಳಿಯುವಂತೆ ಪ್ರಚಾರಪಡಿಸುವ ಕಾರ್ಯದಲ್ಲಿಯೂ ತುಂಬಾ ಶ್ರದ್ಧೆ ಯನ್ನು ವಹಿಸಿದರು.

ಹೀಗೆ ವೇದ, ಉಪನಿಷತ್ತು, ಪುರಾಣ, ಆಗಮ, ಕಾವ್ಯ, ಇತಿಹಾಸಗಳಿಗೆಲ್ಲ ಸಮಾನವಾದ ಪ್ರಾಶಸ್ತ್ಯವನ್ನಿತ್ತು, ಯಾವ ವೇದವಾಕ್ಯವನ್ನೂ ಅಮುಖ್ಯವೆಂದು ಕಡೆಗಣಿಸದೆ, ಎಲ್ಲವನ್ನೂ ಮುಖ್ಯವೆಂದೇ ಅಂಗೀಕರಿಸಿ, ಅವುಗಳಲ್ಲಿ ಅಲ್ಲಲ್ಲಿ ಕಾಣುವ ಭೇದ-ಅಭೇದ ಅಥವಾ ವಿರೋಧೋಕ್ತಿಗಳಿಗೆ ಸುಂದರವಾಗಿ ಹೊಂದಿಕೊಳ್ಳುವ ಅರ್ಥವನ್ನೂ ಹಾಗೂ ಸಮಂಜಸವಾದ ವಿವರಣೆಯನ್ನೂ ನೀಡಿ, ಯಾವ ವಿಧವಾದ ಸಂದೇಹ–ಅನುಮಾನಗಳಿಗೂ ಎಡೆಯಿಲ್ಲದಂತೆ ಸ್ಥಾಪಿತವಾಗಿರುವ ಈ ಸಗುಣ ವಿಶಿಷ್ಟಾದ್ವೈತ ಅಥವಾ ಸವಿಶೇಷಾದ್ವೈತವು ಅತ್ಯುತ್ತಮವಾಗಿದೆ.

ಅಭೇದಶ್ರುತಿಗಳಿಂದ ಅದ್ವೈತ ಹುಟ್ಟಿತು; ಭೇದಶ್ರುತಿಗಳನ್ನು ದ್ವೈತವು ಮೆಚ್ಚಿತು. ಭೇದಶ್ರುತಿಗೆ ಅದ್ವೈತವೂ, ಅಭೇದಶ್ರುತಿಗೆ ದ್ವೈತವೂ ಸಮಾಧಾನ ಹೇಳಲಾರದೆ ಹೋದುವು. ಆದರೆ ರಾಮಾನುಜರು ಭೇದ, ಅಭೇದ, ಘಟಕ ಎಂದು ಮೂರು ವಿಭಾಗ ಮಾಡಿ ಸಮಂಜಸಮಾಡಿದರು. ತತ್ತ್ವತ್ರಯವು ಬೇರೆಬೇರೆಯಾಗಿ ರುವುದರಿಂದ ಭೇದವನ್ನು ಒಪ್ಪಿಕೊಂಡಂತಾಯಿತು; ಪ್ರಪಂಚಕ್ಕೂ ಬ್ರಹ್ಮನಿಗೂ ಶರೀರಾತ್ಮಭಾವವೆಂಬ ಸಂಬಂಧವಿರುವುದರಿಂದಲೂ, ಶರೀರ-ಆತ್ಮ ಎರಡೂ ಒಂದೇ ಎಂದು ಹೇಳುವ ವೈದಿಕ ಲೌಕಿಕ ರೂಢಿ ಇರುವುದರಿಂದಲೂ, ಅಭೇದವನ್ನು ಒಪ್ಪಿ ಕೊಂಡಂತಾಯಿತು. ಒಂದು ಬಗೆಯಲ್ಲಿ ಭೇದವನ್ನೂ, ಮತ್ತೊಂದು ಬಗೆಯಲ್ಲಿ ಅಭೇದವನ್ನೂ ಹೇಳುವುದರಿಂದ ಭೇದಾಭೇದವನ್ನೂ ಒಪ್ಪಿಕೊಂಡಂತಾಯಿತು. ಹೀಗೆ ಸಹಜವಾಗಿ ಅದ್ವೈತಾರ್ಥವನ್ನು ಕೊಡುವ ವೇದೋಕ್ತಿ ಅಥವಾ ಶ್ರುತಿವಚನ ಗಳನ್ನೂ ಮತ್ತು ಶಬ್ದಾರ್ಥಾನುಸಾರ ದ್ವೈತಾರ್ಥವನ್ನು ಕೊಡುವ ಶ್ರುತಿವಚನ

ಗಳನ್ನೂ ಒಪ್ಪಿಕೊಂಡು, ಈ ದ್ವೈತಾದ್ವೈತ ಶ್ರುತಿವಚನಗಳಿಂದ ಅಭಿವ್ಯಕ್ತವಾದ ಪರಬ್ರಹ್ಮ ತತ್ತ್ವವನ್ನು ಉಪನಿಷತ್ತುಗಳ ತತ್ತ್ವಗಳೊಂದಿಗೆ ಸಮಂಜಸ, ಸಾಮರಸ್ಯ ಆಗಿರುವಂತೆ ಅರ್ಥಪ್ರಕಾಶಗೊಳಿಸಿ, ಘಟಕ ಶ್ರುತಿವಚನಗಳ ಮೂಲಕ ಪರಸ್ಪರ ವಿರೋಧವೆಂದು ತೋರುವ ವೇದಭಾಗವನ್ನು ಇದರಲ್ಲಿ ಸಮನ್ವಯಗೊಳಿಸಲಾಗಿದೆ.

ಇತರ ದರ್ಶನಗಳಂತೆಯೇ ಈ ವಿಶಿಷ್ಟಾದ್ವೈತ ಸಿದ್ಧಾಂತವಲ್ಲಿಯೂ ಪರಬ್ರಹ್ಮನು ಸತ್ಯ, ಪರಿಪೂರ್ಣ, ಸರ್ವಜ್ಞ, ಸರ್ವಶಕ್ತ, ಸರ್ವವ್ಯಾಪಿ ಆಗಿದ್ದಾನೆ. ಆದರೆ ಇದರಲ್ಲಿನ ಪರಬ್ರಹ್ಮನು ಅಂದರೆ ಶ್ರೀಮನ್ನಾರಾಯಣನು ಸತ್ಯ, ಸೌಶೀಲ್ಯ, ಸೌಂದರ್ಯಗಳಿಂದ ಕೂಡಿದ ಸಗುಣಬ್ರಹ್ಮನೆನಿಸಿದ್ದಾನೆ. ಪರಸ್ಪರ ಭಿನ್ನವಾದ ಜೀವ-ಜಗತ್ತುಗಳೆರಡೂ ಅವುಗಳಿಂದ ಬೇರೆಯಾಗಿ ಇರುವ ಕರುಣಾಮಯಿ ನಾರಾಯಣನ ದೇಹ ಮತ್ತು ಪ್ರಕಾರಗಳು ಹಾಗೂ ಅವನಿಗೆ ಸಂಬಂಧಿಸಿದ ಗುಣಗಳು ಆಗಿವೆ. ಅಂದರೆ ವಿಶಿಷ್ಟವಾದ ಪರಮಾತ್ಮ-ಪ್ರಕೃತಿ-ಪುರುಷರ ಸಂಬಂಧವು ಒಂದನ್ನೊಂದು ಎಡಬಿಡದ ಅಪೃಥಕ್ಸಂಬಂಧ.

ಪರಮ ದೇವತೆ ಎನಿಸಿದ ಶ್ರೀಮನ್ನಾರಾಯಣನಲ್ಲಿ ಅಚಲ ಭಕ್ತಿ ಮತ್ತು ಸಂಪೂರ್ಣ ಶರಣು ಭಾವ ಇರುವುದು ಅತ್ಯಾವಶ್ಯಕ. ತನ್ನ ದೇಹವಾದ ಈ ಪ್ರಪಂಚದ ಪ್ರಾಣಿಗಳಲ್ಲೆಲ್ಲ ಪರಮಾತ್ಮನಿಗೆ ಅಸಾಧಾರಣ ಪ್ರೀತಿಯಿದೆ. ಎಲ್ಲರೂ ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಅರ್ಹರು. ಏಕದೇಹಾವಯವ ನ್ಯಾಯದಂತೆ ಸಕಲ ಪ್ರಾಣಿಗಳೂ ಪರಸ್ಪರ ಅನುಕೂಲದಲ್ಲಿರಬೇಕು. ನಾರಾಯಣನನ್ನು ಮೂರ್ತಿರೂಪದಲ್ಲಿ ಆರಾಧಿಸಬೇಕು. ಆಗಮ, ಪುರಾಣ, ಕಾವ್ಯ, ಪ್ರಬಂಧಗಳೆಲ್ಲ ವೇದದಂತೆಯೇ ಪ್ರಮಾಣಗಳು—ಎಂಬೀ ನಂಬಿಕೆಗಳು ವಿಶಿಷ್ಟಾದ್ವೈತ ಸಿದ್ಧಾಂತದ ಮುಖ್ಯ ವೈಶಿಷ್ಟ ಹಾಗೂ ಶ್ರೇಷ್ಠತೆ ಆಗಿವೆ. ಪಾಶ್ಚಿಮಾತ್ಯ ವಿದ್ವಾಂಸರ ಆಹ್ವಾನಕ್ಕೆ ಸರಿಯಾಗಿ ಉತ್ತರಕೊಟ್ಟು ಭಾರತೀಯ ಆದರ್ಶ ಮತ್ತು ಭಾವನೆಗಳನ್ನು ನಿರೂಪಿಸಲು ವಿಶಿಷ್ಟಾದ್ವೈತ ವೇದಾಂತಕ್ಕೆ ಮಾತ್ರ ಸಾಧ್ಯ. ಇದು ತಾತ್ತ್ವಿಕವಾಗಿ, ನೈತಿಕವಾಗಿ, ಧಾರ್ಮಿಕವಾಗಿ ಸ್ಫೂರ್ತಿಯನ್ನು ನೀಡಿ ಉನ್ನತಿಗೆ ನೆರವಾಗುವಂತಹುದು. ಇದರಲ್ಲಿ ಭಾರತೀಯ ತಾತ್ತ್ವಿಕ ಮತ್ತು ಧಾರ್ಮಿಕ ಆಲೋಚನೆಯು ಸಿದ್ಧಿಸಿದೆ.

ವಿಶಿಷ್ಟಾದ್ವೈತ ಸಿದ್ಧಾಂತವನ್ನು ಅನುಸರಿಸುವವರ ಮುಖ್ಯ ಆರಾಧ್ಯ ದೇವತೆಯಾದ ಶ್ರೀಮಹಾವಿಷ್ಣುವು ಅಥವಾ ನಾರಾಯಣನು ಸರ್ವಕಾಲದಲ್ಲಿಯೂ ದೈವಕೃಪೆಯ ಪ್ರತೀಕವೂ, ಕ್ಷಮಾದೇವತೆಯೂ ಆದ ತನ್ನ ಕಾಂತೆಯಾದ ಶ್ರೀ ಅಥವಾ ಮಹಾಲಕ್ಷ್ಮಿಯೊಡನೆ ಕೂಡಿಯೇ ಜಗದ್ವ್ಯಾಪಾರಗಳನ್ನು ನಡೆಸುತ್ತಾನೆ ಎಂದು ನಂಬಲಾಗಿದೆ. ಯಾಮುನರಿಗೆ ಮುಂಚೆ ವಿಷ್ಣುವಿನ ಭಕ್ತರು ತಮ್ಮನ್ನು 'ಎಂಬೆರುಮಾನ್ ಅಡಿಯಾರ್' ಅಂದರೆ ವೈಷ್ಣವರು ಎಂದು ಕರೆದುಕೊಳ್ಳುತ್ತಿದ್ದರು ನಾರಾಯಣ, ಲಕ್ಷ್ಮಿ ಎರಡೂ ಕೂಡಿ ಒಂದೇ ತತ್ತ್ವ, ಇಬ್ಬರನ್ನೂ ಒಟ್ಟಿಗೇ

ಪ್ರೋಜಿಸಬೇಕು ಎಂದು ಯಾಮುನರು ಹೇಳಿದುದರಿಂದ ಅವರು ತಮ್ಮನ್ನು ಶ್ರೀವೈಷ್ಣವರು ಎಂದು ಕರೆದುಕೊಂಡು ತಮ್ಮದನ್ನು **ಶ್ರೀವೈಷ್ಣವ ಮತ** ಎಂದು ಕರೆದುಕೊಂಡರು. ಈ ಮತದಲ್ಲಿ ನಾಥಮುನಿ, ಯಾಮುನ ಮುನಿ, ರಾಮಾನುಜ ಮುನಿ ಎಂಬ ಮುನಿತ್ರಯರ ಮಾತು, ಕೃತಿಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಗಿದೆ.

ಹೀಗೆ ವೇದವೇದಾಂತಪುರಾಣೇತಿಹಾಸಾಗಮ ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟು, ದ್ರಾವಿಡ ಪ್ರಬಂಧ ಹಾಗೂ ಅನುಭಾವಿಗಳ ಅನುಭವದಲ್ಲಿ ಗೋಚರವಾಗಿದ್ದ ಈ ವಿಶಿಷ್ಟಾದ್ವೈತ ಸಂಪ್ರದಾಯವನ್ನು ಆಚಾರ್ಯ ರಾಮಾನುಜರು ತಮ್ಮ ಗ್ರಂಥಗಳ ಮೂಲಕ ತಾರ್ಕಿಕವಾಗಿ ಸುವ್ಯವಸ್ಥಿತ ಸಿದ್ಧಾಂತ–ಶಾಸ್ತ್ರರೂಪದಲ್ಲಿ ಕ್ರೋಢೀಕರಿಸಿ, ಪ್ರತಿಪಾದಿಸಿ, ರಕ್ಷಿಸಿದುದಲ್ಲದೆ ಲೋಕದ ಸಮಸ್ತ ಜನಗಳಿಗೂ ಆತ್ಮೋದ್ಧಾರವಾಡಬೇಕೆಂದು ಶ್ರೀರಂಗನಾಥಸ್ವಾಮಿಯಲ್ಲಿ ಶರಣಾಗತಿ ಮಾಡಿ ವರವನ್ನು ಪಡೆದು, ಆಸೇತು ಹಿಮಾಚಲದವರೆಗಿನ ಭಾರತದಲ್ಲೆಲ್ಲ ಸಂಚರಿಸಿ ಪ್ರಚಾರಮಾಡಿ, ಅದು ನಿರಂತರವಾಗಿ ಮುಂದುವರೆಯಲು ಎಪ್ಪತ್ತನಾಲ್ಕು ಪೀಠಾಧಿಪತಿಗಳೆಂಬ ವಿದ್ವಾಂಸ ಶಿಷ್ಯರನ್ನು ನೇಮಿಸಿದರು. ಆದಕಾರಣ ವಿಶಿಷ್ಟಾದ್ವೈತಕ್ಕೆ 'ಎಂಬೆರುಮಾನಾರ್ ದರ್ಶನಂ' ಅಥವಾ **ರಾಮಾನುಜಸಿದ್ಧಾಂತ** ಎಂಬ ಹೆಸರೇ ಹೆಚ್ಚಾಗಿ ಬಳಕೆಯಲ್ಲಿದೆ.

ಪೂರ್ವಪಕ್ಷವಿಲ್ಲದೆ ಸಿದ್ಧಾಂತವಿಲ್ಲ ; ಸಿದ್ಧಾಂತವಲ್ಲದುದು ಮನನಶಾಸ್ತ್ರವೆನಿಸಲಾರದು ; ಮನನರಹಿತವಾದ ಪ್ರಮೇಯವು ದೃಢವಲ್ಲ; ದೃಢವಲ್ಲದ ಪ್ರಮೇಯದ ಜ್ಞಾನವು ಪ್ರಪಂಚದ ವ್ಯವಹಾರ ಮತ್ತು ಆತ್ಮ ಶ್ರೇಯಸ್ಸಿಗೆ ಉಪಯೋಗವಾಗಲಾರದು. ಪ್ರಾಮಾಣಿಕವೆಂಬುದಾಗಿ ಪರಿಗೃಹೀತವಾದ ಅರ್ಥವಾದುದರಿಂದ ಇದಕ್ಕೆ ಸಿದ್ಧಾಂತವೆಂದೂ, ಇದಕ್ಕೆ ಕಾರಣಕರ್ತರು ರಾಮಾನುಜರಾದುದರಿಂದ ಇದಕ್ಕೆ ರಾಮಾನುಜಸಿದ್ಧಾಂತವೆಂದೂ ಹೆಸರು ಬಂದಿದೆ. ಈ ಕಾರಣದಿಂದ ರಾಮಾನುಜರು ದರ್ಶನಸ್ಥಾಪನಾಚಾರ್ಯರೆಂದು ಪ್ರಸಿದ್ಧರಾದರು. ಈ ಸಿದ್ಧಾಂತಕ್ಕೆ ಸ್ಥಿರವಾದ ಸ್ಥಾನವು ಸಿಗುವಂತೆ ಶ್ರಮಿಸಿದುದರಿಂದ ವೇದಾಂತ ದೇಶಿಕರು ದರ್ಶನಪ್ರತಿಷ್ಠಾಪನಾಚಾರ್ಯರಾದರು.

ರಾಮಾನುಜರು ಕೇವಲ ಸಂಸ್ಕೃತದಲ್ಲಿರುವ ಪ್ರಸ್ಥಾನತ್ರಯ ಮುಂತಾದ ವೈದಿಕ ಪ್ರಮಾಣಗಳನ್ನೇ ಬಳಸಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸಂಗ್ರಹಿಸಿ, ಸಂಸ್ಕರಿಸಿ, ಸ್ಥಿರೀಕರಿಸಿ, ಪ್ರಚಾರಮಾಡಿದರು. ತಮಿಳಿನಲ್ಲಿದ್ದ ನಾಲಾಯಿರ ದಿವ್ಯ ಪ್ರಬಂಧಗಳ ಬಗ್ಗೆಯೂ ಅವರಿಗೆ ಅಪಾರ ಜ್ಞಾನ-ಪ್ರೇಮ–ಗೌರವಗಳು ಇದ್ದುವು. ಆದುದರಿಂದಲೇ ಅವುಗಳಿಗೆ ತಮ್ಮ ಅಂತಃಸ್ಫೂರ್ತಿಯಿಂದ ಅಪೂರ್ವವಾದ ಅರ್ಥ ವಿವರಣೆಯನ್ನು ನೀಡಿ ಅದಕ್ಕೆ ತಮ್ಮ ಜ್ಞಾನಪುತ್ರ–ಶಿಷ್ಯ ಪಿಳ್ಳಾನ್‌ರವರಿಂದ ಆರಾಯಿರಪ್ಪಡಿ ವ್ಯಾಖ್ಯಾನವನ್ನು ಬರೆಸಿ, ಅದಕ್ಕೂ ಪರಮ ಮಾನ್ಯತೆಯನ್ನು ನೀಡುವಂತೆ ಮಾಡಿದರು. ನಾರಾಯಣನೇ ಪರತತ್ತ್ವ, ಅವನ ಪಾದಾರವಿಂದಗಳಲ್ಲಿ ಶರಣಾ

ಗತಿ ಅಥವಾ ಪ್ರಪತ್ತಿಯನ್ನು ಮಾಡುವುದೇ ಹಿತ, ಅವನ ಕೈಂಕರ್ಯವೇ ಪರಮ ಪುರುಷಾರ್ಥ–ಎಂಬೀ ಅಭಿಪ್ರಾಯಗಳು ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಪ್ರಧಾನ ವಾಗಿ ಪ್ರತಿಪಾದಿಸಲ್ಪಡಲು ದ್ರಾವಿಡ ಪ್ರಬಂಧಗಳ ವಿಶಿಷ್ಟ ಕೊಡುಗೆಯೇ ಕಾರಣ ವೆಂಬುದು ನಿಜ. ವೇದ, ಪುರಾಣ, ಇತಿಹಾಸಗಳು ಸೇರಿ ಮಾಡುವ ಕಾರ್ಯವನ್ನು ಶಠಜಿದುಪನಿಷತ್ತು ಅಂದರೆ ನಮ್ಮಾಳ್ವಾರರ ತಿರುವಾಯ್ಮೊಳಿ ಪ್ರಬಂಧವು ಮಾಡುತ್ತದೆ ಎಂದು ವೇದಾಂತದೇಶಿಕರು ಹೇಳಿದ್ದಾರೆ. ಈ ಕಾರಣದಿಂದಲೇ ಮಿಕ್ಕ ಸಿದ್ಧಾಂತಗಳಿಗೆ ಪ್ರಸ್ಥಾನತ್ರಯವಿದ್ದರೆ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ **ಪ್ರಸ್ಥಾನಚತುಷ್ಟಯ** ವಿದೆ ಎಂದು ಹೇಳಬಹುದು. ಹೀಗೆ ಸಂಸ್ಕೃತ, ತಮಿಳು ಎರಡೂ ಸಾಹಿತ್ಯದಲ್ಲಿ ಆಧಾರ ಗ್ರಂಥಗಳನ್ನು ಪೊಂದಿರುವ ವಿಶಿಷ್ಟಾದ್ವೈತವು **ಉಭಯವೇದಾಂತ** ವೆನಿಸಿತು ; ಆಚಾರ್ಯ ರಾಮಾನುಜರಿಗೆ ಉಭಯ ವೇದಾಂತ ಸಿಂಹಾಸನಾಧಿಪತಿ ಎಂಬ ಬಿರುದೂ ದೊರಕುವಂತಾಯಿತು.

ಪರಮ ವೈದಿಕವಾದ ಹಾಗೂ ಸನಾತನವಾದ ಈ ಸಿದ್ಧಾಂತವನ್ನು ರಾಮಾ ನುಜರು ಪರಪಕ್ಷನಿರಾಕರಣ ಪೂರ್ವಕವಾಗಿ, ಸರ್ವಲೋಕಹಿತಾರ್ಥವಾಗಿ ಸ್ಥಾಪಿಸಿ ವಿಶೇಷ ಉಪಕಾರ ಮಾಡಿದ್ದಾರೆ. ಇದರ ಮೂಲಕ ಜಗತ್ತಿನಲ್ಲಿ ಎಲ್ಲ ಜೀವಿಗಳ ಉದ್ಧಾರಕ್ಕೆ ಸುಗಮ, ಸುಂದರ ಆದ ಹೆದ್ದಾರಿಯೊಂದನ್ನು ತೋರಿಸಿಕೊಟ್ಟಿದ್ದಾರೆ. ಆದಕಾರಣ ರಾಮಾನುಜರೇ ಈ ಸಿದ್ಧಾಂತದ ನಿಜವಾದ ಸ್ಥಾಪಕರು ಎಂದು ಹೇಳಿ ದರೂ ತಪ್ಪಾಗಲಾರದು. ಸರ್ವರಿಗೂ ಸುಲಭ, ಸರಳ, ಸುಖ, ಅನುಭವಸಿದ್ಧ ಆಗಿರುವ ಇದರಲ್ಲಿ ತತ್ತ್ವ, ಹಿತ, ಪುರುಷಾರ್ಥ ಈ ಮೂರೂ ಅಂಶಗಳ ಸುಂದರ ವಿವರಣೆ ಸಿಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

ಹಿರಿಯರು ರಚಿಸಿ ಹಾಡಿದ ಈ ಶ್ಲೋಕಗಳು ರಾಮಾನುಜ ಸಿದ್ಧಾಂತದ ಸಾರ ವನ್ನು ನೆನಪಿನಲ್ಲಿಡಲು ಸ್ವಲ್ಪಮಟ್ಟಿಗೆ ನೆರವನ್ನು ನೀಡಬಲ್ಲವು:

1. ಸ್ವ ಸಮಾಧಿಕ ಶೂನ್ಯತ್ವ ಚಿದಚಿತ್ಸದ್ಗುಣೈರಿದಂ ।
   ವಿಷ್ಣು ತತ್ತ್ವಂ ವಿಶಿಷ್ಟಂಯದ್ವಿಶಿಷ್ಟಾದ್ವೈತಮೇವತತ್ ॥
2. ಅಸ್ಯೋಚಿತಾಂ ಪರಮ ವೈದಿಕ ದರ್ಶನಸ್ಯ
   ರಾಮಾನುಜಾರ್ಯರಚಿತೋऽ ಪಕೃತಿಂ ಕೃತಜ್ಞಃ ॥
   ರಂಗೇಶ್ವರಃ ಪ್ರಕಟಯ ನ್ಪೃಥಯಾಂ ಬಭೂವ
   ರಾಮಾನುಜಸ್ಯಮತ ಮಿತ್ಯಭಿದಾನಮಸ್ಯ ॥
3. ಸರ್ವಶಬ್ದಾಭಿ ಧೇಯತ್ವಂ ಸರ್ವಕಾರಣತಾ ತಥಾ
   ಸರ್ವಶ್ರುತಿ ಸಮರ್ಥತ್ವಂ ದ್ವಯ ಮಂತ್ರಾರ್ಥನಿಷ್ಠತಾ ।
   ಪ್ರಪತ್ತೇಸ್ಸರ್ವ ಯೋಗ್ಯತ್ವಂ ಕೈಂಕರ್ಯ ಪುರುಷಾರ್ಥತಾ

ಮುಕ್ತಾವಾನಂದ ತುಲ್ಯತ್ವಂ ಯಥಾರ್ಥ ಖ್ಯಾತಿ ನಿಷ್ಠತಾ ||
ದಶೈತೇ ಪ್ರತಿತಂತ್ರಾರ್ಥಾಃ ವಿಶಿಷ್ಟಾದ್ವೈತಿನಾಂ ಮತಾಃ ||

4. ಸರ್ವೇವೇದಾಃ ಪ್ರಮಾಣಂ ತ್ರಿತಯಮನುಗುಣಂ ಸಾತ್ವಿಕಂ ಸಾರಶಾಸ್ತ್ರಂ
ಶ್ರೀಮನ್ನಾರಾಯಣಾಖ್ಯಂ ಚಿದಚಿದನುಗತಂ ಸದ್ಗುಣಂ ಶೇಷಿತತ್ತ್ವಂ ||
ಭಕ್ತಿರ್ಮುಕ್ತೇರುಪಾಯಃ ಪ್ರಪದನಮಪಿ ತತ್ಸರ್ವಸತ್ತಾವ್ಯಧಿ ಕಾರ್ಯಂ
ಮುಕ್ತಿರ್ಲೋಕೇ ಪರಸ್ಮಿನ್ ಪರಭಜನಮಿತಿ ಶ್ರೀಮತಂ ವೈಷ್ಣವಾನಾಂ ||

5. ಮಾರ್ಗೇ ರಾಮಾನುಜೀಯೇ ಸಕಲ ಚಿದಚಿದಶ್ಚಾಂಶಶೇಷಾಃ ಶರೀರಂ
ಶೇಷೀ ನಾರಾಯಣಸ್ಯಾನ್ನಿರವಧಿಗುಣಯುಗ್ಬ್ರಹ್ಮಲಕ್ಷ್ಮೀ ವಿಶಿಷ್ಟಃ ||
ಜೀವಾಬ್ರಹ್ಮಾಂಶಭೂತಾಃ ಪರಮಸಮತಯಾ ದಿವ್ಯ ವೈಕುಂಠಲೋಕೇ
ಮುಕ್ತಿ ರ್ಭಕ್ತ್ಯಾ ಪ್ರಪತ್ತ್ಯಾ ಭವತಿಚನಿಯತಂ ಜ್ಞಾನಕರ್ಮೋಽಭಯೇನ ||

6. ಶ್ರೀಮಲ್ಲಕ್ಷ್ಮಣ ಯೋಗಿನಸ್ತು ಭುವನಂ ಸತ್ಯಂತದೀಶಃ ಶ್ರಿಯಃ
ಕಾಂತೋ ಬ್ರಹ್ಮ ನಏವಸೋಽಖಿಲತನುಃ ಭಿನ್ನಾಸ್ತತಶ್ಚೇತನಾಃ||
ಸತ್ಯಾ ಸಂಸೃತಿರೀಶ ನಿಗ್ರಹಕೃತಾ ಮುಕ್ತಿಸ್ತು ಭಕ್ತ್ಯಾದಿನಾ
ತತ್ಪ್ರಾಪ್ತಿಃ ಪರಮೇ ಪದೇ ತದನುಭೂತ್ಯಾಖ್ಯೇತಿ ಸಂಚಕ್ಷತೇ ||

7 ಲಕ್ಷ್ಮೀನಾಥಾಖ್ಯ ಸಿಂಧೌ ಶಠರಿಪು ಜಲದಃ ಪ್ರಾಪ್ಯ ಕಾರುಣ್ಯ ನೀರಂ
ನಾಥಾದ್ರಾವಭ್ಯಷಿಂಚತ್ತಿದನು ರಘುವರಾಂಭೋಜ ಚಕ್ಷುರ್ಝರಾಭ್ಯಾಂ ||
ಗತ್ವಾತಾಂ ಯಾಮುನಾಖ್ಯಾಂ ಸರಿತಿಮಥಯತೀಂದ್ರಾಖ್ಯ ಪದ್ಮಾಕರೇಂದ್ರಂ
ಸಂಪೂರ್ಯಪ್ರಾಣಿಸಸ್ಯೇ ಪ್ರವಹತಿ ಸತತಂ ದೇಶಿಕೇಂದ್ರಭ್ರಮೌಘೈಃ ||

## ಅಧ್ಯಾಯ – ೨

# ಪುರುಷಾರ್ಥ ಸ್ವರೂಪ

ವಿಶಿಷ್ಟಾದ್ವೈತವನ್ನು ಅರಿತು ಅನುಷ್ಠಾನಮಾಡಿ ಫಲವನ್ನು ಪಡೆಯಬೇಕೆನ್ನು ವವರು ಅವಶ್ಯವಾಗಿ ತಿಳಿಯಬೇಕಾಗಿರುವ ಐದು ಮುಖ್ಯ ವಿಷಯಗಳಿಗೆ **ಅರ್ಥ ಪಂಚಕ** ವೆಂದು ಹೆಸರು.

ಪ್ರಾಪ್ಯಸ್ಯ ಬ್ರಹ್ಮಣೋ ರೂಪಂ ಪ್ರಾಪ್ತುಶ್ಚ ಪ್ರತ್ಯಗಾತ್ಮನಃ ।
ಪ್ರಾಪ್ತ್ಯುಪಾಯಂ ಫಲಂ ಪ್ರಾಪ್ತೇಸ್ತಥಾಪ್ರಾಪ್ತಿ ವಿರೋಧಿಚ ॥
ವದಂತಿ ಸಕಲಾವೇದಾಃ ಸೇತಿಹಾಸಃ ಪುರಾಣಕಾಃ ।
ಮುನಯಶ್ಚ ಮಹಾತ್ಮಾನೋ ವೇದ ವೇದಾಂತ ವೇದಿನಃ ॥

ಎಂಬಂತೆ ಪರಮಪ್ರಾಪ್ಯನಾದ ಬ್ರಹ್ಮನ ಸ್ವರೂಪ, ಪರಮಾತ್ಮನಿಗೆ ಶೇಷಭೂತನಾದ ಜೀವನ ಸ್ವರೂಪ, ಪರಮಾತ್ಮನ ಪ್ರಾಪ್ತಿಗೆ ಉಪಾಯ ಸ್ವರೂಪ, ಪರಮಾತ್ಮನನ್ನು ಹೊಂದಿ ಅನುಭವಿಸುವ ಫಲದ ಸ್ವರೂಪ, ಪರಮಾತ್ಮನ ಪ್ರಾಪ್ತಿಗೆ ಪ್ರತಿಬಂಧಕವಾಗಿ ರುವ ವಿರೋಧ ಸ್ವರೂಪ–ಇವು ಅರ್ಥಪಂಚಕವೆನಿಸುತ್ತದೆ.

ಜೀವನು ಸಾಧಿಸಬೇಕಾಗಿರುವ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪ್ರಯೋಜನಗಳೇ ಪುರುಷಾರ್ಥ ಅಥವಾ ಫಲ; ಅಭ್ಯುದಯ, ಮುಕ್ತಿಗಳಿಗೆ ಕಾರಣ ವಾದುದು ಧರ್ಮ; ಇಂದ್ರಿಯ ಸುಖಕ್ಕೆ ಬೇಕಾದ ಸಂಪತ್ತು ಅರ್ಥ; ಇಂದ್ರಿಯಸುಖಾ ನುಭವವು ಕಾಮ; ಜನನ ಮರಣ ಮುಂತಾದ ಎಲ್ಲ ಬಂಧನಗಳಿಂದಲೂ ಬಿಡುಗಡೆ ಯನ್ನು ಹೊಂದಿ ಸ್ವಸ್ವರೂಪದಲ್ಲಿ ಶಾಶ್ವತವಾದ ಪರಮಾನಂದವನ್ನು ಅನುಭವಿಸುವ ಸ್ಥಿತಿಯು ಮೋಕ್ಷ. ಪ್ರಕೃತಿ ವಿಯುಕ್ತನಾದ ಶುದ್ಧಾತ್ಮನಲ್ಲಿಯೇ ರಮಿಸುವುದು ಕೈವಲ್ಯ. ಆದರೆ ಪರಮಾತ್ಮನಿಗೆ ಸಹಜವಾದ ಕೈಂಕರ್ಯವನ್ನು ಮಾಡುತ್ತ ಬ್ರಹ್ಮಾ ನಂದವನ್ನು ಅನುಭವಿಸುವುದೇ ಸರ್ವೋತ್ತಮವಾದಂತಹ ಮೋಕ್ಷ ಸ್ಥಿತಿ. ಧರ್ಮ, ಮೋಕ್ಷಗಳಿಗೆ ವಿರೋಧವಿಲ್ಲದಂತೆ ಅರ್ಥ, ಕಾಮಗಳನ್ನು ಅನುಭವಿಸಲು ಎಲ್ಲರಿಗೂ ಅಧಿ ಕಾರವಿದೆ. ಆದರೆ ಪರಮೈಕಾಂತಿಯಾದ ಭಕ್ತನು ಭಗವಂತನ ಕೈಂಕರ್ಯ, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಬಿಟ್ಟು ಬೇರಾವ ಪ್ರಯೋಜನವನ್ನೂ ಬಯಸುವುದಿಲ್ಲ.

ಸ್ವಜ್ಞಾನಂ ಪ್ರಾಪಕ ಜ್ಞಾನಂ ಪ್ರಾಪ್ಯಜ್ಞಾನಂ ಮುಮುಕ್ಷುಭಿಃ ।
ಜ್ಞಾನತ್ರಯ ಮುಪಾದೇಯಂ ಏತದನ್ಯನ್ನಕಿಂಚನ ॥

ಎಂಬಂತೆ ಮುಮುಕ್ಷುವು ಅಂದರೆ ಕಾಮ, ಅರ್ಥ, ಧರ್ಮಗಳನ್ನು ಬಿಟ್ಟು ಪರಮ ಪುರುಷಾರ್ಥವಾದ ಮೋಕ್ಷವೇ ಬೇಕೆಂದು ಆಶಿಸುವವನು, ಅದು ನಿರ್ವಿಘ್ನವಾಗಿ,

ಶೀಘ್ರವಾಗಿ ಸಿದ್ಧಿಸುವುದಕ್ಕಾಗಿ ರಹಸ್ಯತ್ರಯಗಳನ್ನು ಅಂದರೆ ತತ್ತ್ವ, ಹಿತ, ಪುರುಷಾರ್ಥಗಳ ಸ್ವರೂಪಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಈ ತತ್ವತ್ರಯದ ಸಾರವನ್ನು ಮೂಲಮಂತ್ರ, ದ್ವಯಮಂತ್ರ, ಚರಮಶ್ಲೋಕಮಂತ್ರಗಳು ತಿಳಿಸುತ್ತವೆ ಎಂದು ಶಾಸ್ತ್ರದಲ್ಲಿ ಹೇಳಲಾಗಿದೆ.

ಪುರುಷಾರ್ಥವನ್ನು ಸಾಧಿಸಲು ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿಗಳು ಉಪಾಯಗಳು. ಇವೆಲ್ಲ ಒಂದಕ್ಕೊಂದು ಪೂರಕವಾದವುಗಳು.

ದೇಹಾತ್ಮಾಭಿಮಾನ, ಅಶ್ರದ್ಧೆ, ಉಪಾಯಾಂತರ ಸೇವನೆ, ಭಗವಂತನನ್ನು ಬಿಟ್ಟು ಇತರರನ್ನು ಆಶ್ರಯಿಸುವಿಕೆ, ಭಗವಂತನಲ್ಲಿ ಹಾಗೂ ಭಾಗವತರಲ್ಲಿ ಅಪಚಾರ, ಮುಂತಾದುವುಗಳು ಇದನ್ನು ಸಾಧಿಸುವಲ್ಲಿ ಪ್ರತಿಬಂಧಕವಾಗಿರುವ ಉಪಾಯ ವಿರೋಧಿಗಳು. ಇವು ಇರದಂತೆ ನೋಡಿಕೊಳ್ಳಬೇಕು.

ಭಾರತೀಯ ವೇದಾಂತದ ವಿಶಿಷ್ಟಾದ್ವೈತವು ಕೇವಲ ತತ್ತ್ವಶಾಸ್ತ್ರ, ಪ್ರಮಾಣ ಶಾಸ್ತ್ರವೇ ಅಲ್ಲದೆ ಪುರುಷಾರ್ಥ ಮತ್ತು ಸಾಧನಶಾಸ್ತ್ರವೂ ಆಗಿದೆ. ಹಿತ ಅಥವಾ ಸಾಧನಕ್ಕಿಂತ ಪುರುಷಾರ್ಥವೇ ಮುಖ್ಯವಾದುದು.

ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಹೊಂದಿ ದೀರ್ಘಕಾಲ ಬಾಳಿ ಬದುಕುವುದು, ಸ್ಪಷ್ಟವಾದ ಆಲೋಚನೆ ಮತ್ತು ಕಾರ್ಯದಕ್ಷತೆಯಿಂದ ಎಲ್ಲ ವ್ಯಕ್ತಿ–ವಸ್ತುಗಳ ಜ್ಞಾನವನ್ನು ಹೊಂದುವುದು, ನೋವಿಲ್ಲದ ಸುಖ ಹಾಗೂ ಹೋರಾಟವಿಲ್ಲದ ಆನಂದ ಸಿಗುವ ಜೀವನವನ್ನು ನಡೆಸುವುದು, ಇತರ ಜೀವಿಗಳೊಂದಿಗೆ ಗೌರವಪೂರ್ಣ ಹಾಗೂ ಪ್ರೇಮಮಯ ಬಾಂಧವ್ಯವನ್ನು ಹೊಂದಿರುವುದು, ಪೂರ್ಣ ಸ್ವಾತಂತ್ರ್ಯವನ್ನು ಹೊಂದಿ ಇತರರಿಗೆಲ್ಲ ನಾಯಕನೆನಿಸಿಕೊಂಡಿರುವುದು—ಇವು ಸಾಮಾನ್ಯವಾಗಿ ಮಾನವರೆಲ್ಲರ ಆಸೆಯಾಗಿರುತ್ತದೆ. ಅಂದರೆ ಸರ್ವಪ್ರಯತ್ನದಿಂದ ದುಃಖಕಷ್ಟಗಳನ್ನು ನಿವಾರಿಸಿಕೊಂಡು, ಹೆಚ್ಚಿನ ಸುಖಶಾಂತಿಸಂತೋಷಗಳನ್ನು ಪಡೆಯಬೇಕೆಂಬುದು ಜೀವಿಗಳ ಮುಖ್ಯೋದ್ದೇಶವಾಗಿರುತ್ತದೆ ಎನ್ನಲಡ್ಡಿಯಿಲ್ಲ.

ಆದರೆ ಈ ಕಷ್ಟನಿವಾರಣೆ ಹಾಗೂ ಸುಖಸಾಧನೆಗಾಗಿ ಮಾಡುವ ಪ್ರಯತ್ನಗಳಲ್ಲಿ ಜೀವಿ–ಜೀವಿಗೆ ವ್ಯತ್ಯಾಸವಿರುವುದು ಸಹಜ. ದುಃಖದ ಸ್ವರೂಪ, ಪ್ರಾಪ್ತಿ, ನಿವಾರಣೋಪಾಯ ಈ ವಿಚಾರಗಳಲ್ಲಿ ವೈವಿಧ್ಯ, ರುಚಿಭೇದ, ವೈಲಕ್ಷಣ್ಯಗಳಿಂದ ಕೂಡಿರುವ ವ್ಯಕ್ತಿಗಳಲ್ಲಿ ಒಮ್ಮತವಿರಲು ಸಾಧ್ಯವಿಲ್ಲ. ಪೂರ್ವಕರ್ಮ, ಆನುವಂಶಿಕ ಸಂಸ್ಕಾರ, ಶಿಕ್ಷಣ, ಉದ್ಯೋಗ ಇವುಗಳ ಫಲವಾಗಿ ಮಾನವರ ಬುದ್ಧಿ ಮತ್ತು ಚಿಂತನ ಸಾಮರ್ಥ್ಯಗಳಲ್ಲಿ ತಾರತಮ್ಯವು ಕಾಣಬರುತ್ತದೆ. ವ್ಯವಸಾಯಾತ್ಮಕ ಸಾತ್ವಿಕಬುದ್ಧಿ, ವ್ಯಾಕರಣಾತ್ಮಕ ತರ್ಕಪ್ರಧಾನ ರಾಜಸಬುದ್ಧಿ, ವಾಸನಾತ್ಮಕ ವ್ಯವಹಾರ ತಾಮಸಬುದ್ಧಿ ಎಂಬುದಾಗಿ ಮಾನವರ ಬುದ್ಧಿಯಲ್ಲಿ ಮೂರು ವಿಧಗಳುಂಟು.

ಬ್ರಹ್ಮಾಂಡದಲ್ಲಿ ಪಂಚತತ್ತ್ವಗಳನ್ನು ಇರಿಸಿದ ಪರಮಾತ್ಮನು ಅವುಗಳನ್ನು ಅರಿತುಕೊಳ್ಳಲು ಪಿಂಡಾಂಡದಲ್ಲಿ ಪಂಚಜ್ಞಾನೇಂದ್ರಿಯಗಳನ್ನು ಇರಿಸಿದ್ದಾನೆ. 'ದದದ' ಎಂದು ಸಾರಿ ಹೇಳುವ ಸೃಷ್ಟಿಯು ನಿರ್ಮಾಣವಾಗಿರುವಂತೆ ಈ 'ದ' ತತ್ತ್ವದ ಮರ್ಮವನ್ನು ಗ್ರಹಿಸುವ ಉಪಕರಣಗಳೂ ಜಗತ್ತಿನೊಳಗಿನ ಪ್ರತಿವ್ಯಕ್ತಿಯಲ್ಲೂ ನಿರ್ಮಾಣವಾಗಿವೆ. **ಹೃದಯ**ವು ಸಂಸ್ಕಾರಗೊಂಡು **ದಯೆ**ತೋರಲು ಸಿದ್ಧವಾಗಿರಬೇಕು ಅಂದರೆ ರಾಕ್ಷಸೀಗುಣವಾದ ಹಿಂಸೆಯನ್ನು ತ್ಯಜಿಸಿ ಅಹಿಂಸೆಯನ್ನು ಪಾಲಿಸಬೇಕು ; **ತಲೆ**ಯಲ್ಲಿ ತಿಳಿವಳಿಕೆಯು ಬಲಿತು **ದಮನ** ಮಾಡಲು ಸಮರ್ಥವಾಗಬೇಕು ಅಂದರೆ ದೇವತಾಗುಣವಾದ ಭೋಗವನ್ನು ಬಿಟ್ಟು ಸಂಯಮ-ಆತ್ಮನಿಗ್ರಹವನ್ನು ಪಾಲಿಸಬೇಕು ; **ಕೈ**ಗಳು ನುರಿತು **ದಾನ**ಮಾಡಲು ಸಿದ್ಧವಾಗಿರಬೇಕು ಅಂದರೆ ಮಾನವೀಗುಣವಾದ ಲೋಭವನ್ನು ತ್ಯಜಿಸಿ ಇತರರಿಗೆ ನೀಡುವುದನ್ನು ಕಲಿಯಬೇಕು. ಹೀಗೆ ಹಿಂದೂಧರ್ಮದಲ್ಲಿ ಹೇಳಿರುವ ಅರುವತ್ತನಾಲ್ಕು ಕಲೆಗಳೂ ಈ ಹೃದಯ (Heart), ತಲೆ (Head), ಕೈ (Hand) ಗಳ ಸಂಸ್ಕಾರವೆನಿಸಿದ ನೈತಿಕ, ಬೌದ್ಧಿಕ ಮತ್ತು ಶಾರೀರಕ ಶಿಕ್ಷಣದಿಂದ ಪರಿಣಾಮಕಾರಿಯಾಗುತ್ತವೆ. ಈ ಮೂರರ ಬೆಳವಣಿಗೆಯು ಶಿಕ್ಷಣದಿಂದ ಸಮರ್ಪಕವಾಗಿ ಆದರೆ ವ್ಯಕ್ತಿ ಹಾಗೂ ಸಮುದಾಯಗಳಲ್ಲಿ ಸುಸ್ವರ ರಾಗಾಲಾಪವನ್ನು ಕೇಳಿ ಆನಂದಿಸಬಹುದು. ಆಗ ಈ ಲೋಕವೇ ಸ್ವರ್ಗಸಮಾನವಾಗುತ್ತದೆ.

ದೇವರು, ವೇದ, ಪುರಾಣ, ಇತಿಹಾಸ, ಸ್ವರ್ಗ, ನರಕ, ಪುನರ್ಜನ್ಮ, ಕರ್ಮಸಿದ್ಧಾಂತ ಇವುಗಳಾವುದನ್ನೂ ನಾಸ್ತಿಕರು ನಂಬುವುದಿಲ್ಲ. ಮನೆ–ಮಠ, ಧನ–ಕನಕಗಳನ್ನು ಆದಷ್ಟು ಬೇಗ ಸಂಪಾದಿಸಿ, ಜೀವನವನ್ನು ಯಾವ ರೀತಿಯಲ್ಲಾದರೂ ನಡೆಸಿ, ಅದರಿಂದ ಸಿಗುವ ವಿಷಯಸುಖವನ್ನು ಪತ್ನಿ–ಪುತ್ರರೊಂದಿಗೆ ಶಕ್ತಿಮೀರಿ ಅನುಭವಿಸಿಬಿಡಬೇಕೆಂಬ ದುರಾಸೆಯಲ್ಲಿ ಸಿಲುಕಿದ "ಋಣಂಕೃತ್ವಾ ಘೃತಂಪಿಬೇತ್" ಎನ್ನುವ ಈ ಚಾರ್ವಾಕರು ತಮ್ಮ ಪ್ರಯತ್ನದಲ್ಲಿ ಧರ್ಮಾಧರ್ಮಗಳ ವಿಚಾರವನ್ನೇ ಮಾಡುವುದಿಲ್ಲ. ತಾವು ಮರಣಹೊಂದಿದಾಗ ಇದಾವುದೂ ತಮ್ಮೊಡನೆ ಬರುವುದಿಲ್ಲ ಎಂಬ ಅರಿವು ಅವರಿಗೆ ಇರುವುದಿಲ್ಲ. ಪಾಪಪುಣ್ಯಗಳ ಕರ್ಮಗಳಿಂದಲೇ ನೀಚ–ಉಚ್ಚ ಜನ್ಮಗಳು, ದುಃಖಸುಖಗಳು ಉಂಟಾಗುತ್ತವೆ ಎಂಬುದನ್ನು ಅವರು ತಿಳಿದುಕೊಂಡಿಲ್ಲ. ಆದಕಾರಣ ದೇವರು ಪಕ್ಷಪಾತಿ ಎಂದು ಅವರು ದೂರುತ್ತಾರೆ.

ಆದರೆ ವೇದಾಗಮ ಪುರಾಣೇತಿಹಾಸಗಳಲ್ಲಿ ಹೇಳಿರುವಂತೆ ಸೃಷ್ಟಿ ಸ್ಥಿತಿ ಸಂಹಾರ ಕರ್ತನಾದ ಪರಮಾತ್ಮನೊಬ್ಬನಿದ್ದಾನೆ. ಚರಾಚರಾತ್ಮಕವಾದ ಬ್ರಹ್ಮಾಂಡಗಳಿಗೆಲ್ಲ ಅವನೇ ನಾಯಕ. ಪಾಪಪುಣ್ಯಫಲರೂಪವಾಗಿ ಸ್ವರ್ಗ–ನರಕ, ಉಚ್ಚ–ನೀಚ ಜನ್ಮಗಳು ಪ್ರಾಪ್ತಿಯಾಗುತ್ತವೆ. ಮನುಷ್ಯ ಜನ್ಮದಲ್ಲಿ ಸುಖವು ದುಃಖದೊಂದಿಗೆ, ನಲಿವು ನೋವಿನೊಂದಿಗೆ ಸೇರಿಕೊಂಡೇ ಇರುತ್ತದೆ. ನಿಜವಾದ ಸುಖ–ಆನಂದಗಳು

ಸಿಗುವ ಸ್ವರ್ಗಲೋಕವನ್ನು ಪಡೆಯಬೇಕಾದರೆ ಈ ಲೋಕದಲ್ಲಿ ಜನಿಸಿದವರು ಧರ್ಮ ಮಾರ್ಗದಲ್ಲಿ ನಡೆದು ಪುಣ್ಯಕರ್ಮಗಳನ್ನೇ ಮಾಡಬೇಕು. ನಿತ್ಯಕರ್ಮಾನುಷ್ಠಾನ, ಜಪ, ಹೋಮ, ತರ್ಪಣ, ದೇವತಾರ್ಚನೆ, ಭಗವದ್ವಿಷಯ ಚಿಂತನೆ, ಭಗವನ್ನಾಮ ಸ್ಮರಣೆ, ದಾನಧರ್ಮದಲ್ಲಿ ತೊಡಗುವುದು ಮುಂತಾದ ಸತ್ಕಾರ್ಯಗಳಿಂದ ನಮ್ಮ ಪೂರ್ವಾರ್ಜಿತ ದುಷ್ಕರ್ಮಗಳನ್ನು ಕಳೆದುಕೊಳ್ಳಬೇಕು. ಕರ್ಮದ ಕ್ಷಯವು ಸಂಪೂರ್ಣ ವಾಗಿ ಆದಾಗ ಮಾತ್ರ ಪುನರ್ಜನ್ಮವಿಲ್ಲದೆ ಮೋಕ್ಷಸಿಗುತ್ತದೆ. ಇದಕ್ಕೆ ಕರ್ಮ ಜ್ಞಾನಗಳಿಂದ ಕೂಡಿದ ಭಕ್ತಿಯು ಆವಶ್ಯಕ.

**ಭಕ್ತಿಯ** ಅಂಗಗಳು ಮುಕ್ತಿಯ **ನವವಿಧ** ಸಾಧನಗಳು. ಅವು:— ಆಹಾರದಲ್ಲಿ ಎಚ್ಚರಿಕೆಯಿಂದಿರುವುದು **ವಿವೇಕ** ; ಎಲ್ಲ ಆಸೆಗಳನ್ನೂ ಬದಿಗಿಟ್ಟು ಭಗವಂತನನ್ನೇ ಕೋರುವುದು **ವಿಮೋಕ** ; ಭಗವಂತನ ಅವಿಚ್ಛಿನ್ನ ಸ್ಮೃತಿಯೇ **ಅಭ್ಯಾಸ** ; ಪರೋಪಕಾರವಾದ ಕೆಲಸವೇ **ಕ್ರಿಯಾ** ; ಸರ್ವೋದಯದ ಬಯಕೆ ಅಂದರೆ ಸರ್ವ ಜೀವಿಗಳ ಕ್ಷೇಮವನ್ನು ಕೋರುವುದು **ಕಲ್ಯಾಣ** ; ಇತರರು ದುಃಖ ಪಡುವುದನ್ನು ಸಹಿಸಲಾರದ ಮನೋಭಾವವೇ **ದಯಾ** ; ಇತರರಿಗೆ ಕಾಯಾ, ವಾಚಾ, ಮನಸಾ ಯಾವವಿಧವಾದ ನೋವನ್ನೂ ಉಂಟುಮಾಡದಿರುವುದು **ಅಹಿಂಸಾ** ; ನಮ್ಮಲ್ಲಿರುವು ವನ್ನು ಇತರರೊಂದಿಗೆ ಹಂಚಿಕೊಳ್ಳುವುದು **ದಾನ**; ನಿರಾಶಾರಹಿತರಾಗಿ ನಿತ್ಯ ಸಂತುಷ್ಟಿ ಪಡೆದಿರುವುದು **ಅನವಸಾದ.** ಇಂತಹ ಭಕ್ತಿಯಿರುವ ಜೀವಾತ್ಮನು ಪರಮಾತ್ಮ ನೊಂದಿಗೆ ತನಗಿರುವ ಸಂಬಂಧವನ್ನು ಗಾಢವಾಗಿ ಗುರುತಿಸಿ, ಅವನಲ್ಲಿ ಸಂಪೂರ್ಣವಾಗಿ ತನ್ನನ್ನು ಅರ್ಪಿಸಿಕೊಂಡಾಗ, ಅವನಲ್ಲಿ ಸ್ವಾಭಿಮಾನ, ಸ್ವಾರ್ಥಪರತೆಗಳು ಇರುವು ದಿಲ್ಲ. ಇದರ ಫಲವಾಗಿ ಜೀವನವೆಲ್ಲ ಮಾರ್ಪಾಡಾಗುತ್ತದೆ. ಹೀಗೆ ಭಕ್ತಿಯ ಪರಿ ಣಾಮ ಮೋಕ್ಷ ಎಂಬುದು ರಾಮಾನುಜರ ಅಭಿಪ್ರಾಯ. ಭಕ್ತಿಗಿಂತಲೂ ಸುಲಭ ವಾದ ಹಾಗೂ ಶೀಘ್ರ ಫಲ ನೀಡುವ ಪ್ರಪತ್ತಿಯೊಂದಿದೆ. ಇದು ಆಸ್ತಿಕರ ದೃಢ ನಂಬಿಕೆ.

ಸಾತ್ವಿಕಸ್ಯತು ದೇಹೋಯಂ ನೋಪ ಭೋಗಾಯ ಕಲ್ಪತೇ ।
ಇಹಕ್ಲೇಶಾಯ ಮಹತೇ ಪ್ರೇತ್ಯಾನಂತ ಸುಖಾಯ ವೈ ॥

ಎಂಬಂತೆ ಶರೀರವು ಇರುವುದು ಇಹದಲ್ಲಿ ಧರ್ಮಾದಿಕಾಯಕ್ಲೇಶಕ್ಕೆ, ಪರದಲ್ಲಿ ಸ್ವರ್ಗಾದಿ ಮೋಕ್ಷ ಪರ್ಯಂತ ಸೌಖ್ಯಕ್ಕೆ ಹೊರತು ಸಂಸಾರ ಸುಖಕ್ಕಾಗಿ ಅಲ್ಲ. ಧರ್ಮಾರ್ಥ ಕಾಮಗಳು ತ್ರಿವರ್ಗವೆನಿಸಿದರೆ ಮೋಕ್ಷವು ಅಪವರ್ಗವೆನಿಸುತ್ತದೆ. ಅರ್ಥಕಾಮಗಳು ಅಶಾಶ್ವತವಾದುವು. ಧರ್ಮವು ಸಾಧನವೂ ಹೌದು, ಸಾಧ್ಯವೂ ಹೌದು. ಆದುದ ರಿಂದ ಮೋಕ್ಷವೇ ನಿಜವಾದ ಪುರುಷಾರ್ಥವೆಂದು ಹಿರಿಯರು ಸಾರಿ ಹೇಳಿದ್ದಾರೆ.

ಮಾನವನ ಜೀವನ ಧ್ಯೇಯವಾದ **ಚತುರ್ವಿಧ** ಪುರುಷಾರ್ಥಗಳಲ್ಲಿ ಕಾಮವು ಇಂದ್ರಿಯಭೋಗದ ಆಸೆ, ಅರ್ಥವು ರಾಜಕೀಯ ಮತ್ತು ಆರ್ಥಿಕ ರಂಗದ ಮೌಲ್ಯ

ಗಳು, ಧರ್ಮವು ನೀತಿಯ ನೆಲೆ. ಈ ಮೂರೂ ಧ್ಯೇಯಸಾಧನೆಗಾಗಿ ಇವೆ. ಮೋಕ್ಷವೊಂದೇ ಅಂತಿಮ ಧ್ಯೇಯ. ಈ ಪ್ರಪಂಚದಲ್ಲಿ ಹೇಯ, ಪ್ರೇಯ, ಶ್ರೇಯ ಗಳಿವೆ. ಹೇಯವನ್ನು ತ್ಯಜಿಸಿ, ಪ್ರೇಯವನ್ನು ಹಿತವಾಗಿ, ಮಿತವಾಗಿ ಭೋಗಿಸುತ್ತ, ಶ್ರೇಯವನ್ನು ಸಂಪಾದಿಸುವುದೇ ಜೀವನ ಕಲೆ ಎನಿಸಿಕೊಳ್ಳುತ್ತದೆ. ಅಂದರೆ ಸಮಾಜ ದಲ್ಲಿ ಸೂಕ್ತ ಸ್ಥಾನಮಾನಗಳನ್ನು ಗಳಿಸುವುದು ಮತ್ತು ಇಂದ್ರಿಯಭೋಗದ ಸುಖ ಸಂತೋಷಗಳನ್ನು ಅನುಭವಿಸುವುದು, ಇವೆರಡೂ ನೀತಿಮಾರ್ಗದಿಂದಲೇ ಆಗಿ ಕೊನೆ ಯಲ್ಲಿ ಅವಿದ್ಯೆ, ಕರ್ಮ, ವಾಸನಾ, ರುಚಿ, ಪ್ರಕೃತಿ ಸಂಬಂಧಗಳಿಂದ ಕೂಡಿದ ಇಹದ ಸಂಸಾರ ಚಕ್ರದ ಪುನರ್ಜನ್ಮದಿಂದ ಬಿಡುಗಡೆ ಸಿಗುವ ಮುಕ್ತಿಗಾಗಿ ಶ್ರಮಿಸಬೇಕು. ಈ ಪ್ರಪಂಚದಲ್ಲಿ ನಡೆಯುವುದೆಲ್ಲವೂ ಒಂದು ಉದ್ದೇಶದಿಂದ ನಿರ್ದೇಶಿತ ರೀತಿಯಲ್ಲಿ ಭೌತಿಕ ಮತ್ತು ಆಧ್ಯಾತ್ಮಿಕ ಎಂಬೆರಡು ಶಾಶ್ವತ ನಿಯಮಗಳಿಗೆ ಒಳಪಟ್ಟು ನಡೆಯು ತ್ತದೆ. ಪ್ರಪಂಚದಲ್ಲಿ ಒಳಿತು ಕೆಡಕುಗಳೆರಡೂ ಇದ್ದರೂ ಕೊನೆಗೆ ಸದ್ಗುಣವು ಮಾತ್ರ ಸುಖವನ್ನು ತರಬಲ್ಲುದು. ದುಷ್ಟರು ತಮ್ಮ ತಪ್ಪನ್ನು ಅರಿತು ತಿದ್ದಿಕೊಳ್ಳದಿದ್ದರೆ, ಪ್ರಾಮಾಣಿಕತೆಯಿಂದ ಪಶ್ಚಾತ್ತಾಪಪಟ್ಟು ಪರಮಾತ್ಮನ ಕ್ಷಮೆ ಬೇಡದಿದ್ದರೆ, ಎಲ್ಲ ವನ್ನೂ ನೋಡಬಲ್ಲ ಹಾಗೂ ಪಾಪವನ್ನು ದ್ವೇಷಿಸುವ ಆತನು ಕೆಟ್ಟವರನ್ನೂ, ತಪ್ಪಿತ ಸ್ಥರನ್ನೂ ತಪ್ಪದೆ ಶಿಕ್ಷೆಗೆ ಗುರಿಪಡಿಸುತ್ತಾನೆ—ಎಂಬುದೇ ವೇದಾಂತದ ಉಪದೇಶದ ಸಾರ. ಇದೇ ಪರಮಪುರುಷಾರ್ಥ ಹಾಗೂ ಮಾನವನ ಜೀವನದ ಗುರಿ ಆಗಿದೆ.

ಒಟ್ಟಿನಲ್ಲಿ ಮಾನವರು ಯಾವುದಕ್ಕೋಸ್ಕರ ತೀವ್ರವಾಗಿ ಆಸೆಪಡುತ್ತಾರೆಯೋ ಅದು ಪುರುಷಾರ್ಥವೆನಿಸಿಕೊಳ್ಳುತ್ತದೆ. ಗುರಿಯ ಸಾಧನವಾದ ದುಃಖಮಿಶ್ರ, ನಶ್ವರ, ಮಿತ, ಆದ ಧರ್ಮಾರ್ಥಕಾಮಗಳಿಗೆ ಆಶಿಸುವವರೇ ಹೆಚ್ಚು ಮಂದಿ. ಆದರೆ ದುಃಖ ಮಿಶ್ರಣವಿಲ್ಲದ, ಶಾಶ್ವತ, ಅಮಿತ, ಆದ ಶ್ರೇಷ್ಠ ಗುರಿಯಾದ ಮೋಕ್ಷಕ್ಕಾಗಿ ಆಶಿಸು ವವರು ಕೆಲವೇ ಮಂದಿ ಮಾತ್ರ. ಮೋಕ್ಷವು ಕೆಲವರಿಗೆ ಬೇಗ, ಕೆಲವರಿಗೆ ನಿಧಾನ ವಾಗಿ ಸಿಗುವುದರಿಂದ ಯಾರೂ ನಿರಾಶರಾಗಬೇಕಾದುದಿಲ್ಲ. ವಿವೇಕ, ಆತ್ಮ ಸಂಯ ಮನ, ಧೃತಿ, ನ್ಯಾಯ ಈ ಸದ್ಗುಣ ಚತುಷ್ಟಯವೇ ಮಾನವನನ್ನು ಶೀಲವಂತನ ನ್ನಾಗಿ ಮಾಡಿ ಆತನ ಪುರುಷಾರ್ಥವು ಈಡೇರುವಂತೆ ಮಾಡಬಲ್ಲದು. ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ, ದರ್ಶನಗಳು ಇವುಗಳಲ್ಲಿರುವಂತೆ ಬ್ರಹ್ಮಪ್ರಾಪ್ತಿಯು ಅಂದರೆ **ಜೀವೇಶ್ವರ ಸಮನ್ವಯವು ಮೋಕ್ಷ** ಎಂಬುದರ ಸುಂದರ ವಿವರಣೆಯು ರಾಮಾನುಜರ ಶ್ರೀಭಾಷ್ಯ ಮತ್ತು ಶರಣಾಗತಿ ಗದ್ಯಗಳಲ್ಲಿ ಕಾಣಬರುತ್ತದೆ. ರಾಮಾ ನುಜರ ದೃಷ್ಟಿಯಲ್ಲಿ ಮೋಕ್ಷವು "ಪರಿಪೂರ್ಣಾನವರತ ನಿತ್ಯವಿಶದತಮಾನನ್ಯ ಪ್ರಯೋಜನಾನವಧಿಕಾತಿಶಯಪ್ರಿಯ ಭಗವದನುಭವಜನಿತಾನವಧಿಕಾತಿಶಯ ಪ್ರೀತಿಕಾರಿತಾಶೇಷಾವಸ್ಥೋಚಿತಾ ಶೇಷಶೇಷ ತೈಕರತಿರೂಪ ನಿತ್ಯ ಕೈಂಕರ್ಯ" ಆಗಿರುತ್ತದೆ.

ಪ್ರಳಯ ಕಾಲದಲ್ಲಿ ಅತ್ಯಂತ ಸೂಕ್ಷ್ಮರೂಪದಲ್ಲಿ ಪರಮಾತ್ಮನಲ್ಲಿ ಅಡಗಿರುವ ಚೇತನ ಮತ್ತು ಅಚೇತನ ವಸ್ತುಗಳಿಗೆ ನಾಮರೂಪಗಳು ಇರುವುದಿಲ್ಲ. ಆದರೆ ಸೃಷ್ಟಿಯ ಕಾಲದಲ್ಲಿ ಹೊರಬರುವ ಇವು ಸ್ಥೂಲವಾಗಿ, ನಾಮರೂಪಗಳನ್ನು ಹೊಂದಿರುತ್ತವೆ. ಸೃಷ್ಟಿ, ಪ್ರಳಯ ಇವೆರಡೂ ಒಂದೇ ಪರಬ್ರಹ್ಮನ ಎರಡು ಅವಸ್ಥಾವಿಶೇಷಗಳು. ಜೇಡರ ಹುಳುವು ತನ್ನಲ್ಲಿಯೇ ಇರುವ ಒಂದು ಪದಾರ್ಥದಿಂದ ಗೂಡೊಂದನ್ನು ನಿರ್ಮಿಸಿ ಅದರಲ್ಲಿ ವಾಸಿಸುವಂತೆ, ಜೀವಜಗತ್ತುಗಳು ಪರಮಾತ್ಮನಲ್ಲಿಯೇ ಅಡಗಿದ್ದು, ಅವನ ಸಂಕಲ್ಪವಾದಾಗ ಹೊರಬಂದು, ಅವನ ವಿನೋದ–ವಿಹಾರ–ಲೀಲೆಗಾಗಿ ವ್ಯವಹರಿಸುತ್ತ, ಮುಕ್ತಿಯ ಕಾಲದಲ್ಲಿ ಅವನಲ್ಲಿಯೇ ಹೋಗಿ ಸೇರುತ್ತವೆ. ಆದಕಾರಣ ಈ ಜೀವ ಜಗತ್ತುಗಳು ಮಿಥ್ಯೆ, ಕಲ್ಪಿತ ಆಗಿರದೆ ಸತ್ಯ, ನಿತ್ಯ, ಶಾಶ್ವತ ಆಗಿವೆ. ಬ್ರಹ್ಮ–ಜೀವ–ಪ್ರಕೃತಿ ಈ ಮೂರೂ ಬೆರೆತ ಪರಬ್ರಹ್ಮವೇ ವೇದೋಕ್ತವಾದುದು. ಈ ಲೋಕವೆಲ್ಲ ಪರಮಾತ್ಮನ ಶರೀರವಾದುದರಿಂದ ಇದರ ಮೂಲಕವೇ ಅವನನ್ನು ಪಡೆಯಲು ಯತ್ನ ಮಾಡುವುದು ಸಾಧು, ಶ್ಲಾಘ್ಯ ಆದುದು. ದೇವರಿಗಾಗಿ, ದೇವರಿಂದ, ದೇವರಲ್ಲಿ ಇರುವ ಉತ್ತಮವಾದ ಈ ಇಹ ಜೀವನದಿಂದ ದೂರಾಗಲು ಯತ್ನಿಸುವುದು ಸರಿಯಲ್ಲ. ದೈವ ಸಂಕಲ್ಪಕ್ಕೆ ವಿರುದ್ಧವಾಗಿ ಹೋಗುವುದು ತಪ್ಪಾಗುತ್ತದೆ. ಇರುವಷ್ಟು ಕಾಲ ನಮಗೂ ನಾಲ್ಕು ಜನರಿಗೂ ಹಿತವಾಗಿ ಬಾಳುತ್ತ ಇನ್ನೊಬ್ಬರಿಗೆ ಅನ್ಯಾಯ, ನೋವು ಆಗದ ರೀತಿಯಲ್ಲಿ ಬದುಕಬೇಕು.

ಮಾನವರಲ್ಲಿ ಆಧ್ಯಾತ್ಮಿಕ ಅಥವಾ ನೈತಿಕ ಭಾವನೆಯು ಬೆಳೆದು ಘನೀಭೂತವಾಗಲು ಉಪದೇಶ ಅಥವಾ **ಶಿಕ್ಷಣವೆಂಬ ಅಚ್ಚಿನ** ಸಹಾಯವು ಅವಶ್ಯಕವಾಗುತ್ತದೆ. ಉತ್ಕೃಷ್ಟ ಅನ್ನಾದಿಗಳನ್ನು ಕೊಡುವುದು, ದೇಶದಲ್ಲಿ ಧನಾದಿ ಸಂಪತ್ತನ್ನು ಉಂಟುಮಾಡುವುದು, ಶ್ರೇಷ್ಠವಾದ ಬುದ್ಧಿಯಿಂದ ಕೂಡಿರುವುದು, ಸರ್ವೋತ್ತಮವಾದ ವಿಜ್ಞಾನ ಕ್ರಿಯಾಯುಕ್ತವಾದುದು, ಮನೋವಾಕ್ಕಾಯಗಳ ಪವಿತ್ರತೆಯನ್ನುಂಟುಮಾಡುವುದು ಮತ್ತು ಸರ್ವಕ್ಕೂ ಆಶ್ರಯದಾತನಾದ ಪರಮಾತ್ಮನನ್ನು ಅರಿಯಲು ಶಕ್ತಿಯುಕ್ತವಾಗಿರುವುದು–ಇವು ಸರಿಯಾದ ಶಿಕ್ಷಣದ ಫಲವೆನ್ನಿಸುತ್ತದೆ. ಅನ್ನ, ಅರಿವೆ, ಆಶ್ರಯ, ಆರೋಗ್ಯ, ಅರಿವು, ವಿರಾಮ, ಸಂಚಾರಸಂಪರ್ಕ, ಪೂಜೆ, ಎಂಬೀ ಮಾನವಸಮುದಾಯದ **ಅಷ್ಟವಿಧ ಆವಶ್ಯಕತೆ**ಗಳನ್ನು ಪೂರೈಸುವ ಕಾರ್ಯದಲ್ಲಿ ನೆರವಾಗುವ ರೈತ, ವ್ಯಾಪಾರಿ, ವೈದ್ಯ, ವಕೀಲ, ಆರಕ್ಷಕ, ಶಿಲ್ಪಿ, ಉಪಾಧ್ಯಾಯ, ಆಡಳಿತಗಾರ, ಶ್ರಮಜೀವಿ, ಪೂಜಾರಿ ಮುಂತಾದ **ಮುಖ್ಯ ಉದ್ಯೋಗ**ಗಳಲ್ಲಿ ನಿರತರಾಗಬೇಕಾಗಿರುವ ಮಕ್ಕಳಲ್ಲಿ ಮೂಲಗಾಮಿ ಮನಸ್ಸು ಇರುವ ಮೇಧಾವಿ (scholar), ಪರಿಶುದ್ಧ ಹೃದಯವಿರುವ ಸಂತ (saint), ಕ್ರಿಯಾಶೀಲ ದೇಹವಿರುವ ಶೂರ (hero) ಆಗಲು ಅವಶ್ಯಕವಾದ ತರಬೇತು ಜ್ಞಾನ, ಉಪಾಸನೆ, ಕರ್ಮ ಎಂಬೀ ಮೂರುಮಾರ್ಗಗಳಿಂದ ದೊರಕುವಂತಾಗಬೇಕು. ನಾಡಿನ ಭೂಮಿ

ಯನ್ನು ಫಲವತ್ತಾಗಿಮಾಡಲು, ಗಣಿಗಳ ಉತ್ಪನ್ನವನ್ನು ಹೆಚ್ಚಿಸಲು, ವಿವಿಧ ಕೈಗಾರಿಕೆಗಳನ್ನು ಪ್ರಾರಂಭಿಸಿ ಬೆಳೆಸಲು, ವ್ಯಾಪಾರವನ್ನು ಉನ್ನತಗೊಳಿಸಲು, ಜನರ ಆರೋಗ್ಯವನ್ನು ಉತ್ತಮಗೊಳಿಸಲು. ಜನರಿಗೆ ನ್ಯಾಯ ಸಿಗಲು, ನಮ್ಮ ಮಕ್ಕಳನ್ನು ಸರಿಯಾದ ಶಿಕ್ಷಣದ ಮೂಲಕ ಸಿದ್ಧಗೊಳಿಸಬೇಕು. ನಾಡಿನಲ್ಲಿರುವ ಅಜ್ಞಾನವನ್ನು ಶಿರದ ಜ್ಞಾನದಿಂದಲೂ, ಅನ್ಯಾಯವನ್ನು ಹೃದಯದ ಭಾವನೆಗಳಿಂದಲೂ, ಅಭಾವವನ್ನು ಕರಗಳ ಕುಶಲತೆಯಿಂದಲೂ ಪರಿಹರಿಸುವುದು ಎಲ್ಲ ಶಿಕ್ಷಕರ ಹಾಗೂ ಉದ್ಯೋಗಿಗಳ ಮುಖ್ಯ ಗುರಿಯಾಗಬೇಕು.

ದುಃಖಿಯೊಬ್ಬನ ಕಣ್ಣೀರನ್ನು ಒರೆಸುವ ಒಂದು ಯತ್ನ, ಹಸನ್ಮುಖಿಯೊಬ್ಬನ ಹರ್ಷದಲ್ಲಿ ಬೆರೆಯುವ ಒಂದು ಗುಣ, ಪರರ ಏಳಿಗೆಯನ್ನು ಕಂಡು ಕರುಬದ ಒಂದು ಬುದ್ಧಿ, ಪ್ರತಿಭೆ ಪಾಂಡಿತ್ಯಗಳಿಗೆ ತಲೆಬಾಗುವ ಒಂದು ವಿಧೇಯತೆ, ಅನ್ಯಾಯ–ಅನೀತಿಗಳನ್ನು ಪ್ರತಿಭಟಿಸುವ ಒಂದು ಗಂಡೆದೆ, ಸಮಾಜದ ಸುಖಶಾಂತಿಗೆ ನೆರವಾಗುವ ಒಂದು ಶೀಲ–ಇವು ಇರುವಂತಹ ಆದರ್ಶ ನರ-ನಾರಿಯರನ್ನು ತಯಾರಿಸುವುದೇ ಶಾಲಾಕಾಲೇಜುಗಳ ಧ್ಯೇಯವಾಗಬೇಕು.

ಸತ್ಯಕ್ಕಾಗಿ ಧೈರ್ಯಸ್ಥೈರ್ಯಗಳಿಂದ ಹೋರಾಡಲು, ಹೇಯವಾದುದನ್ನು ನೋಡಿ ಅಸಹ್ಯಪಡಲು, ದುಷ್ಕಾರ್ಯಗಳನ್ನು ನೋಡಿ ಕೋಪೋದ್ರಿಕ್ತರಾಗಲು, ಶ್ಲಾಘನೀಯವಾದುದನ್ನು ನೋಡಿ ಸಂತೋಷಿಸಲು, ಸ್ವಧರ್ಮ–ಸ್ವದೇಶಗಳ ಬಗ್ಗೆ ಅಭಿಮಾನ ತಾಳಲು–ಅವಶ್ಯಕವಾದಂತಹ ಸನ್ನಿವೇಶ, ಅವಕಾಶ, ಅನುಕೂಲಗಳನ್ನು ಎಲ್ಲ ಮಕ್ಕಳಿಗೂ ಬಾಲ್ಯದಿಂದಲೇ ಯೋಗ್ಯ ಶಿಕ್ಷಣದ ಮೂಲಕ ಒದಗಿಸಬೇಕು. ಇದು ಭೂಲೋಕದಲ್ಲಿ ದೇವರೆನಿಸಿದ ತಾಯಿ, ತಂದೆ ಮತ್ತು ಗುರುಗಳು ಗಮನಿಸಬೇಕಾದ ಆದ್ಯ ಕರ್ತವ್ಯ.

ಬುದ್ಧಿ-ಭಾವಗಳ ಬೆಸುಗೆ ಇರುವ ಮನನ ಶಕ್ತಿಯು ಮಕ್ಕಳಲ್ಲಿ ಹುಟ್ಟಿ ಬೆಳೆಯುವಂತೆ ಮಾಡಬೇಕು. ಇದು ಕವಿಗಳಲ್ಲಿ ರೂಪಶಕ್ತಿಯಾಗಿ, ವಿಜ್ಞಾನಿಗಳಲ್ಲಿ ಸಂಶೋಧನ ಶಕ್ತಿಯಾಗಿ, ವಾಗ್ಮಿಗಳಲ್ಲಿ ಭಾಷಣಶಕ್ತಿಯಾಗಿ, ಮುನೀಷಿಗಳಲ್ಲಿ ಮಂತ್ರಶಕ್ತಿಯಾಗಿ, ಅನುಭಾವಿಗಳಲ್ಲಿ ಅಂತಃಶಕ್ತಿಯಾಗಿ, ಯೋಗಿಗಳಲ್ಲಿ ದಿವ್ಯಶಕ್ತಿಯಾಗಿ ಕಾರ್ಯಗೈಯುತ್ತದೆ. ಮನನ ಶಕ್ತಿಯ ಪರಾಕಾಷ್ಠೆಯೇ ಪ್ರತಿಭೆ ಎಂದು ಕರೆಸಿಕೊಳ್ಳುವ ದಿವ್ಯ ಚಕ್ಷು ಎಂಬ ಆರನೆಯ ಇಂದ್ರಿಯ. 'Genius is ten per cent inspiration and ninety per cent perspiration' ಎಂಬಂತೆ ಸತತ ಅಭ್ಯಾಸದಿಂದ ಇದನ್ನು ಜಾಗೃತಗೊಳಿಸಿ ಕಾರ್ಯೋನ್ಮುಖವಾಗಿ ಮಾಡಬಹುದು.

ಶಿಕ್ಷಣದ ಜೊತೆಗೆ ಆತ್ಮೋದ್ಧಾರಕ್ಕೆ ಅಗತ್ಯವಾದ ಗುಣಗಳ ಸಂಪಾದನೆಮಾಡಲು **ಉದ್ಯೋಗ** ವೆಂಬ **ಸಾರುವೆ**ಯೂ ಅತ್ಯಾವಶ್ಯಕ. ಉದ್ಯೋಗಸ್ಥರು ತಮ್ಮ ವೃತ್ತಿ

ಯಲ್ಲಿ ಉನ್ನತವಾದ ಜ್ಞಾನರಾಶಿಯನ್ನು ಸೃಜಿಸಿಕೊಂಡು, ಔದ್ಯೋಗಿಕ ಸಿದ್ಧತೆಯನ್ನು ಮಾಡಿಕೊಂಡು, ಸ್ವಂತ ಲಾಭಕ್ಕಿಂತಲೂ ಸೇವೆಗೇ ಆದ್ಯತೆಯನ್ನು ನೀಡಿ, ವೈಯಕ್ತಿಕ ಹಿತ–ಗೌರವಗಳಿಗಿಂತ ಮಾನವ ಸಮುದಾಯದ ಯೋಗಕ್ಷೇಮಗಳ ಬಗ್ಗೆ ಹೆಚ್ಚು ಗಮನ ನೀಡಿ, ಉನ್ನತ ಆತ್ಮಸಂಯಮನವನ್ನು ಹೊಂದಿದ್ದು, ನೀತಿನಿಯಮ ಗಳನ್ನೆಲ್ಲ ಕಟ್ಟುನಿಟ್ಟಾಗಿ ಪಾಲಿಸಿ, ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಉತ್ತಮರೀತಿ ಯಲ್ಲಿ ನಿರ್ವಹಿಸಬೇಕು.

ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ಇರುವ ಲೋಪದೋಷಕುತಂತ್ರಗಳನ್ನು ಅಂದರೆ ಸಮಾಜದಲ್ಲಿ ಹಬ್ಬಿರುವ ಅಕ್ರಮವರ್ತನೆ, ಭ್ರಷ್ಟಾಚಾರ, ಸ್ವಜನಪಕ್ಷಪಾತ, ಜಾತೀಯತೆ, ನಿಷ್ಕ್ರಿಯತೆ, ಎಂಬೀ ಪಂಚ ಮಹಾಪಾತಕಗಳನ್ನು ಬಾಯಿಬಿಟ್ಟು ಎತ್ತಿ ಹೇಳಿ ಖಂಡಿಸಿ, ಅವಕ್ಕೆ ತಮ್ಮ ಅಸಮ್ಮತಿ ಯನ್ನು ವ್ಯಕ್ತಪಡಿಸುವ ಧೈರ್ಯ ಇರುವವರೇ **ಸುಸಂಸ್ಕೃತ** ವ್ಯಕ್ತಿಗಳು. ಸ್ವಾರ್ಥ ತ್ಯಾಗದಿಂದ ಬಂದ ನಿರ್ಭಯತೆಯು ಆಧ್ಯಾತ್ಮದ ಮೊದಲ ಸೋಪಾನ. ಹೇಡಿಯಾ ದವನು ಎಂದೂ ಯಾವ ನೀತಿಯನ್ನೂ ಹೊಂದಿರಲಾರ. ತಮ್ಮ ಸ್ವಂತ ಕೆಲಸ ಕಾರ್ಯಗಳು ಕೆಟ್ಟಾವು, ತಮ್ಮ ಲೋಕಪ್ರಿಯತೆಗೆ ಭಂಗ ಬಂದೀತು, ಎಂಬ ನೆಪ ದಿಂದ ಸಾರ್ವಜನಿಕ ಅನ್ಯಾಯ, ಅನಾಚಾರಗಳನೆಲ್ಲ ಕಣ್ಣು ಮುಚ್ಚಿಕೊಂಡು ಸಹಿ ಸುವ ಸ್ವಭಾವವಿರುವವರು ಹಾಗೂ ದೇಶಸೇವೆಯೆಂಬ ಬಂಡವಾಳದಿಂದ ವೈಯಕ್ತಿಕ ಸ್ಥಾನಮಾನವನ್ನು ಹೆಚ್ಚಿಸಿಕೊಂಡು ಲಾಭ ಪಡೆಯುವವರು ಇಬ್ಬರೂ **ಅನಾಗರಿಕ** ರೆಂದು ಹೇಳದೆ ವಿಧಿಯಿಲ್ಲ. ಶಿಕ್ಷಣವು ಇಂತಹ ಅನಾಗರಿಕರನ್ನು ತಯಾರಿಸದೆ ಸುಸಂಸ್ಕೃತ ಹಾಗೂ ಧೀಮಂತ ವ್ಯಕ್ತಿಗಳನ್ನು ತಯಾರಿಸಬೇಕಾದುದು ಈಗಿನ ಕಾಲ ದಲ್ಲಿ ಅತಿ ತ್ವರಿತವಾಗಿ ಆಗಬೇಕಾದ ಕೆಲಸ.

ಮುಖ್ಯವಾಗಿ ಎಲ್ಲ ಉದ್ಯೋಗಸ್ಥರೂ ಸುಸಂಸ್ಕೃತ, ಪರಾಕ್ರಮಿ, ಸಾಹಸಿ, ದೃಢ ಸಂಕಲ್ಪಉಳ್ಳವ, ಚತುರ, ಉತ್ಸಾಹಿ, ರಾಷ್ಟ್ರಪ್ರೇಮಿಕ ಆಗಲು ಬೇಕಾದ ಶಿಕ್ಷಣವು ಮನೆ– ಶಾಲೆಗಳಲ್ಲಿ ಸಿಗುವಂತಾದರೆ ಅದೇ ಆದರ್ಶ ಶಿಕ್ಷಣ. ಆದರ್ಶಶಿಕ್ಷಣವನ್ನು ಪಡೆದ ಜನರ ಸಂಖ್ಯೆಯು ಹೆಚ್ಚಾಗಿದ್ದಾಗ ಮಾತ್ರ ಜನರ, ಜನರಿಗಾಗಿ, ಜನರಿಂದ ಇರುವ **ಪ್ರಜಾ ಪ್ರಭುತ್ವ**ವು ಯಶಸ್ವಿಯಾಗಬಲ್ಲುದು. ಹಳ್ಳಿಗಳ ನಾಡಾದ ಭಾರತದಲ್ಲಿ ಪಾಠಶಾಲೆ, ಪಂಚಾಯತಿ, ಸಹಕಾರ ಸಂಘ ಈ **ಮೂರು ಮೂಲಭೂತ ಸಂಸ್ಥೆ**ಗಳು ಸರಿಯಾಗಿ ಕಾರ್ಯನಿರ್ವಹಿಸುತ್ತಿದ್ದರೆ ನಿಜವಾದ ಗಣರಾಜ್ಯವಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು. ಅಜ್ಞಾನದಿಂದ ಸತ್ಯಕ್ಕೆ, ಜನನ ಮರಣ ಬಂಧನದಿಂದ ಸ್ವಾತಂತ್ರ್ಯಕ್ಕೆ, ಪಾಪದುರಾಚಾರಗಳಿಂದ ಬಿಡುಗಡೆಗೆ, ಕೊಂಡೊಯ್ಯುವಂತೆ ಜಗನ್ನಿಯಾಮಕ ನನ್ನು ಅನುದಿನವೂ ಪ್ರಾರ್ಥನೆಮಾಡುತ್ತ ಶಿಕ್ಷಣ ಪಡೆಯಬೇಕು, ಉದ್ಯೋಗ ಮಾಡಬೇಕು.

ಮೋಕ್ಷವೆಂದರೆ ಜೀವಾತ್ಮನು ತನ್ನನ್ನು ಬಂಧಿಸಿರುವ ಪಾಶಗಳಿಂದ ವಿಮುಕ್ತನಾಗುವುದು ಎಂದರ್ಥ. ಅಂದರೆ ಪೂರ್ಣವಾಗಿ ವಿಕಾಸಗೊಂಡ ಸ್ವಸ್ವರೂಪದ ಆವಿರ್ಭಾವವೇ ಮೋಕ್ಷ. ಪ್ರಳಯಕಾಲದಲ್ಲಿ ಜೀವಿಗೆ ಚೈತನ್ಯದ ಅನುಭವವಿರುವುದಿಲ್ಲ. ಅವನ ಜ್ಞಾನರಸಕ್ರಿಯಾ ಶಕ್ತಿಗಳೆಲ್ಲವೂ ಸಂಕುಚಿತವಾಗಿರುತ್ತವೆ. ಸೃಷ್ಟಿಯ ನಂತರ ಶಿಕ್ಷಣ ಮತ್ತು ಉದ್ಯೋಗಗಳ ಪರಿಣಾಮವಾಗಿ ಸಿಕ್ಕ ಜ್ಞಾನಾನುಭವವು ಪ್ರೀತಿಯ ರೂಪವನ್ನು ತಾಳಿ ಭಕ್ತಿಯಲ್ಲಿ ಪರಿಣಮಿಸಿದಾಗ, ಆಗಮದಲ್ಲಿ ಹೇಳಿರುವಂತೆ ದೇಹೇಂದ್ರಿಯಗಳಿಂದ ಪರಮಾತ್ಮನಿಗೆ ಕೈಂಕರ್ಯಗಳನ್ನು ನೆರವೇರಿಸಿದರೆ, ಸ್ವಸ್ವರೂಪದ ವಿಕಾಸವು ಕೊಂಚಕೊಂಚವಾಗಿ ಆಗುತ್ತ ಹೋಗುತ್ತದೆ. ಪೂರ್ಣ ವಿಕಾಸವಾದಾಗ ಮುಕ್ತಿಯು ದೊರೆತು ಸುಖ, ಆನಂದಗಳನ್ನು ಅನುಭವಿಸಿದರೂ, ಜೀವಿಯು ಪರಮಾತ್ಮನೊಂದಿಗೆ ಎಲ್ಲ ಅಂಶಗಳಲ್ಲಿಯೂ ಪೂರ್ಣ ಸ್ವಾತಂತ್ರ್ಯದಿಂದ ಸಮರಸವಾಗಿ ಬೆರೆಯದೆ ಕೆಲವು ಅಂಶಗಳಲ್ಲಿ ಭಿನ್ನವಾಗಿಯೇ ಇರುವನು.

ಮರಣವಾದಾಗ ಇಂದ್ರಿಯಗಳು ಮನಸ್ಸನ್ನು, ಮನಸ್ಸು ಮುಖ್ಯ ಪ್ರಾಣವನ್ನು, ಮುಖ್ಯ ಪ್ರಾಣವು ಆತ್ಮನನ್ನು, ಆತ್ಮನು ಸೂಕ್ಷ್ಮ ಶರೀರವನ್ನು ಪ್ರವೇಶಿಸುತ್ತವೆ. ದೇವರ ಅನುಗ್ರಹಕ್ಕೆ ಪಾತ್ರರಾಗಬೇಕಾಗಿರುವ ಆತ್ಮವು ಮೂರ್ಧನ್ಯನಾಡಿಯ ಮೂಲಕ ಅಗ್ನಿಗೆ ಹೋಗಿ ಅದರ ಮೂಲಕ ವರುಣ ಲೋಕ, ಇಂದ್ರಲೋಕ, ಪ್ರಜಾಪತಿ ಲೋಕಗಳಿಗೆ ಹೋಗಿ ಅಲ್ಲಿಂದ ವಿರಜಾನದಿಯಲ್ಲಿ ಸ್ನಾನಮಾಡಿ ಅದನ್ನು ದಾಟಿ ವೈಕುಂಠವನ್ನು ತಲುಪುತ್ತದೆ. ಆಗ ದೇವಸ್ವರೂಪ ಬರುತ್ತದೆ. ಜಗತ್ಕಾರಣತ್ವ, ಮೋಕ್ಷಪ್ರದತ್ವ, ಸರ್ವಾಧಾರತ್ವ, ಸರ್ವನಿಯಂತೃತ್ವ, ಸರ್ವಶೇಷಿತ್ವ, ಸರ್ವಶಬ್ದ ವಾಚ್ಯತ್ವ, ಸರ್ವವೇದ ವೇದ್ಯತ್ವ, ಸರ್ವಲೋಕ ಶರಣ್ಯತ್ವ, ಸರ್ವ ಮುಮುಕ್ಷೂಪಾಸ್ಯತ್ವ, ಸರ್ವಫಲಪ್ರದತ್ವ, ಸರ್ವವ್ಯಾಪ್ತ ಜ್ಞಾನಾನಂದ ಸ್ವರೂಪತ್ವ, ಲಕ್ಷ್ಮೀಸಹಾಯತ್ವ, ಭೂನೀಳಾ ನಾಯಕತ್ವ, ಅನಂತಭೋಗ ಪರ್ಯಂಕತ್ವ– ಇವುಗಳು ಸರ್ವೇಶ್ವರನ ಅಸಾಧಾರಣ ಧರ್ಮಗಳಾದುದರಿಂದ ಇವುಗಳನ್ನು ಬಿಟ್ಟು ಉಳಿದ ವಿಷಯಗಳಲ್ಲಿ ನಿತ್ಯಮುಕ್ತರಿಗೆ ಸಮಾನ ಅಧಿಕಾರವುಂಟು.

ಬದ್ಧರಾದವರು ಒಂದು ದೇಹವನ್ನು ಬಿಟ್ಟು ತಮ್ಮ ಕರ್ಮಕ್ಕೆ ಅನುಸಾರವಾಗಿ ಇನ್ನೊಂದು ದೇಹವನ್ನು ಸೇರುವ ಮುನ್ನ, ತಮ್ಮ ಕರ್ಮಫಲವನ್ನು ಅನುಭವಿಸಲು ದೇವ, ಪಿತೃ, ಗಂಧರ್ವ, ಪ್ರಜಾಪತಿ ಮುಂತಾದ ಲೋಕಗಳನ್ನು ಪ್ರವೇಶಿಸಿ ಅಲ್ಲಿ ಅನುಭವಿಸಬೇಕಾದುವೆಲ್ಲವನ್ನೂ ಅನುಭವಿಸಿ, ಮತ್ತೆ ಈ ಲೋಕಕ್ಕೆ ಹಿಂತಿರುಗಬೇಕಾಗುತ್ತದೆ. ಈ ಪುನರ್ಜನ್ಮದಿಂದ ತಪ್ಪಿಸಿಕೊಳ್ಳಲು ಅರ್ಥಪಂಚಕಗಳನ್ನು ಅರಿತು ಆ ಸಾಧನಗಳಲ್ಲಿ ತೊಡಗಬೇಕಾಗುತ್ತದೆ.

ಹೀಗೆ ಕರ್ಮದ ಕಾರಣದಿಂದ ಬಂದಿರುವ ಪ್ರಕೃತಿ ಸಂಪರ್ಕವನ್ನು ಸಂಪೂರ್ಣವಾಗಿ ಕಳೆದುಕೊಂಡು, ಜರಾಮರಣಗಳ ಜಂಜಡವಿಲ್ಲದೆ ತುಚ್ಛವಾದ ಈ ಪ್ರಾಕೃತ ಲೋಕದ

ಆಚೆ ಇರುವ ಅಪ್ರಾಕೃತ ಹಾಗೂ ಆನಂದಮಯ ಆದ ಪರಲೋಕದಲ್ಲಿ ಲಕ್ಷ್ಮೀಸಮೇತ ನಾಗಿರುವ ಶ್ರೀಮನ್ನಾರಾಯಣನ ಪರಮಾನುಗ್ರಹಕ್ಕೆ ಪಾತ್ರನಾಗಿ ಅವನ ಸಾನ್ನಿಧ್ಯ ವನ್ನು ಸೇರಿ, ಆ ವೈಕುಂಠದಲ್ಲಿ ತನ್ನ ನೈಜ ಸ್ವರೂಪದಲ್ಲಿ ಆತನ ಕೈಂಕರ್ಯವನ್ನು ಮಾಡಿಕೊಂಡಿರುವುದೇ **ಮೋಕ್ಷ** ಎನ್ನುವುದು ವಿಶಿಷ್ಟಾದ್ವೈತ ಸಿದ್ಧಾಂತದ ವ್ಯಾಖ್ಯೆ. ಆಚಾರ್ಯ, ಭಾಗವತ, ಭಗವಂತ ಈ ಮೂವರ ನಿಷ್ಕಾಮ ಸೇವೆಯು ಪರಮ ಪುರುಷಾರ್ಥವಾದ ಮೋಕ್ಷ ಅಥವಾ ಸಿದ್ಧಿಯನ್ನು ದೊರಕಿಸಿಕೊಡುತ್ತದೆ.

ಒಟ್ಟಿನಲ್ಲಿ ಭಗವಂತನ ಉಪಾಸನೆಯಿಂದ ಅವನ ಅನುಗ್ರಹ ದೊರಕಿ ಅವನ ಪ್ರಾಪ್ತಿಯಾದರೆ ಅದೇ ಮೋಕ್ಷ. ದೇವ–ಜೀವರಲ್ಲಿ ಶೇಷಿ–ಶೇಷ ಭಾವವಿರುವುದ ರಿಂದ ಮೋಕ್ಷ ಸ್ಥಿತಿಯಲ್ಲಿಯೂ ಜೀವಿಗಳು ಪರಮಾತ್ಮನ ಅಧೀನವಾಗಿದ್ದು ಅವನ ಸೇವೆ ಗೈಯಬೇಕು. ಮೋಕ್ಷದಲ್ಲಿ ಭಗವತ್ಸಮಾನವಾದ ಪೂರ್ಣಸುಖ, ಆನಂದಗಳು ಸಿಕ್ಕಿ, ಭಗವಂತನಲ್ಲಿ ಪ್ರೀತಿ ಹೆಚ್ಚಾಗಿ ಅವನ ಕೈಂಕರ್ಯದಲ್ಲಿ ನಿರತರಾದಾಗ, ಜೀವಿಗೆ ಪರಮಾನುಭವ ಹಾಗೂ ಪರಮಾನಂದ ಸಿಗುತ್ತದೆ. ಮೋಕ್ಷಕ್ಕೆ ಉಪಾಯ, ಉಪೇಯ ಎರಡೂ ಪರಮಾತ್ಮನೇ ಆಗಿದ್ದಾನೆ; ತತ್ತ್ವಹಿತ ಪುರುಷಾರ್ಥಗಳೆಲ್ಲ ನಾರಾಯಣನ ಚರಣದ್ವಂದ್ವ; ಮೋಕ್ಷ ಸಿಗುವುದು ಕೇವಲ ಜೀವಿಯ ಸಂತೋಷ ಕ್ಕಾಗಿ ಆಗದೆ ಪರಮಾತ್ಮನ ಸಂತೋಷಕ್ಕಾಗಿ ಆಗಿರಲಿ–ಎಂದು ಒಪ್ಪಿಕೊಂಡಿರುವುದು ವಿಶಿಷ್ಟಾದ್ವೈತ ಸಿದ್ಧಾಂತದ **ವೈಶಿಷ್ಟ್ಯ**.

ಮೋಕ್ಷ ಸಿಗುವುದು ಈ ಭೌತಿಕ ದೇಹವನ್ನು ಪರಿತ್ಯಜಿಸಿದ ಮೇಲೆ ಮಾತ್ರ. ಆದಕಾರಣ ವಿಶಿಷ್ಟಾದ್ವೈತವನ್ನು ನಂಬಿ, ಶ್ರೀವೈಷ್ಣವನಾಗಿ ಬಾಳಿ, ಅರ್ಥಪಂಚಕ ದಿಂದ ತತ್ತ್ವತ್ರಯಗಳ ವಿಚಾರವನ್ನು ಸರಿಯಾಗಿ ತಿಳಿದುಕೊಂಡು, ಇರುವುದನ್ನು ಪರಿಷ್ಕರಿಸಿ, ತನಗೆ ತಿಳಿದುದನ್ನು ಇತರರಿಗೆ ತಿಳಿಯಹೇಳಿ, ಶ್ರಮಿಸುತ್ತ ಜೀವನ ಸಾರ್ಥಕ್ಯಹೊಂದುವುದು ಆಧ್ಯಾತ್ಮಿಕತೆಯ ಪರಮಾಕಾಂಕ್ಷೆಯಾಗಿದೆ.

ಹೀಗೆ ಈ ರಾಮಾನುಜ ಸಿದ್ಧಾಂತದಲ್ಲಿ ಮೋಕ್ಷ ಸ್ವರೂಪವು ಕೇವಲ ಸುಖ ರೂಪ ಎಂದು ತಿಳಿಸಿ, ಕರ್ಮಫಲಕ್ಕೆ ಬದ್ಧನಾದ ಜೀವನಿಗೆ ಅದರಲ್ಲಿ ಪ್ರವೃತ್ತಿ ಉಂಟಾಗುವಂತೆಮಾಡಿ, ಕ್ರಮೇಣ ಮೋಕ್ಷ ಪ್ರಾಪ್ತಿಗೆ ಉಪಾಯವನ್ನು ತೋರಿಸ ಲಾಗಿದೆ. ಈ ಸಿದ್ಧಾಂತದಂತೆ ಕರ್ಮಜ್ಞಾನಗಳೆರಡೂ ಭಕ್ತಿಯೋಗಕ್ಕೆ ಸಹಕಾರಿ ಯಾದುವು. ಆದರೆ ಈ ಭಕ್ತಿಯೋಗವನ್ನು ಸಾಧಿಸಲು ಅವಶ್ಯವಾದ ಕರ್ಮಾನು ಷ್ಠಾನ, ಜ್ಞಾನಾರ್ಜನೆ, ಎರಡನ್ನೂ ಮಾಡಲು ಸಾಮರ್ಥ್ಯವಿಲ್ಲದೆ ಹಾಗೂ ನಿರ್ವೇದ ರೂಪವಾದ ಇತರ ಶಾಸ್ತ್ರಗಳಲ್ಲಿ ತಿಳಿವಳಿಕೆ ಪಡೆದಿರುವ ಜನರಿಗಾಗಿ ಪ್ರಪತ್ತಿಯೋಗ ವೆಂಬ ಉಪಾಯವೂ ಇರುವುದು ಇದರ ವೈಶಿಷ್ಟ್ಯ.

---

## ಅಧ್ಯಾಯ–೩

# ತತ್ತ್ವತ್ರಯ

ಹುಟ್ಟು ಸಾವುಗಳಿಂದ ಹಾಗೂ ಸಂಸಾರ ಬಂಧನದಿಂದ ಬಿಡುಗಡೆ ಅಥವಾ ಮೋಕ್ಷ, ಬೇಕೆನ್ನುವ ಬುದ್ಧಿವಂತ ಮಾನವನು ಅಂದರೆ ಮುಮುಕ್ಷುವು ಚಿತ್‌ಅಚಿತ್ ಈಶ್ವರ ಎಂಬ ಮೂರು ಸತ್ಯವಾದ ತತ್ತ್ವಗಳ ಜ್ಞಾನವನ್ನು ಪಡೆಯುವುದು ಅತ್ಯಾವಶ್ಯಕ.

### 1. ಈಶ್ವರ ಸ್ವರೂಪ

ಚೇತನಾ ಚೇತನ ವಿಶಿಷ್ಟನಾದ, ಬ್ರಹ್ಮ ಶಬ್ದವಾಚ್ಯನಾದ, ಪರಮಾತ್ಮ, ಭಗವಾನ್, ಪುರುಷೋತ್ತಮ, ವಾಸುದೇವ, ವಿಷ್ಣು ಎಂದು ಕರೆಯಲ್ಪಡುವ **ಶ್ರೀಮನ್ನಾರಾಯಣನೇ** ಪರತತ್ತ್ವ ಎಂದು ಸಂಸ್ಕೃತದ ಧರ್ಮ ಸಾಹಿತ್ಯವು ಘೋಷಿಸಿರುವುದನ್ನು ನಂಬುವುದೇ ವಿಶಿಷ್ಟಾದ್ವೈತ ಸಿದ್ಧಾಂತವೆನಿಸುತ್ತದೆ. ಈ ಸಿದ್ಧಾಂತದ ಜ್ಞಾನವು ಆತ್ಮನ ಶ್ರೇಯಸ್ಸಿಗೆ ಕಾರಣವಾಗಿ, ಆ ಶ್ರೇಯಸ್ಸೇ ಮುಕ್ತಿ ಎನಿಸಿಕೊಂಡಿರುತ್ತದೆ.

೧. ಉತ್ಪತ್ತಿಂ ಪ್ರಲಯಂ ಚೈವ ಭೂತಾನಾ ಮಾಗತಿಂ ಗತಿಂ ।
ವೇತ್ತಿ ವಿದ್ಯಾಮವಿದ್ಯಾಂಚ ಸವಾಚ್ಯೋ ಭಗವಾನಿತಿ ॥

೨. ಜ್ಞಾನ ಶಕ್ತಿ ಬಲೈಶ್ವರ್ಯ ವೀರ್ಯ ತೇಜಾಂಸ್ಯ ಶೇಷತಃ ।
ಭಗವಚ್ಛಬ್ದ ವಾಚ್ಯಾನಿ ವಿನಾಹೇಯೈರ್ಗುಣಾದಿಭಿಃ ॥

೩. ಅಕ್ಷರಾಣಾಮಕಾರೋಸ್ಮಿ । ಅಇತಿಬ್ರಹ್ಮ ।
ಅಕಾರೋ ವಿಷ್ಣುವಾಚಕಃ ॥

೪. ಅಗ್ನಿರವಮೋ ದೇವತಾನಾಂ ವಿಷ್ಣುಃ ಪರಮಃ ॥

೫. ನತೇ ವಿಷ್ಣೋ ಜಾಯಮಾನೋನ ಜಾತಃ ।
ದೇವಮಹಿಮ್ನಃ ಪರಮಂತಮಾಪ ॥

೬. ಅನಾದಿ ನಿಧನಂ ವಿಷ್ಣುಂ ಸರ್ವಲೋಕ ಮಹೇಶ್ವರಂ ।
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ ಸರ್ವದುಃಖಾತಿಗೋಭವೇತ್ ॥

೭. ಓಂ ನಾರಾಯಣಾಯ ವಿದ್ಮಹೇ । ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥

೮. ಅ ಇತಿ ಭಗವತೋ ನಾರಾಯಣಸ್ಯ ಪ್ರಥಮಾಭಿಧಾನಂ ।

೯. ಸರ್ವಭೂತಸ್ಥಮೇಕಂ ನಾರಾಯಣಂ ||

೧೦. ಏಕೋಹವೈ ನಾರಾಯಣ ಆಸೀತ್ ನ ಬ್ರಹ್ಮಾನೇಶಾನಃ ||

೧೧. ನಾರಾಯಣಾದ್ಬ್ರಹ್ಮಾಜಾಯತೇ | ನಾರಾಯಣಾದ್ರುದ್ರೋಜಾಯತೇ ||

೧೨. ಬ್ರಹ್ಮಾನಾರಾಯಣಃ | ಶಿವಶ್ಚನಾರಾಯಣಃ ||

೧೩. ನಾರಾಯಣಸ್ಯ ಚಾಂಗಾನಿ ಸರ್ವದೈವಾನಿ ಭಾರತ ||

೧೪. ನಾರಾಯಣ ಪರಬ್ರಹ್ಮ ತತ್ತ್ವಂ ನಾರಾಯಣಃ ಪರಃ |
ನಾರಾಯಣ ಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ ||
ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿವಾ |
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ ||

೧೫. ಸೃಷ್ಟಿಸ್ಥಿತ್ಯಂತ ಕಾರಿಣೀಂ ಬ್ರಹ್ಮ ವಿಷ್ಣು ಶಿವಾಭಿದಾಂ |
ಸ ಸಂಜ್ಞಾಂಯಾತಿ ಭಗವಾನೇಕ ಏವ ಜನಾರ್ಧನಃ||

೧೬. ನಾಭಿಪ್ರರೂಡಾಂಬುರುಹಾನನೇನ |
ಸಂಸ್ತೂಯಮಾನಃ ಪ್ರಥಮೇನಧಾತ್ರಾ ||

೧೭. ನಾರಾಯಣಂ ಪರೋದೇವೋ ಸರ್ವರೂಪೋ ಜನಾರ್ಧನಃ |
ನತಸ್ಮಾತ್ಪರತೋ ದೇವೋ ನಭೂತೋನಭವಿಷ್ಯತಿ ||

ಮೇಲಿನ ಈ ಉಕ್ತಿಗಳೆಲ್ಲವೂ ಸರ್ವನಿಯಾಮಕನಾದ, ಸರ್ವೇಶ್ವರನಾದ, ಜಗತ್ಕಾರಣನಾದ, ಶ್ರೀಮನ್ನಾರಾಯಣನ ಪರತತ್ತ್ವವನ್ನೇ ಸಾರುತ್ತವೆ. ಶ್ರುತಿ ಪ್ರಮಾಣದಂತೆ **ನಾರಾಯಣನ ಸ್ವರೂಪ** ಪ್ರಕಾರಗಳು ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾ ಎಂದು **ಐದು ವಿಧ**ವಾಗಿ ಇರುತ್ತವೆ ಎಂದು ಆಳ್ವಾರುಗಳು ವರ್ಣಿಸಿದ್ದಾರೆ.

1. ವೈಕುಂಠಲೋಕದಲ್ಲಿ ಷಾಡ್ಗುಣ್ಯ ಪೂರ್ಣನಾಗಿ ಭಗವಾನ್ ಎಂದೂ, ಸಮಸ್ತ ಭೂತವಾಸಿಯಾಗಿ ವಾಸುದೇವನೆಂದೂ, ಸಮಸ್ತ ಆತ್ಮಗಳಿಗೂ ಶ್ರೇಷ್ಠನಾಗಿ ಪರಮಾತ್ಮನೆಂದೂ, ಸರ್ವವ್ಯಾಪಿಯಾಗಿ ವಿಷ್ಣು ಎಂದೂ ಕರೆಸಿಕೊಳ್ಳುವವನು **ಪರ.** ಆಕಾಶದಲ್ಲಿನ ಮೋಡಗಳಲ್ಲಿರುವ ನೀರಿನಂತೆ ಈ ಪರವು ಯೋಗಿಗಳಿಗೂ ದೊರಕುವುದು ದುರ್ಲಭ. ಹನ್ನೆರಡು ಆವರಣಗಳಿಂದ ಕೂಡಿದ, ಅನೇಕ ಗೋಪುರ ಪ್ರಾಕಾರ ಗಳಿಂದ ಆವೃತವಾದ, ತ್ರಿಪಾದದ್ವಿಭೂತಿಯಲ್ಲಿ ಕುಮುದ–ಕುಮುದಾಕ್ಷ ಮೊದಲಾದ ನಗರಪಾಲಕರಿಂದ ರಕ್ಷಿತವಾದ, ಶ್ರೀ ವೈಕುಂಠ ಎಂಬ ಪುರದಲ್ಲಿ ಚಂಡ ಪ್ರಚಂಡ ಮೊದಲಾದ ದ್ವಾರಪಾಲಕರಿಂದ ಕೂಡಿದ ಆನಂದವೆಂಬ ದಿವ್ಯಾಲಯದಲ್ಲಿ, ರತ್ನಮಯ ವಾದ ಮಣಿಮಂಟಪದಲ್ಲಿ, ಧರ್ಮ ಮೊದಲಾದ ಪಾದಗಳುಳ್ಳ ಸಿಂಹಾಸನದಲ್ಲಿ,

ಅಷ್ಟದಳಾತ್ಮಕ ಪದ್ಮದ ವಿಜ್ಞಾನಾಶ್ರಯವಾದ ಶೇಷಪರ್ಯಂಕದಲ್ಲಿ, ದಿವ್ಯಮಂಗಳ ವಿಗ್ರಹವುಳ್ಳವನಾಗಿ, ಚತುರ್ಭುಜಯುಕ್ತನಾಗಿ, ಶ್ರೀ ಭೂನೀಳಾ ಸಮೇತನಾಗಿ, ಶ್ರೀವತ್ಸ ವನಮಾಲ ಕೌಸ್ತುಭ ಶಂಖಚಕ್ರಗದಾಶಾರ್ಙ್ಗಪದ್ಮಖಡ್ಗ ಮೊದಲಾದ ದಿವ್ಯಾಯುಧ ಸಹಿತನಾಗಿ, ಶ್ರೀಮತ್ಕಿರೀಟ ಮೊದಲಾದ ದಿವ್ಯ ಆಭರಣಗಳಿಂದ ಅಲಂಕೃತನಾಗಿ, ನಿತ್ಯರಾದ ಅನಂತ, ಗರುಡ, ವಿಷ್ವಕ್ಸೇನ ಹಾಗೂ ಮುಕ್ತರಿಂದಲೂ ಕೂಡಿ ಆನಂದಾನುಭವ ಪಡೆಯುತ್ತ, ಅನಂತ ಕಲ್ಯಾಣ ಗುಣವಿಶಿಷ್ಟನಾದ ಪರಬ್ರಹ್ಮ, ವಾಸುದೇವನೆಂಬ ನಾಮಗಳುಳ್ಳ ನಾರಾಯಣನೇ ಪರ ಉಪಾಸನೆ ಹಾಗೂ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗಾಗಿ ಪರನೇ ಭೇದವನ್ನು ಹೊಂದುವ ಭಗವಂತನ ರೂಪವಿದು. ನಿತ್ಯ, ನಿರ್ವಿಕಾರ, ಲೋಕಾತೀತನಾಗಿರುವ ಭಗವಂತನ ಹಂತವಿದು.

2. ಜಗತ್ತಿನ ಪರಮ ಮಂಗಳಕ್ಕಾಗಿ ಪರ ವಾಸುದೇವನು ತಾದೇ ಉಳಿದ ಮೂರು ರೂಪ ಅಥವಾ ಅವತಾರಗಳನ್ನು ಸೃಷ್ಟಿಸುತ್ತಾನೆ. ಇದೇ **ವ್ಯೂಹ.** ಪ್ರಪಂಚದಲ್ಲಿನ ಅಸ್ತಿತ್ವಮಕ್ರಿಯೆಗಳಿಗೆಲ್ಲ ಆಧಾರಭೂತವಾಗಿದ್ದು, ಪ್ರಪಂಚವೆಲ್ಲವನ್ನೂ ಆವರಿಸುವ ಹಂತವಿದು. ಮೂರು ವ್ಯೂಹದಲ್ಲಿಯೂ ಷಾಡ್ಗುಣ್ಯವು ಸಾಮಾನ್ಯವಾಗಿದ್ದು, ಎರಡು ಗುಣಗಳು ಒಂದೊಂದಕ್ಕೆ ಪ್ರಧಾನವಾಗಿರುತ್ತವೆ. ಜ್ಞಾನಬಲ ಪೂರ್ಣನೂ, ಅಹಂಕಾರದ ಒಡೆಯನೂ, ಸುಷುಪ್ತಿಯ ಅಧಿದೇವತೆಯೂ ಆದ **ಸಂಕರ್ಷಣ**ನ ಕಾರ್ಯ ಜಗತ್ತಿನ ಸೃಷ್ಟಿಯನ್ನು ಮಾಡುವುದು ಹಾಗೂ ಪಾಂಚರಾತ್ರ ತತ್ತ್ವ ಅಥವಾ ಏಕಾಂತಿಕ ಮಾರ್ಗದ ಉಪದೇಶ ನೀಡುವುದು, ಐಶ್ವರ್ಯವೀರ್ಯ ಪೂರ್ಣನೂ, ಬುದ್ಧಿಯ ಒಡೆಯನೂ, ಸ್ವಪ್ನದ ಅಧಿದೇವತೆಯೂ ಆದ **ಪ್ರದ್ಯುಮ್ನ**ನ ಕಾರ್ಯ ಏಕಾಂತಿಕ ಮಾರ್ಗಕ್ಕೆ ಸಮ್ಮತವಾದ ಕ್ರಿಯೆಯ ಉಪದೇಶ ಕೊಡುವುದು; ಶಕ್ತಿ ತೇಜಸ್ಸುಗಳ ಪೂರ್ಣನೂ, ಮನಸ್ಸಿನ ಒಡೆಯನೂ, ಜಾಗೃತದ ಅಧಿದೇವತೆಯೂ ಆದ **ಅನಿರುದ್ಧ**ನ ಕೆಲಸ ಕ್ರಿಯಾಫಲ ಅಥವಾ ಮೋಕ್ಷ ತತ್ತ್ವದ ಶಿಕ್ಷಣ ನೀಡುವುದು

ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಈ ಮೂರೂ ಭಗವದ್ರೂಪವನ್ನು ವಾಸುದೇವನೊಂದಿಗೆ ಸೇರಿಸಿ ಚತುರ್ವ್ಯೂಹ ಎನ್ನುವುದುಂಟು. ಕಾಲಕ್ರಮದಲ್ಲಿ ವಾಸುದೇವನೇ ಶ್ರೀಕೃಷ್ಣ, ಕೃಷ್ಣನ ಅಣ್ಣ ಬಲರಾಮನೇ ಸಂಕರ್ಷಣ, ಕೃಷ್ಣನ ಮಗನೇ ಪ್ರದ್ಯುಮ್ನ, ಕೃಷ್ಣನ ಮೊಮ್ಮಗನೇ ಅನಿರುದ್ಧ ಎಂದು ಹೇಳಿ ಈ ವ್ಯೂಹವನ್ನು ಒಂದು ಕುಟುಂಬವಾಗಿಯೂ ಭಾವಿಸಲಾಗಿದೆ.

ವಾಸುದೇವನಿಂದ ಕೇಶವ, ನಾರಾಯಣ, ಮಾಧವ; ಸಂಕರ್ಷಣನಿಂದ ಗೋವಿಂದ, ವಿಷ್ಣು, ಮಧುಸೂದನ; ಪ್ರದ್ಯುಮ್ನನಿಂದ ತ್ರಿವಿಕ್ರಮ, ವಾಮನ, ಶ್ರೀಧರ; ಅನಿರುದ್ಧನಿಂದ ಹೃಷೀಕೇಶ, ಪದ್ಮನಾಭ, ದಾಮೋದರ–ಎಂಬೀ ದ್ವಾದಶ **ಉಪವ್ಯೂಹ** ಅವತಾರಗಳು ಹನ್ನೆರಡು ರಾಶಿಗಳ ಸೂರ್ಯನನ್ನು ಪ್ರತಿನಿಧಿಸುತ್ತ ಭಕ್ತರ ಧ್ಯಾನಕ್ಕಾಗಿ ಇರುವಂತಹ ದೇವರ ರೂಪಗಳು.

"ಕೇಶವಃ ಪಾತುಮೇ ಪಾದೌ ಜಂಘೇ ನಾರಾಯಣೋಮಮ ।
ಮಾಧವೋ ಮೇ ಕಟಿಂಪಾತು ಗೋವಿಂದೋ ಗುಹ್ಯಮೇವಚ ॥
ನಾಭಿಂ ವಿಷ್ಣುಸ್ತುಮೇಪಾತು ಉದರಂ ಮಧುಸೂದನಃ ।
ಉರಸ್ತ್ರಿವಿಕ್ರಮಃ ಪಾತು ಹೃದಯಂ ಪಾತು ವಾಮನಃ ॥
ಶ್ರೀಧರಃ ಪಾತು ಮೇಕಂಠಂ ಹೃಷಿಕೇಶೋ ಮುಖಂ ಮಮ ।
ಪದ್ಮನಾಭಸ್ತು ನಯನೇ ಶಿರೋ ದಾಮೋದರೋ ಮಮ ॥"

ಎಂಬಂತೆ ಈ ದ್ವಾದಶ ನಾಮಗಳು ಶರೀರದ ಹನ್ನೆರಡು ಮುಖ್ಯ ಅಂಗಗಳಿಗೆ ಆಶ್ರಯ ವಾಗಿವೆ. ಕ್ಷೀರಸಾಗರದಲ್ಲಿನ ಪರದಂತೆ ಈ ವ್ಯೂಹವೂ ನಮಗೆ ಎಟುಕದು.

3. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಬಲರಾಮ, ಶ್ರೀಕೃಷ್ಣ, ಬುದ್ಧ, ಕಲ್ಕಿ ಎಂಬೀ ಅವತಾರಗಳು **ವಿಭವ.** ಇವು ಮಾನವನ ವಿಕಾಸದ ಮೆಟ್ಟಿಲುಗಳನ್ನು ತೋರಿಸುತ್ತವೆ ಎಂದು ಕೆಲವರ ಅಭಿಪ್ರಾಯ. ಪ್ರಪಂಚದಲ್ಲಿ ಆಗಾಗ ಸಂಭವಿಸುವ ಅಧರ್ಮದ ನಾಶ, ಧರ್ಮದ ಉದ್ಧಾರಗಳಿಗಾಗಿ ಅಂದರೆ ದುಷ್ಕೃತ್ಯದ ನಾಶ, ಸಾಧುಗಳಿಗೆ ಅನುಗ್ರಹ, ಮಾಡಬೇಕೆಂಬ ಭಗವದಿಚ್ಛೆಯೇ ಈ ಅವತಾರಗಳಿಗೆ ಕಾರಣ. ಒಟ್ಟು ಇರುವ 39 ವಿಭವಾವತಾರ ಗಳಲ್ಲಿ ಮುಖ್ಯವಾದುವನ್ನು ಮುಕ್ತಿಗಾಗಿಯೂ, ಗೌಣವಾದುವನ್ನು ಭುಕ್ತಿಗಾಗಿಯೂ ಉಪಾಸಿಸಲಾಗುತ್ತಿದೆ. ಅವತಾರಗಳಲ್ಲಿ ಪೂರ್ಣ, ಅಂಶ, ಭಿನ್ನಾಂಶ, ಅಂಶ-ಭಿನ್ನಾಂಶ, ಆವೇಶ ಎಂದು ಐದು ಭೇದಗಳುಂಟು. ಮುಖ್ಯವಾದ ಅವತಾರಗಳು ಇವು :– ಬ್ರಹ್ಮಚರ್ಯದ ಶಕ್ತಿ, ಮಹತ್ವಗಳನ್ನು ತೋರಿಸಲು ಸನತ್ಕುಮಾರ; ಪೃಥ್ವಿಯನ್ನು ಉಳಿಸಲು ವರಾಹ; ಭಕ್ತಿ, ನಿಷ್ಕಾಮ ಕರ್ಮಗಳನ್ನು ಬೋಧಿಸಲು ನಾರದ; ಕಠಿಣ ತಪಸ್ಸುಮಾಡಲು ನರನಾರಾಯಣ; ಸಾಂಖ್ಯಯೋಗ ತತ್ತ್ವವನ್ನು ಉಪದೇಶಿಸಲು ಕಪಿಲ; ಋಷಿಗಳಿಗೆ ಆತ್ಮಜ್ಞಾನವನ್ನು ಬೋಧಿಸಲು ದತ್ತಾತ್ರೇಯ; ಆಳ್ವಿಕೆ ನಡೆಸಲು ಯಜ್ಞ; ಆಧ್ಯಾತ್ಮಿಕ ಭಾವನೆಯನ್ನು ತೋರಿಸಲು ಋಷಭ; ಜನರಿಗಾಗಿ ಭೂಮಿಯ ಸಂಪತ್ತನ್ನು ವಿನಿಯೋಗಿಸಲು ಪೃಥು; ಪ್ರಲಯದಿಂದ ಭೂಮಿಯನ್ನು ರಕ್ಷಿಸಲು ಮತ್ಸ್ಯ; ಕ್ಷೀರಸಮುದ್ರವನ್ನು ಕಡೆಯುವಾಗ ಕಡೆಗೋಲಾದ ಮಂದರ ಪರ್ವತವನ್ನು ಎತ್ತಿಹಿಡಿಯಲು ಕೂರ್ಮ; ಅಮೃತವನ್ನು ತರುವಾಗ ಧನ್ವಂತರಿ; ಅಮೃತವನ್ನು ಕಿತ್ತುಕೊಂಡು ಹೋದ ಅಸುರರನ್ನು ಮೋಸಗೊಳಿಸಲು ಮೋಹಿನಿ; ಮಧುಕೈಟಭರೆಂಬ ರಾಕ್ಷಸರನ್ನು ಕೊಂದು ಅವರು ಕದ್ದ ವೇದಗಳನ್ನು ಬ್ರಹ್ಮನಿಗೆ ಹಿಂತಿರುಗಿಸಲು ಹಯಗ್ರೀವ; ಬ್ರಹ್ಮನಿಗೆ ವೇದೋಪದೇಶಮಾಡಲು ಹಂಸ; ರಾಕ್ಷಸ ನಾದ ಹಿರಣ್ಯಕಶಿಪುವನ್ನು ಶಿಕ್ಷಿಸಲು ನರಸಿಂಹ; ಬಲಿಯಿಂದ ಇಂದ್ರನಿಗೆ ರಾಜ್ಯವನ್ನು ಕೊಡಿಸಲು ವಾಮನ; ಕ್ರೂರಿಗಳಾದ ಕ್ಷತ್ರಿಯ ರಾಜರನ್ನು ಸಂಹರಿಸಲು ಪರಶು ರಾಮ; ವೇದಗಳ ಅರ್ಥವನ್ನು ಸುಲಭವಾಗಿಸಲು ವ್ಯಾಸ; ರಾವಣ ಮುಂತಾದ

ಅಸುರರ ಸಂಹಾರಕ್ಕೆ ಶ್ರೀರಾಮ; ರಾಕ್ಷಸರ ಹಿಂಸೆಯಿಂದಾದ ಭೂ ಭಾರವನ್ನು ಕಡಿಮೆಮಾಡಲು ಬಲರಾಮ–ಶ್ರೀಕೃಷ್ಣ; ಜನರನ್ನು ಶುದ್ಧೀಕರಿಸಲು ಬುದ್ಧ; ಪ್ರಪಂಚವನ್ನು ಧರ್ಮಮಾರ್ಗದಲ್ಲಿ ನಡೆಸಲು ಭವಿಷ್ಯದಲ್ಲಿ ಉಂಟಾಗುವ ಕಲ್ಕಿ– ಇವು ಲೀಲಾವತಾರಗಳು. ಧ್ರುವ, ಪದ್ಮನಾಭ, ಮಧುಸೂದನ, ತ್ರಿವಿಕ್ರಮ ಮುಂತಾದುವೂ ಅವತಾರಗಳೇ. ಇದರ ಜೊತೆಗೆ ಆಳ್ವಾರುಗಳು, ಆಚಾರ್ಯರೂ ಅವತಾರ ಪುರುಷರೇ ಆಗಿದ್ದಾರೆ. ದೇವತ್ವ–ಮನುಷ್ಯತ್ವಗಳಲ್ಲಿರುವ ಬೃಹದಂತರಕ್ಕೆ ಅವತಾರಗಳು ಸೇತುವೆ ಕಟ್ಟುತ್ತವೆ.

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥

ಎಂಬಂತೆ ಧರ್ಮಕ್ಕೆ ಚ್ಯುತಿಬರುವುದು ಭಗವಂತನ ಅವತಾರಗಳಿಗೆ ಕಾರಣ.

ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥

ಎಂಬಂತೆ ಸಾಧುಗಳ ಉದ್ಧಾರ, ದುಷ್ಕರ್ಮಿಗಳ ವಿನಾಶ, ಧರ್ಮದ ಸ್ಥಾಪನೆ ಇವು ಭಗವಂತನ ಅವತಾರದ ಪ್ರಯೋಜನಗಳು.

ಈ ಅವತಾರಗಳು ಪ್ರವಾಹದಿಂದ ಕೂಡಿದ ನದಿಗಳಂತೆ ಆಯಾ ಕಾಲದಲ್ಲಿ ಇದ್ದವರಿಗೆ ಮಾತ್ರ ಗೋಚರಿಸುವಂತಹುವು.

4. ಸಕಲಚೇತನರಲ್ಲಿಯೂ ಪ್ರವೇಶಿಸಿ, ಹೃತ್ಪುಂಡರೀಕದಲ್ಲಿ ವಿಶಿಷ್ಟರೀತಿಯಲ್ಲಿ ಒಳಗಿದ್ದುಕೊಂಡು, ಅವರ ಸ್ವರೂಪ, ಸ್ಥಿತಿ, ಪ್ರವೃತ್ತಿಗಳಿಗೆಲ್ಲಾ ನಿಯಂತ್ರಕನಾಗಿ ಅವರ ಅನುಭವಗಳಲ್ಲಿನ ಆನಂದ ಪಡೆಯುತ್ತಾ, ಅವರನ್ನು ಸದಾ ರಕ್ಷಿಸುತ್ತಿರುವವನು **ಅಂತರ್ಯಾಮಿ.** ಸ್ವರ್ಗ, ನರಕಗಳನ್ನು ಅನುಭವಿಸುವಾಗಲೂ ಜೀವಾತ್ಮನ ಹೃದಯದಲ್ಲೇ ನೆಲೆಸಿರುವ ಅಂತರ್ಯಾಮಿ ಪರಮಾತ್ಮನಿಗೆ, ಜೀವಿಯ ದೋಷ ಗಳಾವುವೂ ತಟ್ಟುವುದಿಲ್ಲ. ಭೂಮಿಯ ಒಳಗಡೆ ಇರುವ ಚಿಲುಮೆಯಂತೆ ಇರುವ ಅಂತರ್ಯಾಮಿಯು ತಪಸ್ಸು ಮತ್ತು ಯೋಗಗಳಲ್ಲಿ ನಿರತರಾಗಿರುವವರಿಗೆ ಮಾತ್ರ ಗೋಚರಿಸುವಂತಹುದು. ಈ ಕಲ್ಪನೆಗೆ ಉಪನಿಷತ್ತುಗಳೇ ಆಧಾರ.

5. ಭಕ್ತನ ಕಲ್ಪನೆಗೆ ಒಳಪಟ್ಟು ಮನೆ, ಆಲಯಗಳಲ್ಲಿದ್ದು, ಪಾಂಚರಾತ್ರ ವಿಧಿಯಿಂದ ಪವಿತ್ರಗೊಳಿಸಲ್ಪಟ್ಟು, ಚೇತನರಿಂದ ಪೂಜೆಯನ್ನು ಕೈಕೊಳ್ಳುತ್ತ ಇರುವ ಮೂರ್ತಿಗಳು **ಅರ್ಚಾ.** ಸ್ವಯಂ ಉದ್ಭವವಾದ ಅಥವಾ ಪ್ರತಿಷ್ಠೆಮಾಡಲ್ಪಟ್ಟ ಅರ್ಚಾ ಮೂರ್ತಿಗಳು ಮಾತ್ರ ಜಲಾಶಯ, ಸರೋವರಗಳಂತೆ ಯಾವಾಗಲೂ ಎಲ್ಲರಿಗೂ ಎಟುಕುವಂಥವು. ಭಕ್ತರ ಮೇಲಿನ ಪ್ರೀತಿಯಿಂದ ದೇವಾಧಿದೇವನಾದ ನಾರಾಯಣನು ವಿವಿಧ ರೂಪದಲ್ಲಿ ಭೌತಿಕ ವಿಗ್ರಹಗಳಲ್ಲಿ ಕಾಣಿಸಿಕೊಂಡು, ಅವರಿಂದ

ಗುರು, ಸಖ, ತಂದೆ, ತಾಯಿ, ಮಗು, ಪ್ರಿಯತಮ ಎಂದೆಲ್ಲ ಕರೆಸಿಕೊಂಡು, ದೇಶ ಕಾಲ ನಿಯಮವಿಲ್ಲದೆ ಚೇತನರ ಪೂಜೆಯನ್ನು ಕೈಕೊಂಡು, ಸ್ವತಂತ್ರನಾಗಿದ್ದರೂ ಭಕ್ತರ ಹಾಗೂ ಅರ್ಚಕರ ಅಧೀನನಾಗಿ ಇದ್ದುಕೊಂಡು, ಅವರಿಗೆಲ್ಲ ಚತುರ್ವಿಧ ಪುರುಷಾರ್ಥವನ್ನು ಅನುಗ್ರಹಿಸುತ್ತಿರುತ್ತಾನೆ. ಇದು ಅವನ ಕರುಣೆಯ ವಿಕಾಸ ಎಂದು ಆಳ್ವಾರುಗಳು ಸಾರಿದ್ದಾರೆ.

ರಾಮಾನುಜ ಸಿದ್ಧಾಂತದಲ್ಲಿ **ನಾರಾಯಣನ ವರ್ಣನೆ**–ವಿವರಣೆ ಹೀಗೆ ಬರುತ್ತದೆ :–

೧. ಸರ್ವಕಲ್ಯಾಣ ಗುಣಾಶ್ರಯಸ್ಯ, ಸರ್ವೇಶ್ವರಸ್ಯ, ಸರ್ವಶೇಷಿಣಃ, ಸರ್ವಾಧಾರಸ್ಯ, ಸರ್ವೋತ್ಪತ್ತಿ ಸ್ಥಿತಿ ಪ್ರಳಯ ಹೇತು ಭೂತಸ್ಯ, ನಿರವದ್ಯಸ್ಯ, ನಿರ್ವಿಕಾರಸ್ಯ, ಸರ್ವಾತ್ಮ ಭೂತಸ್ಯ, ಪರಸ್ಯ ಬ್ರಹ್ಮಣಃ,

೨. ಅಖಿಲಹೇಯ ಪ್ರತ್ಯನೀಕ ಕಲ್ಯಾಣೈಕ ತಾನಸ್ವೇತರ ಸಮಸ್ತವಸ್ತುವಿಲಕ್ಷಣಾ ನಂತಜ್ಞಾನಾನಂದ್ಯೈಕ ಸ್ವರೂಪ,

೩. ಸ್ವಾಭಾವಿಕಾನವಧಿಕಾತಿಶಯ ಜ್ಞಾನ ಬಲೈಶ್ವರ್ಯ ವೀರ್ಯಶಕ್ತಿ ತೇಜಸ್ಸೌಶೀಲ್ಯ ವಾತ್ಸಲ್ಯ ಮಾರ್ದವಾರ್ಜವ ಸೌಹಾರ್ದ ಸೌಮ್ಯ ಕಾರುಣ್ಯ ಮಾಧುರ್ಯ ಗಾಂಭೀರ್ಯಔದಾರ್ಯ ಚಾತುರ್ಯ ಧೈರ್ಯಸ್ಥೈರ್ಯ ಶೌರ್ಯಪರಾಕ್ರಮ ಸತ್ಯಕಾಮ ಸತ್ಯಸಂಕಲ್ಪ ಕೃತಿತ್ವ ಕೃತಜ್ಞತಾದ್ಯ ಸಂಖ್ಯೇಯ ಕಲ್ಯಾಣ ಗುಣಗಣೌಘ ಮಹಾರ್ಣವಾ,

೪. ಸ್ವಾಭಿಮತಾನುರೂಪೈಕರೂಪಾಽಚಿಂತ್ಯ ದಿವ್ಯಾದ್ಭುತ ನಿತ್ಯನಿರವದ್ಯ ನಿರತಿಶಯಔಜ್ವಲ್ಯ ಸೌಂದರ್ಯ ಸೌಗಂಧ್ಯ ಸೌಕುಮಾರ್ಯ ಲಾವಣ್ಯಯೌವನಾದ್ಯನಂತ ಗುಣನಿಧಿ ದಿವ್ಯರೂಪ.

ಹೀಗೆ ಸಗುಣವೆನಿಸುವ ಪರವಸ್ತುವಾದ ದೇವರು ಹೂವಿನಲ್ಲಿರುವ ಸುವಾಸನೆ ಮತ್ತು ಬೆಂಕಿಯ ಜ್ವಾಲೆಯಲ್ಲಿರುವ ಕಾಂತಿಗಳಂತೆ ಇರುವ ಸಾಕಾರ ಮೂರ್ತಿ ಆಗಿದ್ದಾನೆ.

ಜೀವ ಜಗತ್ತುಗಳಿಗೆ ಪರಮಾತ್ಮನೊಂದಿಗೆ ಇರುವ ಪರಸ್ಪರ ಸಂಬಂಧದ ವಿವರಣೆ ನೀಡುವುದೇ ರಾಮಾನುಜರ ಮುಖ್ಯ ಗುರಿಯಾಗಿದ್ದಿತು. ಅದರಂತೆ ಬ್ರಹ್ಮ ಅಥವಾ ಈಶ್ವರನು ಸತ್ಯಜ್ಞಾನಾನಂದ ಪ್ರಕಾಶನು, ಹಾಗೂ ಯಾವ ರೀತಿಯ ನ್ಯೂನ್ಯತೆ–ದುರ್ಗುಣಗಳಿಲ್ಲದವನು. ಸೌಂದರ್ಯ, ಸೌಶೀಲ್ಯ, ಸೌಕುಮಾರ್ಯ, ಮಾಧುರ್ಯಗಳಿಂದ ಕೂಡಿದ ಭುವನ ಸುಂದರನು. ಭಕ್ತರಿಗೆ ಸುಲಭವಾಗಿ ಸಿಗುವಂತಹನು. ಶರಣುಹೊಕ್ಕವರಿಗಂತೂ ದಯಾಸಾಗರನು. ಈತನು ಧಾರಕ, ನಿಯಾಮಕ, ಸ್ವಾಮಿ, ಶರೀರಿ, ಶೇಷಿ, ಸರ್ವಜ್ಞ, ಸರ್ವಶಕ್ತ, ಪರಮಕಾರುಣಿಕ,

ಕೃಪಾಪರಿಪೂರ್ಣ, ಸಕಲಕಲ್ಯಾಣ ಪರಿಪೂರ್ಣ, ಅಪ್ರಾಕೃತ ದಿವ್ಯಮಂಗಳ ವಿಗ್ರಹ, ಸರ್ವಕರ್ಮ ಸಮಾರಾಧ್ಯ, ಸಕಲಕರ್ಮಫಲಪ್ರದ ಮಾತೃಪಿತೃಸ್ಥಾನೀಯ, ಪರಮಾನಂದ ಸ್ವರೂಪ, ಪರಮಪ್ರಾಪ್ಯ, ಪರಮಪ್ರಾಪಕ, ಪುರುಷೋತ್ತಮ, ಸರ್ವವ್ಯಾಪಿ, ಸರ್ವಾಂತರ್ಯಾಮಿ, ಆಗಿದ್ದಾನೆ. ಜಗತ್ತಿಗೆ ಕಾರಣನಾದ ಈ ಬ್ರಹ್ಮನೇ ನಾರಾಯಣ.

ಪೃಥ್ವಿ, ನೀರು, ತೇಜಸ್ಸು, ವಾಯು, ಆಕಾಶ, ಮನಸ್ಸು, ಮಹತ್, ಅಹಂಕಾರ ಈ ಎಂಟು ಭಿನ್ನವಸ್ತುಗಳಿಂದ ಕೂಡಿದ ಜಗತ್ತು ಶ್ರೇಷ್ಠವಲ್ಲದ ಅಚೇತನ ಪ್ರಕೃತಿ; ಶ್ರೇಷ್ಠವಾದ ಚೇತನ ಸ್ವರೂಪವಾದ ಪ್ರಕೃತಿಯು ಅಚೇತನವಾದ ಜಗತ್ತನ್ನು ಧರಿಸಿದೆ. ಚಿತ್, ಅಚಿತ್, ಈಶ್ವರ ಇವು ಮೂರೂ ಒಂದನ್ನೊಂದು ಬೇರ್ಪಡಿಸಲಾಗದ ರೀತಿಯಲ್ಲಿ ಸೇರಿಕೊಂಡಿವೆ. ಪರತಂತ್ರವಾದ ಚಿತ್-ಅಚಿತ್‌ಗಳೆರಡನ್ನೂ ಶರೀರವಾಗಿ ಹೊಂದಿ ಅವುಗಳೆಲ್ಲದರ ನಿಯಾಮಕ ಹಾಗೂ ರಕ್ಷಕ ಆಗಿರುವ ವಿಶಿಷ್ಟನಾದ ಹಾಗೂ ಸ್ವತಂತ್ರನಾದ ಈಶ್ವರನು ಅಂದರೆ ಚಿದಚಿದ್ವಿಶಿಷ್ಟಬ್ರಹ್ಮನು ಶರೀರಿ ಎನಿಸಿಕೊಂಡು ತನ್ನ ಲೀಲಾವಿಹಾರ ಯಾತ್ರೆಯನ್ನು ನಡೆಸುತ್ತಿರುವ ಶ್ರೀಮನ್ ನಾರಾಯಣನೇ ಆಗಿದ್ದಾನೆ. ಅವನಿಗೆ ಸದೃಶ, ಸಮಾನ ಆದುದು ಬೇರೆ ಇಲ್ಲ. ಸಕಲ ವಿಶ್ವದ ಸೃಷ್ಟಿ ಸ್ಥಿತಿ ಸಂಹಾರ ರೂಪವಾದ ಲೀಲೆಗಳನ್ನು ನಡೆಸುತ್ತಿರುವವನೂ ಅವನೇ. ಇದಕ್ಕೆ ಇಚ್ಛಾಶಕ್ತಿಯ ಲಕ್ಷ್ಮಿ ಹಾಗೂ ಕ್ರಿಯಾಶಕ್ತಿಯ ಸುದರ್ಶನ ಎಂಬೀ ಶಕ್ತಿದ್ವಯಗಳು ನೆರವು ನೀಡುತ್ತವೆ. ಬ್ರಹ್ಮ, ವಿಷ್ಣು, ರುದ್ರ ಇವು ಮೂರೂ ಅವನ ಗುಣಾವತಾರಗಳು.

ಅಚಿತ್ತನ್ನು ಜಗತ್ತಾಗಿ ಪರಿಣಮಿಸುವಂತೆಮಾಡಿ, ಚೇತನರಿಗೆ ಶರೀರೇಂದ್ರಿಯಗಳನ್ನಿತ್ತು ಅವರಲ್ಲಿ ಜ್ಞಾನವಿಕಾಸವನ್ನುಂಟುಮಾಡುವುದು **ಸೃಷ್ಟಿ**. ಆ ಕಾಲದಲ್ಲಿ ತಾನು ಪ್ರಜಾಪತಿ ಅಥವಾ ಚತುರ್ಮುಖ **ಬ್ರಹ್ಮ**ನಾಗಿ ಅಂತರ್ಯಾಮಿಯಾಗಿದ್ದು **ರಜೋಗುಣ**ದಿಂದ ಸೃಷ್ಟಿಸುತ್ತಾನೆ; ಸೃಷ್ಟಿಸಿದ ಜೀವಾದಿಗಳಲ್ಲಿ ಒಳಗೆ ಮತ್ತು ಹೊರಗೆ ಅಂತರ್ಯಾಮಿಯಾಗಿದ್ದು ಅವರವರ ಕರ್ಮಗಳಿಗೆ ಅನುಗುಣವಾದ ಕಾರ್ಯಗಳಲ್ಲಿ ಪ್ರೇರೇಪಿಸಿ ಅವರನ್ನು ರಕ್ಷಿಸುವುದು **ಸ್ಥಿತಿ**. ಆಗ ತಾನು **ವಿಷ್ಣು**ರೂಪದಿಂದ ಮನು, ವ್ಯಾಸಾದಿಗಳ ಮೂಲಕ ಶಾಸ್ತ್ರಗಳನ್ನು ಅನುಗ್ರಹಿಸಿ, ಸನ್ಮಾರ್ಗವನ್ನು ತೋರಿಸಿ, ಸಮಸ್ತಭೂತಗಳಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು **ಸತ್ವಗುಣ**ದಿಂದ ರಕ್ಷಿಸುತ್ತಾನೆ; ಪ್ರತಿಯೊಂದು ಜನ್ಮದಲ್ಲಿಯೂ ಅಂತ್ಯಕಾಲದಲ್ಲಿ ತಾನು ಕೊಟ್ಟ ಶರೀರೇಂದ್ರಿಯಗಳ ದುರುಪಯೋಗವಾದುದನ್ನು ಸಹಿಸಲಾರದೆ ಜೀವರುಗಳನ್ನು ಅವರವರ ಶರೀರಗಳಿಂದ ಬಿಡಿಸುವುದು **ಸಂಹಾರ**. ಇದೂ ಜೀವರ ಹಿತಕ್ಕಾಗಿಯೇ ಆಗುವಂತಹುದು. ಆಗ **ರುದ್ರ**ನಾಗಿ ಅಂತರ್ಯಾಮಿಯಾಗಿದ್ದು **ತಮೋಗುಣ**ದಿಂದ ಸಂಹರಿಸುತ್ತಾನೆ. ಹೀಗೆ ಶುದ್ಧಸತ್ವಮಯವಾದ ನಿತ್ಯವಿಭೂತಿ ಎನಿಸಿದ ವೈಕುಂಠ

ಮತ್ತು ಪರಿಣಾಮಕ್ಕೆ ಒಳಗಾದ ಲೀಲಾವಿಭೂತಿ ಎನಿಸಿದ ಜಗತ್ತು ಎರಡಕ್ಕೂ ಒಡೆಯನಾಗಿದ್ದಾನೆ ಭಗವಂತನಾದ ನಾರಾಯಣ.

ಷಡ್ಗುಣೈಶ್ವರ್ಯ ಸಂಪನ್ನನಾದ ಈಶ್ವರ ಅಥವಾ ವಿಷ್ಣುವಿನಲ್ಲಿ ಇರುವ ಗುಣ ಶಕ್ತಿಗಳೆಲ್ಲವೂ ಭಕ್ತರ ಉಪಯೋಗಕ್ಕಾಗಿಯೇ ಇವೆ ಎಂಬುದನ್ನು ಮರೆಯಲಾಗದು. ದ್ವೇಷಿಸುವ ಭಕ್ತರನ್ನು ಅನುಗ್ರಹಿಸಲು ವಾತ್ಸಲ್ಯ, ಅವನನ್ನು ಕಾಣಲು ಆಶಿಸುವವರಿಗಾಗಿ ಸೌಲಭ್ಯ, ಭಕ್ತರ ಕಷ್ಟ ನಿವಾರಣೆಗೆ ಹಾಗೂ ದ್ವೇಷಿಗಳ ನಿಗ್ರಹಕ್ಕೆ ಶೌರ್ಯ, ಅಜ್ಞರಿಗಾಗಿ ಜ್ಞಾನ, ಅಶಕ್ತರಿಗಾಗಿ ಶಕ್ತಿ, ಅಪರಾಧಿಗಳಿಗಾಗಿ ಕ್ಷಮೆ, ದುಃಖಿಗಳಿಗಾಗಿ ಕೃಪೆ, ಮಂದಬುದ್ಧಿಯವರಿಗಾಗಿ ಶೀಲ, ದುಷ್ಟರಿಗಾಗಿ ಸೌಹಾರ್ದ, ಭಯಗ್ರಸ್ತರಿಗಾಗಿ ಆರ್ಜವ, ಹೇಡಿಗಳಿಗಾಗಿ ಮಾರ್ದವ–ಇವೆಲ್ಲ ಅವನಲ್ಲಿ ಇವೆ. ಭಗವಂತನು ಯಾರಲ್ಲಿಯೂ ದ್ವೇಷ ತೋರಿಸುವುದಿಲ್ಲ ಹಾಗೂ ಪಕ್ಷಪಾತ ಮಾಡುವುದಿಲ್ಲ. ಅವನಿಲ್ಲದೆ ಜೀವ ಜಗತ್ತುಗಳು ಬದುಕಲಾರವು, ಬಾಳಲಾರವು. ದೃಶ್ಯಾದೃಶ್ಯ, ಜಡಚೇತನ, ವಸ್ತುವ್ಯಕ್ತಿಗಳೆಲ್ಲವೂ ಈ ವಿಷ್ಣುವಿನಲ್ಲಿ ಅಂತರ್ಹಿತವಾಗಿವೆ. ಈ ಏಕೈಕ ಪರಮಾತ್ಮನಾದ ವಿಷ್ಣುವಿನ ಎರಡು ಅಂಶಗಳೇ **ಲಕ್ಷ್ಮಿ** ಮತ್ತು **ನಾರಾಯಣ.**

ಸೂರ್ಯ–ಬಿಸಿಲು, ಚಂದ್ರ–ಚಂದ್ರಿಕೆ, ನಾರಾಯಣ–ನಾರಾಯಣಿ, ಅಹಂತಾ–ಅಹಂ, ಧರ್ಮ–ಧರ್ಮಿ, ಶಕ್ತಿಮಾನ್–ಶಕ್ತಿ ಇರುವಂತೆ ಲಕ್ಷ್ಮಿಯೂ ನಾರಾಯಣನೂ ಒಂದಾಗಿದ್ದಾರೆ. ಅವರಲ್ಲಿ ಸಮಭಾವವಿದೆ. ಸಮುದ್ರದ ಗಾಂಭೀರ್ಯದಂತೆ, ಆಕಾಶದ ವಿಶಾಲತೆಯಂತೆ, ಬೆಟ್ಟದ ಸ್ಥೈರ್ಯದಂತೆ, ಲಕ್ಷ್ಮೀ ಶಕ್ತಿಯು ನಾರಾಯಣನ ಇನ್ನೊಂದು ರೂಪ. ಪರಮಾತ್ಮನ ಶಕ್ತಿಗೆ ಸಾಮಾನ್ಯವಾಗಿ ಲಕ್ಷ್ಮೀ ಎಂದು ಹೆಸರು ಇರುವುದರಿಂದ ಅವನು ಶಕ್ತಿಮಾನ್ ಎನಿಸಿಕೊಂಡಿದ್ದಾನೆ. ಚೈತನ್ಯರೂಪೀ ಪುರುಷ, ಸಮಸ್ತ ಗುಣಗಳ ಆಗರ, ಎಲ್ಲ ಜೀವಾತ್ಮರ ಅವಲಂಬನ, ಚತುರ್ವಿಧ ಪುರುಷಾರ್ಥಗಳನ್ನು ನೀಡುವವ, ನಾರಾಯಣ. ಅಂತೆಯೇ ನಾರಾಯಣನ ಮಹಿಮೆ ಹಾಗೂ ವೈಭವಶಕ್ತಿಯಾಗಿ, ಸಮಸ್ತ ಜೀವಿಗಳ ಉದ್ಧಾರಕ್ಕಾಗಿ ಶ್ರಮಿಸುತ್ತಿರುವ ಕಾರುಣ್ಯಮಯಿ, **ಮಹಾಲಕ್ಷ್ಮಿ** ಆಗಿದ್ದಾಳೆ. ಶರೀರಿನ್ ಎನಿಸಿದ ವಿಷ್ಣು ಶಬ್ದದಲ್ಲಿ ಉಳಿದೆಲ್ಲ ದೇವರುಗಳ ಶರೀರಗಳೂ ಸೇರಿರುವಂತೆ ಶ್ರೀ ಅಥವಾ ಮಹಾಲಕ್ಷ್ಮಿ ಎನ್ನುವ ಶಬ್ದದಲ್ಲಿ ಈಶ್ವರಿ, ಸರಸ್ವತಿ, ಭಾರತಿ, ದುರ್ಗಿ, ಗೌರಿ, ಮಹಾಕಾಳಿ, ಮಹಿಷಮರ್ದಿನಿ, ಶಾಕಂಬರಿ, ಭ್ರಾಮರಿ, ವಸುಂಧರಾ, ವಾಸವಿ ಮುಂತಾದ ದೇವತೆಗಳೆಲ್ಲ ಸೇರಿಕೊಂಡಿದ್ದಾರೆ.

೧. ಅಸ್ಯೇಶಾನಾ ಜಗತೋ ವಿಷ್ಣುಪತ್ನೀ ।

೨. ಓಂ ಮಹಾಲಕ್ಷ್ಮ್ಯೈಚ ವಿದ್ಮಹೇ ವಿಷ್ಣುಪತ್ನೀ ಚ ಧೀಮಹಿ ।
ತನ್ನೋಲಕ್ಷ್ಮೀಃ ಪ್ರಚೋದಯಾತ್ ॥

೩. ಹ್ರೀಶ್ಚತೇ ಲಕ್ಷ್ಮೀಶ್ಚಪತ್ನ್ಯೌ ।
೪. ಈಶ್ವರೀಗ್‌ಂ ಸರ್ವಭೂತಾನಾಂ ತ್ವಾಮಿಹೋಪಹ್ವಯೇ ಶ್ರಿಯಂ ।
೫. ಜಗದುತ್ಪಾದಿಕಾಶಕ್ತೀ ತವ ಪ್ರಕೃತಿರಿಷ್ಯತೇ ।
೬. ನಶಾಂತಾನೋದಿತಾನಾಪಿ ಮಧ್ಯಮಾಹಂ ಚಿದಾತ್ಮಿಕಾ ।
೭. ಇತ್ಥಂಯದಾ ಯದಾಬಾಧಾ ದಾನವೋತ್ಥಾ ಭವಿಷ್ಯತಿ ।
ತದಾತದಾವತೀರ್ಯಾಹಂ ಕನಿಷ್ಯಾಮಿ ಮಹಾಸುರಾನ್ ॥
೮. ನಿತ್ಯೈವೈಷಾ ಜಗನ್ಮಾತಾ ವಿಷ್ಣೋಶ್ಶ್ರೀರನಪಾಯಿನೀ ।
ಯಥಾಸರ್ವಗತೋ ವಿಷ್ಣುಸ್ತಥೈವೇಯಂ ದ್ವಿಜೋತ್ತಮ ॥
೯. ತ್ವಂಮಾತಾ ಸರ್ವಲೋಕಾನಾಂ ದೇವದೇವೋ ಹರಿಃಪಿತಾ ।
ತ್ವಯೈತದ್ವಿಷ್ಣುನಾಚಾಂಬ ಜಗದ್ವ್ಯಾಪ್ತಂ ಚರಾಚರಂ ॥
೧೦. ವೈಕುಂಠೇತು ಪರೇಲೋಕೇ ಶ್ರೀಸಹಾಯೋ ಜನಾರ್ಧನಃ ।
ಉಭಾಭ್ಯಾಂ ಭೂಮಿನೀಳಾಭ್ಯಾಂ ಸೇವಿತಃ ಪರಮೇಶ್ವರಃ ॥
೧೧. ಯದಾಚ ಭಾರ್ಗವೋರಾಮ ಸ್ತದಾ ಭೂದ್ಧರಣೀತ್ವಿಯಂ ।
ರಾಘವತ್ವೇಭವತ್ಸೀತಾ ರುಕ್ಮಿಣೀಕೃಷ್ಣಜನ್ಮನಿ ॥
ಅನ್ಯೇಷುಚಾವತಾರೇಷು ವಿಷ್ಣೋರೇಶಾನಪಾಯಿನೀ ।
ದೇವತ್ವೇದೇವದೇಹೇಯಂ ಮನುಷ್ಯತ್ವೇಚಮಾನುಷೀ ॥

ಮೇಲಿನ ಉಕ್ತಿಗಳು ಲಕ್ಷ್ಮೀನಾರಾಯಣರ ಸ್ವರೂಪ ಸಂಬಂಧವನ್ನು ಸೂಚಿಸುತ್ತವೆ. ಇಚ್ಛೆ, ಕ್ರಿಯೆ, ಜ್ಞಾನ ಎಂಬ ಮೂರು ಶಕ್ತಿಗಳನ್ನು ಪ್ರತಿನಿಧಿಸುವ ಮೂರು ಸ್ತ್ರೀದೇವತೆಗಳಾದ ಲಕ್ಷ್ಮಿ, ಭೂ, ನೀಳಾಗಳಿಗೆ ನಾರಾಯಣನು ನಾಯಕನಾಗಿದ್ದಾನೆ. ದಂಡಧರತ್ವ, ನಿರಂಕುಶಸ್ವಾತಂತ್ರ್ಯ, ಪ್ರಭುತ್ವ, ಸ್ಥಿರತೆ, ವಿರೋಧ ನಿವಾರಣೆ, ಇತರರಿಗೆ ಪರವಶನಾಗದಿರುವಿಕೆ, ಮುಂತಾದ ಗಂಡು ಗುಣಗಳು **ತಂದೆ**ಯಾದ ನಾರಾಯಣನಲ್ಲಿ ಕಂಡುಬಂದರೆ, ತಾಳ್ಮೆ, ಮೃದುಹೃದಯ, ಪತಿಪರಾಧೀನತೆ, ಕರುಣೆ, ಕ್ಷಮೆ, ಇತರರ ನೋವನ್ನು ನೋಡಿ ಸಹಿಸಲು ಅಸಾಮರ್ಥ್ಯ, ಪುರುಷಕಾರತ್ವ, ಮೊದಲಾದ ಹೆಣ್ಣು ಗುಣಗಳು **ತಾಯಿ**ಯಾದ ಮಹಾಲಕ್ಷ್ಮಿಯಲ್ಲಿ ಇವೆ. ಪ್ರಕೃತಿಯಲ್ಲಿರುವ ಎಲ್ಲ ಶ್ರೇಷ್ಠ ಗುಣಗಳ ಪ್ರತೀಕವೆನಿಸಿದ ಶ್ರೀಯು, ನಾರಾಯಣನಿಗೆ ಶ್ರಿಯಃ ಪತಿತ್ವವನ್ನು ಕೊಟ್ಟಿದ್ದಾಳೆ. ಸೃಷ್ಟಿ, ಸ್ಥಿತಿ, ಲಯಗಳೆಂಬ ಭಗವಂತನ ಲೀಲಾ ವಿನೋದಕಾರ್ಯದಲ್ಲಿ ಶ್ರೀ ಅವನನ್ನು ಅನುಸರಿಸುತ್ತಾಳೆ. ಕಾರುಣಿಕನಾದ ಪರಮಾತ್ಮನ ಎಲ್ಲ ರೂಪ, ಗುಣ, ವಿಭವಗಳಲ್ಲಿಯೂ ಶ್ರೀಯು ದಯೆಯಾಗಿ, ನಟನೊಡನೆ ಇರುವ ನಟಿಯಂತೆ ಅವನೊಂದಿಗೆ ಎಡೆಬಿಡದೆ ಇರುತ್ತಾಳೆ. ಅವನ ಜೊತೆಯಲ್ಲಿ ಯಾವುದೇ ಕರ್ತವ್ಯವನ್ನಾದರೂ ಬೇಸರವಿಲ್ಲದೆ ನೆರವೇರಿಸಿ, ನೋವು ನಲಿವು

ಗಳೆರಡನ್ನೂ ಅವನೊಂದಿಗೆ ಹಂಚಿಕೊಳ್ಳುತ್ತಾಳೆ. ಭಗವಂತನ ಸ್ವರೂಪಕ್ಕೆ ಅನುಗುಣ ವಾದ ಸ್ವರೂಪವನ್ನು ಹೊಂದಿ, ಅವನಂತೆ ಸರ್ವತತ್ತ್ವಗಳಲ್ಲಿಯೂ ವ್ಯಾಪಿಸಿ, ಅವುಗಳನ್ನು ಧರಿಸಿ, ನಿಯಮಿಸಿ, ಅವುಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡು ಸರ್ವಸ್ವಾಮಿನಿಯಾಗಿದ್ದಾಳೆ. ಶ್ರೀ ಇಲ್ಲದ ನಾರಾಯಣನನ್ನು ಕಲ್ಪನೆಮಾಡಿಕೊಳ್ಳು ವುದು ಅನಾಧ್ಯ ಮತ್ತು ಅಸಾಧು ಎನ್ನುವುದು ಶ್ರೀವೈಷ್ಣವ ಆಚಾರ್ಯರ ಖಚಿತ ಅಭಿಮತವಾಗಿದೆ.

ಜೀವಿಯು ಸುಖವಾಗಿ ನೆಮ್ಮದಿಯಿಂದ ಬಾಳಲು ಬೇಕಾದ ಧನ, ಧಾನ್ಯ, ಮನೆ ಮುಂತಾದ ಸಂಪತ್ತಿನ ಪ್ರತಿರೂಪವಾದ ಮಹಾಲಕ್ಷ್ಮಿಯು ಎಲ್ಲರ ಗಮನ ವನ್ನೂ ಸೆಳೆಯುವ ದೇವತೆ. ಬೆಳೆ ಮತ್ತು ಖನಿಜಗಳ ರೂಪಗಳಲ್ಲಿ ಸಿಗುವ ಹಾಗೂ ಜೀವನಾಧಾರವಾದ ಜ್ಞಾನ, ಆನಂದ, ಗಾಳಿ, ನೀರು, ಬೆಳಕು, ಸಂಪನ್ಮೂಲ ಇವೆಲ್ಲ ವನ್ನೂ ಕೊಡುವವಳು ಲಕ್ಷ್ಮಿ. ಶ್ರೀ, ಕೀರ್ತಿ, ಶ್ರದ್ಧಾ, ವಿಜಯಾ, ಸ್ಮೃತಿ, ಮೇಧಾ, ಧೃತಿ, ಕರುಣಾ—ಇವು ಲಕ್ಷ್ಮಿಯ ಅಷ್ಟ ಅವತಾರಗಳು. ಶ್ರೀ, ಕಾಮೇಶ್ವರಿ, ಕಾಂತಿ, ಕ್ರಿಯಾ, ಶಕ್ತಿ, ವಿಭೂತಿ, ಇಚ್ಛಾ, ಪ್ರೀತಿ, ರತಿ, ಮಾಯಾ, ಧೀ, ಮಹಿಮ್ನಾ—ಇವು ಲಕ್ಷ್ಮಿಯ ದ್ವಾದಶ ರೂಪಗಳು. ಸತ್ವ, ರಜಸ್ಸು, ತಮಸ್ಸು, ಈ ತ್ರಿಗುಣಗಳಿಗೆ ಅನುಸಾರವಾಗಿ ಈಕೆ ಮಹಾಲಕ್ಷ್ಮಿ, ಕೃಷ್ಣಾ, ಬ್ರಾಹ್ಮೀ ಎಂಬ ಮೂರು ಶ್ರೇಷ್ಠ ರೂಪಗಳನ್ನು ಹೊಂದುತ್ತಾಳೆ.

ವಾಸುದೇವನಿಗೆ ಶ್ರೀ, ಸಂಕರ್ಷಣನಿಗೆ ಕೀರ್ತಿ, ಪ್ರದ್ಯುಮ್ನನಿಗೆ ಜಯಾ, ಅನಿರುದ್ಧನಿಗೆ ಮಾಯಾ, ಬ್ರಹ್ಮನಿಗೆ ಸರಸ್ವತಿ, ಶಂಕರನಿಗೆ ಗೌರಿ, ಸೂರ್ಯನಿಗೆ ಪ್ರಭೆ, ಚಂದ್ರನಿಗೆ ಕಾಂತಿ, ಇಂದ್ರನಿಗೆ ಶಚಿ, ಅಗ್ನಿಗೆ ಸ್ವಾಹಾ, ಪರಶುರಾಮನಿಗೆ ಭೂದೇವಿ, ಶ್ರೀರಾಮನಿಗೆ ಸೀತೆ, ಶ್ರೀಕೃಷ್ಣನಿಗೆ ರುಕ್ಮಿಣಿ, ನಯಕ್ಕೆ ನೀತಿ, ಬೋಧನಿಗೆ ಬುದ್ಧಿ, ದಯಾವಂತನಿಗೆ ದಯೆ, ಸತ್ಕರ್ಮಕ್ಕೆ ಸತ್ಕ್ರಿಯಾ, ಸಂತೋಷಕ್ಕೆ ಸಂತುಷ್ಟಿ, ಕಾಮಕ್ಕೆ ಇಚ್ಛಾ—ಹೀಗೆ ದೇವಮಾನವ ಮೃಗಗಳಲ್ಲೆಲ್ಲ ಗಂಡು ಹೆಸರು ಅವನದು, ಹೆಣ್ಣು ಹೆಸರು ಅವಳದು.

ದಯಾಮಯಿಯಾದ ತನ್ನ ಪತ್ನಿ ಶ್ರೀಯ ಆನಂದ ಸಂತೋಷಗಳಿಗಾಗಿಯೇ ಪರಮಾತ್ಮನು ಸೃಷ್ಟಿ ಕಾರ್ಯದಲ್ಲಿ ನಿರತನಾಗುತ್ತಾನೆ. ಸ್ತ್ರೀ ಎಂಬ ಅಕ್ಷರದಲ್ಲಿರುವ ಸಕಾರ, ತಕಾರ, ರಕಾರಗಳು ಅಂದರೆ ಸತ್ವ, ತಮೋ, ರಜೋಗುಣಗಳು ಇರುವ ಮಾನವರನ್ನು ಪುರುಷೋತ್ತಮನು ಸೃಷ್ಟಿಸುವುದು ಶ್ರೀಗಾಗಿಯೇ. ಜೀವಾತ್ಮನಿಗೆ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದು ಆನಂದಿಸುವ ಮೋಕ್ಷವನ್ನು ಪಡೆಯಲು ಒಂದು ಜನ್ಮದಲ್ಲಿ ಆಗದಿರುವುದರಿಂದ, ಅವನಿಗೆ ಇನ್ನೊಂದು ಅವಕಾಶವನ್ನು ಕೊಡಲು ಪರಮಾತ್ಮನು ಇಚ್ಛಿಸಿದುದೇ ಜೀವಿಯ ಹುಟ್ಟಿಗೆ ಕಾರಣ. ಅನುಭವದ ಅನಿಶ್ಚಿತತೆಯ ಗರ್ಭದಲ್ಲಿ ಅಡಗಿರುವ ಜೀವನದ ಶ್ರೇಷ್ಠತೆ ಮತ್ತು ಸೊಗಸುಗಳನ್ನು ಹೊರತೆಗೆಯಲು

ಸೃಷ್ಟಿಯು ಒಂದು ಸಾಧನ ಅಥವಾ ಮಾರ್ಗ ಆಗಿ ಪರಿಣಮಿಸಲು ಶ್ರೀಯ ಆಶೀರ್ವಾದ—ಪ್ರಸಾದಗಳೇ ಕಾರಣ.

ಕಷ್ಟಸಹಿಷ್ಣು, ಸಾಹಸಿ, ಧರ್ಮಶೀಲ, ವಿನೀತ, ಶುದ್ಧ ಸ್ವಭಾವದವ, ಪ್ರತಿಭಾಶಾಲಿ, ಕ್ರಿಯಾಶೀಲ ಆಗಿರುವ ಮಾನವನನ್ನು ಲಕ್ಷ್ಮಿಯು ಸಂತೋಷದಿಂದ ಸೇರುತ್ತಾಳೆ. ಆದರೆ ಮುಂದು ಖರ್ಚು, ಅಪವ್ಯಯ, ಬಡ್ಡಿ ಆಸೆ ಇವುಗಳು ಇರುವವನು ಅಲಕ್ಷ್ಮಿಗೆ ಅಂದರೆ ದಾರಿದ್ರ್ಯಕ್ಕೆ ಆಹ್ವಾನ ನೀಡುತ್ತಾನೆ. ಇತರರಿಗೆ ದಾನ ಕೊಡದೆ, ತಾನೂ ಸಾಕಷ್ಟು ಅನುಭವಿಸದೆ ಹೋದಾಗ, ಅಂಥವನ ಸಂಪತ್ತನ್ನು ಈಕೆಯು ನಾಶಮಾಡುತ್ತಾಳೆ. ಮಾನವಕೋಟಿಯು ತನ್ನ ಪಾಪಗಳನ್ನೆಲ್ಲ ತೊಳೆದುಕೊಂಡು ಶುದ್ಧವಾಗಬೇಕಾದರೆ ದೈವಕೃಪೆಯ ಪ್ರತೀಕವಾದ ಲಕ್ಷ್ಮಿಯ ಉಪಾಸನೆ ಅತ್ಯವಶ್ಯಕವಾದುದು.

ದೇವಮಾನವರ ನಡುವಣ ಕೊಂಡಿಯಂತಿರುವ, ಅಪ್ರತ್ಯಕ್ಷ, ಸೌಮ್ಯ, ಕ್ಷಮಾ ದೇವತೆಯಾದ ಶ್ರೀ ಅಥವಾ ಮಹಾಲಕ್ಷ್ಮಿಯು ದಯಾಸ್ವರೂಪಿಣಿಯಾಗಿ ನಾರಾಯಣನ ವಕ್ಷಸ್ಥಳದಲ್ಲಿ ಎಡಬಿಡದೆ ವಾಸಿಸುತ್ತ, ಜೀವಕೋಟಿಗಳ ಬಗ್ಗೆ ನಾರಾಯಣನಿಗೆ ದಯೆ ಉಂಟಾಗುವಂತೆ ಮಾಡುತ್ತಾಳೆ. ದುಷ್ಟ ನಿಗ್ರಹ, ಶಿಷ್ಟ ಪರಿಪಾಲನೆ ಎಂಬೀ ಕಾರ್ಯದಲ್ಲಿ ಭಗವಂತನು ನ್ಯಾಯವಾಗಿ ನಡೆದುಕೊಳ್ಳುವಂತೆ ಮಾಡುವವಳೂ ಅವಳೇ. ಮಾನವ ಶರೀರದಲ್ಲಿರುವ ಜೀವಾತ್ಮನು ಪರಿಪೂರ್ಣತೆಯನ್ನು ಪಡೆಯಲು, ಮತ್ತು ಪರಮಾತ್ಮನಿಗೆ ಭಕ್ತಿಪೂರ್ವಕವಾದ ಕೈಂಕರ್ಯವನ್ನು ಮಾಡಲು ಇವಳು ಸರ್ವದಾ ನೆರವು ನೀಡುತ್ತಾಳೆ. ಪಕ್ಕದಲ್ಲಿ ಶ್ರೀ ಇಲ್ಲದಿದ್ದರೆ ಪರಮಾತ್ಮನು ಕಠಿಣ, ಪಕ್ಷಪಾತಿ ಆಗಿಬಿಡುತ್ತಿದ್ದನು. ಶಿಕ್ಷಿಸಲು ಬಾರದ, ಅನುಗ್ರಹಮಾಡಲು ಮಾತ್ರ ತಿಳಿದಿರುವ, ಶ್ರೀ ಇಲ್ಲದಿದ್ದಲ್ಲಿ ಪರಮಾತ್ಮನಲ್ಲಿ ಇರುವ ಸದ್ಗುಣಗಳೂ ದುರ್ಗುಣಗಳಾಗಿಬಿಡುತ್ತಿದ್ದುವು.

ಶರಣಾಗತರಾದವರನ್ನು ರಕ್ಷಿಸುವುದು ಪರಮಾತ್ಮನ ಸ್ವಭಾವ. ಆದರೆ ಶರಣು ಆಗದ ಮತ್ತು ಪ್ರಾರ್ಥನೆ ಮಾಡದ ಜನರನ್ನೂ ರಕ್ಷಿಸುವುದು 'ಶ್ರೀ'ಯ ಸ್ವಭಾವ. ಹೀಗೆ ಪರಮಾತ್ಮನ ದಯೆ ಎನಿಸಿದ ಶ್ರೀಯು ಸೃಷ್ಟಿಗೆ ಅರ್ಥ, ಉದ್ದೇಶ, ವ್ಯವಸ್ಥೆ, ಸಮನ್ವಯಗಳೆಲ್ಲ ಉಂಟಾಗಲು ನೆರವು ನೀಡಿದ್ದಾಳೆ. ಬಲವುಳ್ಳ ಕಬ್ಬಿಣ ಉಕ್ಕುಗಳನ್ನು ಬೆಂಕಿಯು ಕರಗಿಸಬಲ್ಲುದು, ಬಲವುಳ್ಳ ಬೆಂಕಿಯನ್ನು ನೀರು ನಂದಿಸಬಲ್ಲುದು, ಬಲವಿರುವ ನೀರನ್ನು ತಾಪವು ಆವಿಯಾಗಿ ಮಾಡಿ ಕಮ್ಮಿ ಮಾಡಬಲ್ಲುದು, ಬಲವುಳ್ಳ ಮುಗಿಲನ್ನು ಗಾಳಿಯು ಓಡಿಸಿ ಚದುರಿಸಬಲ್ಲುದು, ಬಲವುಳ್ಳ ಮಾನವನನ್ನು ಭಯವು ಅಧಃಪಾತಾಳಕ್ಕೆ ತಳ್ಳಬಲ್ಲುದು, ಬಲವುಳ್ಳ ಭಯವನ್ನು ನಿದ್ರೆಯು ಜಯಿಸಬಲ್ಲುದು, ಬಲವಾದ ನಿದ್ರೆಯನ್ನು ಮರಣವು ಜಯಿಸಬಲ್ಲುದು, ಸ್ನೇಹ

ಮಯವಾದ ದಯೆಯು ಮರಣವನ್ನೂ ಜಯಿಸಿ ಬದುಕಬಲ್ಲುದು. ಹೀಗೆ ದಯೆ ಎಂಬುದು ಮಹಾ ಬಲಶಾಲಿಯಾಗಿರುವುದು ನಿಜ.

ಭಕ್ತರಲ್ಲಿ ಸುಗುಣವನ್ನು ವೃದ್ಧಿಪಡಿಸಿ, ಭಕ್ತರ ಪಾಪಗಳನ್ನು ನಾಶಮಾಡಿ, ಭಕ್ತರಿಗೆ ಆಶ್ರಯ ನೀಡಿ, ಭಕ್ತರ ಮೊರೆಗೆ ಕಿವಿಗೊಟ್ಟು, ಭಕ್ತರಿಗಾಗಿ ಭಗವಂತನಲ್ಲಿ ಮೊರೆಇಟ್ಟು, ದೇವವಿಮುಖರನ್ನೂ ತನ್ನ ಬುದ್ಧಿವಾದವನ್ನು ಕೇಳುವಂತೆ ಮಾಡಿ ಆಮೂಲಕ ಒಳಿತು, ಶ್ರೇಯಸ್ಸುಗಳನ್ನು ಮಾಡುವುದೇ ಶ್ರೀಯ ಮುಖ್ಯ ಕಾರ್ಯ.

ಶ್ರೀಮನ್ನಾರಾಯಣನ ವಕ್ಷಸ್ಥಲ ನಿವಾಸಿಯಾಗಿ ಅವನನ್ನು ಆಶ್ರಯಿಸಿರುವವಳೂ, ಜೀವಿಗಳೆಲ್ಲರಿಂದ ಆಶ್ರಯಿಸಲ್ಪಟ್ಟಿರುವವಳೂ, ಚೇತನರ ಮೊರೆಯನ್ನು ಆದರದಿಂದ ಆಲಿಸುವವಳೂ, ಎಲ್ಲರಿಗೂ ಹಿತವಚನವನ್ನು ಹೇಳಿ ಅವರು ತಮ್ಮ ದುರ್ಗುಣಗಳನ್ನು ಬಿಟ್ಟು ಸದ್ಗುಣಗಳನ್ನು ವೃದ್ಧಿಮಾಡಿಕೊಳ್ಳುವಂತೆ ಮಾಡುವವಳೂ, ಚೇತನರಲ್ಲಿರುವ ಒಳ್ಳೆಯ ಗುಣವೊಂದನ್ನೇ ದೊಡ್ಡದಾಗಿ ಮಾಡಿ ಭಗವಂತನಲ್ಲಿ ವಿಜ್ಞಾಪಿಸಿ ಚೇತನರ ಪರವಾಗಿ ವಾದಿಸುವ ವಕೀಲಳೂ, ಆದ ಶ್ರೀ ಅಥವಾ ಮಹಾಲಕ್ಷ್ಮಿಯು ಶ್ರೀವೈಷ್ಣವ ಆಚಾರ್ಯ ಪರಂಪರೆಯಲ್ಲಿ ಮೊದಲನೆಯವಳು. ದುಷ್ಟ ಮಕ್ಕಳನ್ನು ಕ್ಷಮಿಸಿ ಪ್ರೀತಿಯಿಂದ ಕಾಪಾಡುವ ತಾಯಿಯಾಗಿ, ತನ್ನ ಮಧ್ಯಸ್ಥಿಕೆಯಿಂದ ಜೀವಿಗಳಿಗೆಲ್ಲ ಪರಮಾತ್ಮನ ಕ್ಷಮೆ ಮತ್ತು ದಯೆ ಸಿಗುವಂತೆ ಮಾಡುತ್ತಾಳೆ.

ಇಂಥ ಮಹಾಮಹಿಮಳ ನೆರವನ್ನು ಪಡೆಯುವ ಯತ್ನದಲ್ಲಿ ರಾಮಾನುಜ ಸಿದ್ಧಾಂತಕ್ಕೆ ಆಧಾರಸ್ತಂಭವಾದ ಯಾಮುನಾಚಾರ್ಯರ ಚತುಶ್ಲೋಕಿಯು ಆಕೆಯನ್ನು ಹಾಡಿ ಹೊಗಳಿದ ಮೊದಲ ಸ್ತೋತ್ರ. "ವಿಷ್ಣುವು ನಿನ್ನ ಪ್ರಿಯ. ಆದಿಶೇಷನು ನಿನ್ನ ಹಾಸಿಗೆ ಮತ್ತು ಪೀಠ. ವೇದಸ್ವರೂಪನಾದ ಗರುಡನು ನಿನ್ನ ವಾಹನ. ಜಗತ್ತನ್ನೇ ಮೋಹಗೊಳಿಸುವ ಮಾಯೆಯು ನಿನ್ನ ಪರದೆ. ಬ್ರಹ್ಮನೇ ಮುಂತಾದ ದೇವತೆಗಳು ನಿನ್ನ ದಾಸರು. ನಾನು ನಿನ್ನ ಕಿಂಕರ, ನಿನಗೆ ಶರಣಾಗತ. ನೀನು ಲೋಕೈಕೇಶ್ವರಿ, ಲೋಕನಾಥನ ಪ್ರಿಯೆ. ನಿನ್ನ ಕರುಣಾಕಟಾಕ್ಷದಿಂದ ಇಡೀ ಜಗತ್ತೂ ರಕ್ಷಿತವಾಗಿದೆ. ವಿಷ್ಣುವಿನ ಎಲ್ಲ ಶಾಂತ, ಅನಂತ ರೂಪಗಳೂ, ಅವತಾರಗಳೂ ನಿನ್ನ ರೂಪಗಳೊಂದಿಗೆ ಯಾವಾಗಲೂ ಮಿಳಿತವಾಗಿವೆ. ನಿನ್ನ ಅನುಗ್ರಹ, ಕರುಣೆಗಳಿಲ್ಲದೆ ಸಂಸಾರದಿಂದ ಮುಕ್ತಿ ಸಿಗುವುದಿಲ್ಲ" ಎಂಬುದು ಚತುಶ್ಲೋಕಿಯ ಸಾರ. ಕೂರೇಶರ ಶ್ರೀಸ್ತವ, ಪರಾಶರಭಟ್ಟರ ಶ್ರೀಗುಣರತ್ನಕೋಶ, ನಂಜೀಯರ್‌ರವರ ಶ್ರೀಸೂಕ್ತಭಾಷ್ಯ, ಪಿಳ್ಳೈ ಲೋಕಾಚಾರ್ಯರ ಶ್ರೀವಚನಭೂಷಣ, ವೇದಾಂತದೇಶಿಕರ ಶ್ರೀಸ್ತುತಿ–ಇವೂ ಲಕ್ಷ್ಮಿಯನ್ನು ಸ್ತುತಿಸುತ್ತವೆ.

ವೇದ, ವಿಷ್ಣುಪುರಾಣ, ಪಾಂಚರಾತ್ರ ಆಗಮ, ರಾಮಾಯಣ, ಮಹಾಭಾರತ, ಭಾಗವತ, ದಿವ್ಯ ಪ್ರಬಂಧ, ಇವುಗಳಲ್ಲೆಲ್ಲ ಲಕ್ಷ್ಮಿಗೆ ಸ್ಥಾನವನ್ನು ನೀಡ

ಲಾಗಿದೆ. ಆದರೆ ರಾಮಾನುಜರು ತಮ್ಮ ಸಿದ್ಧಾಂತದಲ್ಲಿ ಶ್ರೀಸಂಪ್ರದಾಯವನ್ನು ಸೇರಿಸುವುದರ ಮೂಲಕ ಲಕ್ಷ್ಮಿಗೆ ಅತ್ಯುನ್ನತ ಸ್ಥಾನವನ್ನು ಕೊಟ್ಟಿದ್ದಾರೆ. ಪಾಪಕಾರ್ಯಗಳಿಂದ ಕಲುಷಿತನಾದ ಜೀವಾತ್ಮನು ನೇರವಾಗಿ ತಂದೆ ವಿಷ್ಣುವಿನ ಕರುಣೆಯನ್ನು ಪಡೆಯಲಾರ. ಅದಕ್ಕಾಗಿ ಅವನು ತಾಯಿ ಲಕ್ಷ್ಮಿಯನ್ನು ಮರೆಹೊಕ್ಕು ಆಕೆಯ ಕರುಣೆಯಿಂದ ಭಗವಂತನ ಅನುಗ್ರಹವನ್ನು ಸಂಪಾದಿಸಿಕೊಳ್ಳಬೇಕು. ಆದುದರಿಂದಲೇ ಈ ಸಿದ್ಧಾಂತದಲ್ಲಿ ಲಕ್ಷ್ಮಿಗೆ ಮಹತ್ವದ ಸ್ಥಾನವಿದೆ. ಈಕೆಯಿಂದಲೇ ರಾಮಾನುಜ ಸಿದ್ಧಾಂತವು **ಶ್ರೀವೈಷ್ಣವ ಮತ**ವೆನಿಸಿಕೊಂಡಿತು.

## 2. ಅಚಿತ್ ಸ್ವರೂಪ

ಅಚಿತ್ ಎಂಬುದು ಜಡ, ಅಚೇತನ, ಪ್ರಕೃತಿ, ಪ್ರಪಂಚ ಎಂದೂ ಕರೆಯಲ್ಪಟ್ಟಿದೆ. ಇದರಲ್ಲಿ ಪ್ರಕೃತಿ, ಶುದ್ಧಸತ್ವ, ಕಾಲ ಈ ಮೂರೂ ಸೇರಿವೆ. ಪ್ರತ್ಯಕ್ಷ, ಅನುಮಾನಗಳಿಗೆ ನಿಲುಕದ ಪ್ರಕೃತಿಯು ಇಪ್ಪತ್ತನಾಲ್ಕು ವಿಧವಾಗಿದೆ; ಕ್ಷಣ, ನಾಡಿ, ಮುಹೂರ್ತ, ಹಗಲು, ರಾತ್ರಿ, ದಿನ, ಪಕ್ಷ, ಮಾಸ, ವರ್ಷ ಮುಂತಾದ ವಿಭಾಗವುಳ್ಳದ್ದು ಕಾಲ; ರಜಸ್ತಮೋಗುಣಗಳ ಸಂಪರ್ಕವಿಲ್ಲದಿರುವ ವೈಕುಂಠವು ಶುದ್ಧ ಸತ್ವ. ಅಚಿತ್ತು ಜ್ಞಾನಶೂನ್ಯ, ವಿಕಾರಾಸ್ಪದ ಆಗಿ ಚೈತನ್ಯವಿಲ್ಲದಿರುವ ವಸ್ತು. ಇದು ಕಾಲಕ್ಕೆ ಅನುಗುಣವಾಗಿ ಬದಲಾವಣೆಯನ್ನು ಹೊಂದುತ್ತಿರುತ್ತದೆ. ಬಾಲ್ಯ, ಯೌವನ, ವಾರ್ಧಿಕ್ಯ ಕಾಲದಲ್ಲಿ ಶರೀರದಲ್ಲಾಗುವ ವ್ಯತ್ಯಾಸಗಳು ಈ ವಿಕಾರಕ್ಕೆ ಉದಾಹರಣೆ. ಮಾನವನಲ್ಲಿಯೇ ಅಲ್ಲದೆ ಗಿಡ, ಮರ, ಕಲ್ಲು ಮುಂತಾದುವುಗಳಲ್ಲಿಯೂ ಈ ವಿಕಾರಗಳನ್ನು ಕಾಣಬಹುದು. ಮಾನವನದು ಜಂಗಮ ಶರೀರ, ಶಿಲೆ ವೃಕ್ಷಗಳದ್ದು ಸ್ಥಾವರ ಶರೀರ.

ಸತ್ವರಜಸ್ತಮೋಗುಣಗಳು ಸಮಾವಸ್ಥೆಯಲ್ಲಿದ್ದರೆ ಪ್ರಳಯವೂ, ವಿಷಮಾವಸ್ಥೆಯಲ್ಲಿದ್ದರೆ ಸೃಷ್ಟಿಯೂ ಆಗುತ್ತದೆ. ಶುದ್ಧಸತ್ವವು ಪ್ರಳಯಕಾಲದಲ್ಲಿ ಸೂಕ್ಷ್ಮವಾಗಿರುತ್ತದೆ. ಸ್ಥೂಲ ಪ್ರಪಂಚವಾಗಿ ಪರಿಣಮಿಸುವ, ಸತ್ವರಜಸ್ತಮೋಗುಣಗಳಿಂದ ಕೂಡಿದ ಮಿಶ್ರಸತ್ವವು ವಿಕಾರಾಸ್ಪದವಾದ ಮಹತ್ತಿಗೆ ಮೂಲವಾದಾಗ ಪ್ರಕೃತಿ ಎಂದೂ, ಜೀವರುಗಳನ್ನು ವಿಷಯಗಳಲ್ಲಿ ತಳ್ಳಿ ಅವರ ಜ್ಞಾನಾನಂದಗಳಿಗೆ ವಿರೋಧವನ್ನುಂಟುಮಾಡಿದಾಗ ಅವಿದ್ಯೆ ಎಂದೂ, ಚಿತ್ರವಿಚಿತ್ರವಾದ ಸೃಷ್ಟಿಯನ್ನು ಉಂಟುಮಾಡಿದಾಗ ಮಾಯೆ ಎಂದೂ ಕರೆಸಿಕೊಳ್ಳುತ್ತದೆ.

ಮೂಲಪ್ರಕೃತಿ; ಮಹತ್; ಸಾತ್ವಿಕ, ರಾಜಸ, ತಾಮಸ ಎಂಬ ಮೂರು ವಿಧವಾದ ಅಹಂಕಾರ; ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚತನ್ಮಾತ್ರೆಗಳು; ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬ ಪಂಚಭೂತಗಳು; ತ್ವಕ್, ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣಗಳೆಂಬ ಪಂಚಜ್ಞಾನೇಂದ್ರಿಯಗಳು; ವಾಕ್,

ಪಾದ, ಪಾಣಿ, ಪಾಯು, ಉಪಸ್ಥಗಳೆಂಬ ಪಂಚ ಕರ್ಮೇಂದ್ರಿಯಗಳು; ಮನಸ್ಸು ಎಂಬ ವಿಶೇಷ ಇಂದ್ರಿಯ–ಎಂಬೀ ಇಪ್ಪತ್ತನಾಲ್ಕು ತತ್ತ್ವಗಳಿಂದ ಈ ಬ್ರಹ್ಮಾಂಡ ಮತ್ತು ಅದರಲ್ಲಿರುವ ಅಚೇತನ ವಸ್ತುಗಳು ಆಗಿವೆ. ಜೀವಾತ್ಮ ಎಂಬ ಅಪ್ರಾಕೃತ ವಾದ ನಾನು ಎನ್ನುವುದು ಇಪ್ಪತ್ತೈದನೆಯ ತತ್ತ್ವ; ಈಶ್ವರನು ಇಪ್ಪತ್ತಾರನೆಯ ತತ್ತ್ವ.

ಭೌತ ಪ್ರಪಂಚವು ಹಾಗೂ ಅದರ ಅಗಣಿತ ಭಿನ್ನ ಪ್ರಕಾರಗಳು ಪ್ರಕೃತಿಯ ಬೇರೆಬೇರೆ ರೂಪಗಳಾಗಿದ್ದು ಅದನ್ನು ಬಿಟ್ಟಿರಲಾರದೆ ಇವೆ. ವಿಶ್ವವೆಂಬ ಈ ಬ್ರಹ್ಮಾಂಡ ವೃಕ್ಷಕ್ಕೆ ಪ್ರಕೃತಿಯೇ ಬೀಜ, ಬುದ್ಧಿಯೇ ತಾಯಿಬೇರು, ಅಹಂಕಾರವೇ ಚಿಗುರು, ಮನಸ್ಸು ಮತ್ತು ಇಂದ್ರಿಯಗಳೇ ಒಳ ಬೇರುಗಳು. ಪಂಚತನ್ಮಾತ್ರೆ ಗಳೇ ಶಾಖೆಗಳು, ಪಂಚಮಹಾಭೂತಗಳೇ ಕವಲುಗಳು. ಈ ಪುರಾತನ ವೃಕ್ಷವು ದುಃಖ, ಕಷ್ಟ, ನೋವು, ಆಪತ್ತುಗಳೆಂಬ ಕಹಿ ಫಲಗಳನ್ನೂ, ಸುಖ ನಲಿವು ಸಂತೋಷಗಳೆಂಬ ಸಿಹಿ ಫಲಗಳನ್ನೂ ಧರಿಸಿದ್ದು, ಸಕಲ ಪ್ರಾಣಿಗಳಿಗೂ ಆಧಾರ ವಾಗಿದೆ. ಈ ವೃಕ್ಷವನ್ನು ತತ್ತ್ವಜ್ಞಾನರೂಪಿಯಾದ ಖಡ್ಗದಿಂದ ಕತ್ತರಿಸಿದರೆ ಅಂದರೆ ಜ್ಞಾನಿಯಾದವನು ಜನ್ಮಜರಾಮೃತ್ಯುಗಳಿಗೆ ನೆಲೆಯಾದ, ಬಿಗಿಯಾದ ಈ ಪಾಶಗಳನ್ನು ಹರಿದೊಗೆದರೆ, ಮುಕ್ತನಾಗಬಲ್ಲ.

ಜ್ಞಾನ, ಸುಖ, ಆನಂದಗಳಿಗೆ ಕಾರಣವಾದ ಸತ್ವಗುಣ; ವಿಷಯ ಭೋಗ ದಲ್ಲಿ ಆಸೆ ಹಾಗೂ ಕಾಮಾಸಕ್ತಿ, ದುಃಖಗಳಿಗೆ ಕಾರಣವಾದ ರಜೋಗುಣ; ಸೋಮಾರಿತನ, ನಿದ್ದೆ, ವಿಪರೀತ ಜ್ಞಾನ, ಅವಿದ್ಯೆ, ಗಮನವಿಲ್ಲದಿರುವಿಕೆ ಇವು ಗಳಿಗೆ ಕಾರಣವಾದ ತಮೋಗುಣ – ಎಂಬೀ ತ್ರಿಗುಣಾತ್ಮಕವಾದ ಪ್ರಕೃತಿಯು ಅಂತರ್ಯಾಮಿಯಾದ ಸರ್ವೇಶ್ವರನ ದೇಹವಾಗಿದ್ದು, ಅವನ ಸಂಕಲ್ಪಕ್ಕೆ ಅಧೀನವಾಗಿ, ಅವನ ಲೀಲಾ ವಿಭೂತಿಯು ಪ್ರಕಟಗೊಳ್ಳಲು ನೆರವು ನೀಡುತ್ತದೆ. ಎಲ್ಲ ಭೌತವಸ್ತುಗಳಲ್ಲಿಯೂ ಹೆಚ್ಚು ಅಥವಾ ಕಡಿಮೆ ಪ್ರಮಾಣದಲ್ಲಿ ಪಂಚಭೂತ ಗಳು ಅಡಗಿವೆ. ಪಂಚೀಕರಣ ಎಂದರೆ ಪಂಚಭೂತಗಳ ಕೂಡುವಿಕೆಯಿಂದ ಆದ ಪ್ರಾಣಿ, ಸಸ್ಯ, ಶಿಲೆಗಳಲ್ಲೆಲ್ಲ ಪರಮಾತ್ಮನು ಅಂತರ್ಯಾಮಿಯಾಗಿ ನೆಲೆಸಿದ್ದಾನೆ.

ಶರೀರಕ್ಕೂ ಆತ್ಮಕ್ಕೂ ಇರುವ ಸಂಬಂಧವು ಪ್ರಪಂಚಕ್ಕೂ ಪರಮಾತ್ಮನಿಗೂ ಇದೆ. ಜೀವಾತ್ಮನಂತೆ ಪ್ರಕೃತಿಯೂ ಪರಮಾತ್ಮನ ಶರೀರ. ಆದರೂ ಜೀವ–ಪ್ರಕೃತಿ ಗಳಲ್ಲಿ ಭಿನ್ನತೆಯುಂಟು. ಪ್ರಕೃತಿಯು ಜಡ, ಅಚೇತನ, ಅಸ್ವತಂತ್ರ ಆಗಿದ್ದು ಅದಕ್ಕೆ ಅರಿವು ಇರುವುದಿಲ್ಲ. ಆದರೆ ಸ್ವತಂತ್ರ, ಚೇತನ ಆಗಿರುವ ಜೀವಾತ್ಮನು ತನ್ನ ಬುದ್ಧಿಶಕ್ತಿಯಿಂದ ಅನೇಕ ಸಾಧನಗಳನ್ನು ನಿರ್ಮಿಸಿಕೊಂಡು, ತನ್ನ ಜೀವನ ವನ್ನು ವೈವಿಧ್ಯಮಯವಾಗಿ ಮಾಡಿಕೊಂಡು, ಪ್ರಕೃತಿ–ಸಮಾಜಗಳ ಮೇಲೆ ಹತೋಟಿ ಯನ್ನಿಟ್ಟುಕೊಂಡು, ಅದನ್ನು ತನ್ನ ಭೋಗ್ಯವಸ್ತುವಾಗಿ ಮಾಡಿಕೊಂಡಿದ್ದಾನೆ.

"Nature and Man need a designing and directing power to grow" ಎಂಬುದಾಗಿ ಖ್ಯಾತಿವೆತ್ತ ವಿಜ್ಞಾನಿಗಳು ಹೇಳಿರುವಂತೆ, ನ್ಯೂನತೆ ಇಲ್ಲದ ಹಾಗೂ ಪೂರ್ಣತೆ ಇರುವ ಪರಮಾತ್ಮನಿಂದ ಮಾರ್ಗದರ್ಶನ, ಸಹಾಯ ಪಡೆವ ಜೀವಾತ್ಮ-ಪ್ರಕೃತಿಗಳೆರಡೂ ಅವನ ಅಧೀನವಾಗಿವೆ.

## 3. ಚಿತ್ ಸ್ವರೂಪ

ಚಿತ್ ಎಂಬುದಕ್ಕೆ ಚೇತನ, ಪ್ರತ್ಯಗ್ರೂಪ, ಆತ್ಮ, ಕರ್ತೃ, ಜೀವ ಎಂದೂ ಹೆಸರುಗಳುಂಟು. ಜ್ಞಾನಕ್ಕೆ ಆಶ್ರಯವಾಗಿರುವುದು ಚೇತನ; ತನಗೆ ತಾನೆ ಭಾಸವಾಗುವುದು ಪ್ರತ್ಯಗ್ರೂಪ; ಪರಾತ್ಮನಿಗೆ ಶೇಷಭೂತವಾಗಿರುವುದು ಹಾಗೂ ಶರೀರ ಸಂಬಂಧವುಳ್ಳದ್ದಾಗಿರುವುದು ಆತ್ಮ; ಪರಾತ್ಮನಿಗೆ ಅಧೀನವಾಗಿ ಸಂಕಲ್ಪ ಮಾಡುವವನು ಕರ್ತೃ; ಅಣುರೂಪವಾಗಿರುವುದು ಜೀವ. ಅಣುರೂಪದಲ್ಲಿದ್ದರೂ ಇದಕ್ಕೆ ಜ್ಞಾನಾನಂದ, ಇಚ್ಛಾಕ್ರಿಯೆಗಳುಂಟು ಹಾಗೂ ಇದು ಸಂಕೋಚ–ವಿಕಾಸ ಆಗಬಲ್ಲುದು. ಇದು ಅಚಿತ್, ದೇಹ, ಇಂದ್ರಿಯ, ಜ್ಞಾನ, ಮನಸ್ಸು, ಪ್ರಾಣ, ಬುದ್ಧಿಗಳಿಂದ ಬೇರೆಯಾದುದು. ನಾನು ತಿಳಿಯುವೆ, ನಾನು ಕೇಳುವೆ, ನಾನು ನೋಡುವೆ, ನನ್ನ ಶರೀರ, ನನ್ನ ಪ್ರಾಣ, ಮನಸ್ಸಿಗೆ ಗೊತ್ತಾಗುತ್ತದೆ ಎಂಬ ಹೇಳಿಕೆಗಳು ಇದನ್ನು ಸಮರ್ಥಿಸುತ್ತವೆ. ಪ್ರಾಣ ಮತ್ತು ಇಂದ್ರಿಯಗಳು ಜೀವಾತ್ಮನ ಉಪಕರಣಗಳು. ಅಂತರಂಗಾವಸ್ಥೆಯ ಮತ್ತು ಬಾಹ್ಯ ವಿಷಯಗಳ ಜ್ಞಾನವನ್ನು ಮನಸ್ಸು ಆತ್ಮನಿಗೆ ಒದಗಿಸಿಕೊಡುತ್ತದೆ. ಜೀವಾತ್ಮನು ಬಾಹ್ಯೇಂದ್ರಿಯಗಳಿಗೆ ಗೋಚರವಾಗುವುದಿಲ್ಲ.

ದೀಪವು ಬೆಳಕನ್ನು ಹೊರಚೆಲ್ಲುವಂತೆ ಆತ್ಮನು ಜ್ಞಾನವನ್ನು ಹರಡುತ್ತಾನೆ, ಸುಖ ದುಃಖಗಳನ್ನೂ, ದೇಶಕಾಲಗಳಿಂದ ದೂರವಾದುದನ್ನೂ ಗ್ರಹಿಸುತ್ತಾನೆ. ಭಗವಂತನ ಜ್ಞಾನದಂತೆ ಜೀವಾತ್ಮನ ಜ್ಞಾನವೂ ನಿತ್ಯ, ಸ್ವಯಂ ಪೋಷಕ, ಸರ್ವವ್ಯಾಪಕ ಆಗಿದ್ದರೂ, ಕರ್ಮದ ದೋಷಗಳಿಂದ ಅದು ತಾತ್ಕಾಲಿಕವಾಗಿ ಸಂಕುಚಿತವಾಗಿರುತ್ತವೆ. ಜೀವನಿಗೆ ಸಂಭವಿಸುವ ಭಿನ್ನ ದೆಸೆಗಳು ಹಾಗೂ ಪರಿವರ್ತನಗಳು ಅವನ ಜ್ಞಾನದ ವೃದ್ಧಿ, ಕ್ಷೀಣತೆಗಳನ್ನು ಅನುಸರಿಸುತ್ತವೆ. "ಆತ್ಮನು ಜ್ಞಾನಾಶ್ರಯ, ಅವ್ಯಕ್ತ, ಅಚಿಂತ್ಯ, ಅವಯುವರಹಿತ, ವಿಕಾರರಹಿತ, ನಿತ್ಯ, ಸರ್ವಗತ, ಸ್ಥಾಣು, ಅಚಲ, ಸನಾತನ, ಶಾಶ್ವತ ಆಗಿದ್ದಾನೆ. ಅವನನ್ನು ಕತ್ತಿಯು ಕತ್ತರಿಸಲಾರದು, ಬೆಂಕಿಯು ಸುಡಲಾರದು, ನೀರು ನೆನೆಸಲಾರದು, ಗಾಳಿ ಒಣಗಿಸಲಾರದು. ಅಂದರೆ ಆತ್ಮನು ಅವಿನಾಶಿ."

ಜೀವಾತ್ಮನ ದುಃಖ, ಬಂಧನಗಳಿಗೆ ಅಚಿತ್ತು ಮೂಲಕಾರಣ. ಹಾಗೆಯೇ ಅವನ ಸಂತೋಷ, ಸ್ವಾತಂತ್ರ್ಯಗಳಿಗೆ ಈಶ್ವರನು ಮೂಲಕಾರಣ. ಈಶ್ವರನ ಅಧೀನ

ಕೈಕೊಳ್ಳಪಟ್ಟು, ಅವನ ಅಂಶ, ಶೇಷ ಎನಿಸಿದ ಜೀವಕ್ಕೆ ಅವನ ಬೆಂಬಲ, ಸಹಕಾರ ಯಾವಾಗಲೂ ಇರುತ್ತದೆ. ಈಶ್ವರಾವಲಂಬಿಯಾದ ಜೀವಾತ್ಮನು ಈ ಲೋಕದಲ್ಲಿರುವುದು ಪರಮಾತ್ಮನ ಉದ್ದೇಶಪೂರ್ತಿಕೆಗಾಗಿಯೇ. ಪೂರ್ವಜನ್ಮದ ಕರ್ಮದ ಪರಿಣಾಮವಾಗಿ ಉಂಟಾಗಿರುವ ಪ್ರಕೃತಿಯ ಬಂಧನದಿಂದ ಬಿಡಿಸಿಕೊಂಡು ಪರಮಾತ್ಮನೊಂದಿಗೆ ಬೆರೆಯಲು ಯತ್ನಿಸುವುದೇ ಜೀವಾತ್ಮನ ಗುರಿ.

ಜೀವಾತ್ಮರು **ಮೂರು ವಿಧ.** ಅವಿದ್ಯೆ, ಸ್ವಾರ್ಥಗಳಿಂದ ಈ ಸಂಸಾರದಲ್ಲಿ ಹುಟ್ಟಿ ಕರ್ಮದ ಫಲವನ್ನು ಅನುಭವಿಸುವವರು **ಬದ್ಧ**ರು. ಸಂಸಾರಿಗಳಲ್ಲಿ ಸ್ವರೂಪ ಭೇದವಿಲ್ಲದಿದ್ದರೂ, ದೇಹಭೇದದಿಂದ ಏರ್ಪಟ್ಟ ವರ್ಣಭೇದವು ಅಸಹಜವಾದುದು. ಸಂಸಾರಿಗಳಾದ ಈ ಬದ್ಧ ಜೀವರಲ್ಲಿಯೂ ಸಹ ಭೋಗಾಪೇಕ್ಷೆಯುಳ್ಳವರು ಮತ್ತು ಮೋಕ್ಷಾಪೇಕ್ಷೆಯುಳ್ಳವರು ಎಂದು ಎರಡು ವಿಧ. ಕರ್ಮ ಜ್ಞಾನ ಭಕ್ತಿಗಳಿಂದ ಈ ಸಂಸಾರಬಂಧನದಿಂದ ಬಿಡುಗಡೆ ಹೊಂದಿದವರು **ಮುಕ್ತ**ರು. ಸಂಸಾರದ ರುಚಿಯನ್ನು ಕಾಣದೆ ವೈಕುಂಠದಲ್ಲಿ ಆನಂದದಿಂದ ಇರುವವರು **ನಿತ್ಯ**ರು. ಈ ಮೂರು ರೀತಿಯ ಜೀವರೂ ಪರಮಾತ್ಮನಿಗೆ ಅಧೀನರೇ ಆಗಿದ್ದಾರೆ. ಸ್ವ-ಸ್ವಾಮಿ, ಪಿತಾ-ಪುತ್ರ, ಆಧಾರ-ಆಧೇಯ, ರಕ್ಷ್ಯ-ರಕ್ಷಕ, ಶೇಷ-ಶೇಷಿ, ಭರ್ತೃ-ಭಾರ್ಯಾ, ಜ್ಞಾತೃ-ಜ್ಞೇಯ, ಶರೀರ-ಶರೀರಿ, ಭೋಕ್ತೃ-ಭೋಗ್ಯ ಎಂಬಂತೆ **ಜೀವ-ಈಶ್ವರ**ರ ಸಂಬಂಧವು ನವವಿಧವಾಗಿರುತ್ತದೆ. ಈ **ನವವಿಧ ಸಂಬಂಧ**ಗಳ ಸಾಕ್ಷಾತ್ಕಾರದಿಂದ ಜೀವರು ಈಶ್ವರನನ್ನು ಸೇರಬಹುದು. ಮುಖ್ಯವಾಗಿ ಬದ್ಧ ಜೀವಾತ್ಮನು ಮುಕ್ತ ಜೀವನಾಗಲು ಯತ್ನಿಸಿ ನಿತ್ಯಜೀವನಾಗಲು ಆಶಿಸಬೇಕು. ಪರಮಾತ್ಮನು ನಮ್ಮ ಹೃದಯದಲ್ಲಿ ನಮ್ಮ ಉದ್ಧಾರದ ಸಲುವಾಗಿಯೇ ನೆಲಸಿ ನಮ್ಮ ಆಗುಹೋಗುಗಳನ್ನು ನೋಡುತ್ತಿದ್ದಾನೆಂಬ ಅರಿವು ನಮಗೆ ಸದಾ ಇದ್ದರೆ, ನಮ್ಮಲ್ಲಿ ಪರಾಗ್ದೃಷ್ಟಿ ಹೋಗಿ ಪ್ರತ್ಯಗ್ದೃಷ್ಟಿ ಉಂಟಾದರೆ, ಅದರಿಂದ ನಮ್ಮ ಉದ್ಧಾರವು ನಿಯತ, ನಿಶ್ಚಿತ ಎಂಬುದರಲ್ಲಿ ಸಂದೇಹವಿಲ್ಲ.

ಋಣಾನುಬಂಧದಿಂದ ವಿವಾಹವಾಗಿ ಒಂದಾದ ಗಂಡುಹೆಣ್ಣು ಇನ್ನೊಂದು ಜೀವಿಯ ಆತ್ಮದ ಪುನರ್ಜನ್ಮಕ್ಕೆ ಅವಕಾಶವನ್ನು ಕಲ್ಪಿಸುವ ಕಾಲುವೆಯಾಗುತ್ತಾರೆ. ಆದರೂ ತಾಯಿತಂದೆಯರೇ ಮಕ್ಕಳ ಎಲ್ಲ ಪ್ರವೃತ್ತಿಗೂ ಕಾರಣರಾಗಲಾರರು. ಅನಿತ್ಯವಾದ ಹಾಗೂ ನಾಶವಾಗುವ ಶರೀರವೆಂಬ ಸಾಧನದ ಮೂಲಕ ಆತ್ಮವು ಪ್ರಕಟಗೊಳ್ಳಲು, ಬಾಹ್ಯಜಗತ್ತಿನೊಡನೆ ಸಂಬಂಧವನ್ನು ಸ್ಥಾಪಿಸಿಕೊಳ್ಳಲು, ತನ್ನ ಅಂತಿಮ ಗುರಿಯನ್ನು ತಲಪಲು, ಪರಿಪೂರ್ಣತೆಯೆಡೆಗೆ ಸಾಗಲು, ಅವಶ್ಯಕವಾದ ಜ್ಞಾನಾನುಭವಗಳನ್ನು ಗಳಿಸಲು, ಯತ್ನಿಸುತ್ತಿರುತ್ತದೆ. ಈ ಸ್ಥಿತಿಯ ನಿರ್ಮಾಣಕ್ಕೆ ಬೇಕಾದ ಸ್ವಾತಂತ್ರ್ಯವು ಜೀವನಿಗೆ ಈಶ್ವರನಿಂದ ಕೊಡಲ್ಪಟ್ಟಿದೆ. ಈಶ್ವರದತ್ತವಾದ ಸ್ವಾತಂತ್ರ್ಯವನ್ನು ಜೀವನು ತನಗೆ ಇಷ್ಟ ಬಂದಂತೆ ಉಪಯೋಗಿಸುವ ಅವಕಾಶ ಕೊಟ್ಟಿರುವುದು, ಜೀವನಲ್ಲಿರುವ ದೈವೀ ಸಂಪತ್ತಿನ ವಿಕಾಸಕ್ಕಾಗಿಯೇ. ತನ್ನ ಈ

ಕೆಲಸಕ್ಕೋಸುಗ ಆತ್ಮವು ಶರೀರದ ಮೇಲೆ ಹತೋಟಿಯನ್ನು ಹೊಂದಿ, ಅದನ್ನು ತನ್ನ ಅಧೀನದಲ್ಲಿಟ್ಟುಕೊಂಡಿದೆ. ಶರೀರದ ಯಾವುದೇ ಭಾಗದಲ್ಲಿ ತೋರಿಬರುವ ಸುಖ ದುಃಖ, ನೋವು ನಲಿವುಗಳೆಲ್ಲವನ್ನೂ ಜೀವವೂ ಶರೀರದೊಂದಿಗೆ ಅನುಭವಿಸ ಬೇಕಾಗುತ್ತದೆ.

ಮಾನವ ಶರೀರವೆಂಬ ಅದ್ಭುತವಾದ ಯಂತ್ರದಲ್ಲಿ ಅದರ ವ್ಯವಹಾರಗಳನ್ನೆಲ್ಲ ನಡೆಸಲು ಕೈ, ಕಾಲು, ಪಾಣಿ, ಗುದ, ಉಪಸ್ಥ ಎಂಬ ಐದು ಕರ್ಮೇಂದ್ರಿಯ ಗಳಿವೆ. ಸೃಷ್ಟಿಯೊಳಗಣ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಸೇರಿರುವ ಬಾಹ್ಯವಸ್ತುಗಳು ಹಾಗೂ ಶಬ್ದ, ರೂಪ, ರಸ, ಸ್ಪರ್ಶ, ಗಂಧಗಳೆಂಬ ವಿಷಯಗಳು ಇವುಗಳೆಲ್ಲದರ ಜ್ಞಾನಾನುಭವವನ್ನು ಪಡೆಯಲು ಮೂಗು, ಕಿವಿ, ಕಣ್ಣು, ನಾಲಿಗೆ, ಚರ್ಮ ಎಂಬ ಐದು ಜ್ಞಾನೇಂದ್ರಿಯಗಳೂ ಇವೆ. ವ್ಯವಹಾರಮಾಡಲು ಬೇಕಾದ ಪ್ರೇರಣೆಯನ್ನು ಕರ್ಮೇಂದ್ರಿಯಗಳಿಗೆ ನೀಡಲು ಹಾಗೂ ಸಂಸ್ಕಾರದ ಏಕೀಕರಣ ಮಾಡುವ ಶಕ್ತಿಯನ್ನು ಜ್ಞಾನೇಂದ್ರಿಯಗಳಿಗೆ ನೀಡಲು ಅಂತಃಕರಣ ಅಥವಾ ಮನಸ್ಸು ಎಂಬ ಹನ್ನೊಂದನೆಯ ಇಂದ್ರಿಯ ಒಂದಿದೆ. ಈ ಮನಸ್ಸೇ ಆಂತರಿಕ ಜ್ಞಾನದ ಸಾಧನ.

ಬೇಟೆಗಾರನ ಶಬ್ದದಿಂದ ಜಿಂಕೆ, ಹೆಣ್ಣಾನೆಯ ಸ್ಪರ್ಶದಿಂದ ಗಂಡಾನೆ, ದೀಪದ ರೂಪದಿಂದ ದೀಪದ ಹುಳು, ಹೂವಿನ ಪರಿಮಳ ಗಂಧದಿಂದ ದುಂಬಿ, ಗಾಳಕ್ಕೆ ಸಿಕ್ಕಿಸಿದ ಹುಳುವಿನ ರುಚಿಯಿಂದ ಮೀನು—ಹೀಗೆ ಈ ಐದು ವಿಷಯಗಳ ಇಂದ್ರಿಯಗಳಿಗೆ ಅಧೀನರಾದವರ ಅಂದರೆ ಕಾಂತದಾಸರ ಬದುಕು ಬಹು ಹೀನಾಯವಾಗುತ್ತದೆ. ಇದರಿಂದ ಮುಕ್ತರಾಗಲು ಶ್ರೀಕಾಂತನಾದ ಭಗವಂತನನ್ನು ಹೃದಯದಲ್ಲಿ ನಿಲ್ಲಿಸಿ ಆತನ ಮಾರ್ಗವನ್ನು ತಿಳಿದು ಅನುಸರಿಸಬೇಕು. ಈ ಕಾರಣದಿಂದಲೇ ಮಾನವನ ಅವಿವೇಕಿಯಾದ ಈ ಬಾಹ್ಯ ದಶೇಂದ್ರಿಯಗಳು ಮನಸ್ಸು ಎಂಬ ವಿವೇಕಿ ಅಂತರಿಂದ್ರಿಯಕ್ಕೆ ಅಧೀನವಾಗಿರಬೇಕು.

ಈ ಮನಸ್ಸಿನ ಭಾಗವಾಗಿ ಸಾರಾಸಾರ ವಿಚಾರಮಾಡಿ ಉತ್ತಮವಾದ ನಿರ್ಣಯವನ್ನು ತೆಗೆದುಕೊಳ್ಳುವ ಬುದ್ಧಿಯೊಂದಿದೆ. ಮನಸ್ಸು ಮತ್ತು ಶರೀರಗಳು ಒಂದೇ ನಾಣ್ಯದ ಎರಡು ಮುಖಗಳು. ಆದುದರಿಂದಲೇ ಅನೇಕ ಶಾರೀರಕ ರೋಗ ಗಳಿಗೆ ಮನೋವೇದನೆಗಳು ಕಾರಣವಾಗಿರಬಹುದು; ಅಥವಾ ಅನೇಕ ಮನೋ ವೇದನೆಗಳಿಗೆ ಶಾರೀರಕ ರೋಗಗಳು ಕಾರಣವಾಗಿರಬಹುದು. ದೇಹವೆಂಬ ಹೊಲ ಅಥವಾ ಕ್ಷೇತ್ರಕ್ಕೆ, ಆತ್ಮ ಎಂಬ ಹೊಲದೊಡೆಯ ಅಥವಾ ವೈಯಕ್ತಿಕ ಕ್ಷೇತ್ರಜ್ಞ ಇದ್ದಾನೆ. ಪರಮಾತ್ಮನು ಸಾರ್ವತ್ರಿಕ ಕ್ಷೇತ್ರಜ್ಞನೆನಿಸುತ್ತಾನೆ. ಕ್ಷೇತ್ರ ಮತ್ತು ಕ್ಷೇತ್ರಜ್ಞ ಈ ಎರಡರ ಸರಿಯಾದ ತಿಳಿವಳಿಕೆಯೇ ಬ್ರಹ್ಮ ಜ್ಞಾನ ಎನಿಸುತ್ತದೆ.

ಮಾನವನಲ್ಲಿ ಬುದ್ಧಿಯು ವಿಕಸಿತವಾಗಿರುವುದರಿಂದ ವಿವಿಧತೆಯಲ್ಲಿರುವ ಏಕತೆಯನ್ನು ತಿಳಿದುಕೊಳ್ಳಬಲ್ಲವನಾಗಿದ್ದಾನೆ.

ಮಾನವ ಜೀವಿಗಳಲ್ಲೆಲ್ಲ ದೈವೀ ಅಂಶವಿದ್ದು ಜೀವನಕ್ಕೆ ಒಂದು ಅರ್ಥ ಹಾಗೂ ಘನವಾದ ಉದ್ದೇಶ ಇರುತ್ತದೆ. ಜಾಗೃತ ಮನಸ್ಸಿನ ಮೂಲಕ ಪಡೆದ ಅನುಭವಗಳು ದಿನಗಳು ಕಳೆದಂತೆ ಮರೆತುಹೋದರೂ ಅವು ಸಂಸ್ಕಾರ ರೂಪದಲ್ಲಿ ಅಜಾಗೃತ ಅಥವಾ ಸುಪ್ತ ಮನಸ್ಸಿನ ಆಳದಲ್ಲಿ ಹುದುಗಿರುತ್ತವೆ. ಅತೀಂದ್ರಿಯ ಶಕ್ತಿ ಇದ್ದವರು ಮಾತ್ರ ಇದನ್ನು ನೋಡಬಹುದು. ಜೀವಿಯ ಪ್ರವೃತ್ತಿ, ಪ್ರತಿಭೆಗಳ ಮೇಲುಗೈಗೆ ಹಲವು ಜನ್ಮಗಳ ಸಾಧನೆಯ ಮೆಟ್ಟಲುಗಳನ್ನೇರಿ ಮುನ್ನಡೆಯಬೇಕಾಗುತ್ತದೆ.

ಮನುಷ್ಯನಿಗೆ ಲೋಕ ಜೀವನವನ್ನು ಗಂಟುಹಾಕುವುದೇ ಕರ್ಮ. ಅಂತರಂಗದಲ್ಲಿ ನೆಲೆ ನಿಂತ ಸ್ವಭಾವವು ಅವನ ಕರ್ಮ ಸಂಚಯದ ಫಲ. ಇಹಜೀವನದ ಎಲ್ಲ ಆಗುಹೋಗುಗಳೂ ಕರ್ಮದಿಂದಲೇ ಪ್ರೇರೇಪಿಸಲ್ಪಡುತ್ತವೆ. ಜ್ಞಾನೇಂದ್ರಿಯಗಳು ಅರಳುವುದೂ ಕರ್ಮದಿಂದಲೇ. ಈ ಜನ್ಮದ ವ್ಯಕ್ತಿತ್ವದ ಎಲ್ಲ ಸುಖದುಃಖ, ಒಳಿತು ಕೆಡುಕುಗಳೂ ಹಿಂದಿನ ಒಂದಿಲ್ಲೊಂದು ಜನ್ಮದ ಸಂಸ್ಕಾರದ ಫಲವೇ ಆಗಿರುತ್ತವೆ. ಶರೀರದಲ್ಲಿನ ಗ್ರಂಥಿಗಳ ಸ್ವರೂಪ ಹಾಗೂ ಚಟುವಟಿಕೆಗಳು ಪೂರ್ವಜನ್ಮದ ಕರ್ಮಗಳನ್ನು ಪ್ರತಿಬಿಂಬಿಸುತ್ತವೆ. ರೇಷ್ಮೆಯ ಹುಳುವು ತನ್ನಿಂದಲೇ ತನ್ನನ್ನುಬಂಧಿಸಿಕೊಳ್ಳುವಂತೆ ಜೀವಾತ್ಮನು ತನ್ನ ಕರ್ಮಗಳಿಂದಲೇ ತನ್ನನ್ನು ಬಂಧಿಸಿಕೊಳ್ಳುತ್ತಾನೆ.

ಸಂಸಾರ ಬಂಧನದ ಅವಸ್ಥೆಯಲ್ಲಿ ಕರ್ಮಗಳ ದೋಷದ ಫಲವಾಗಿ ಅಜ್ಞಾನವು ಕವಿದಾಗ "ಶರೀರವೇ ನಿತ್ಯ ಸತ್ಯವಾದುದು. ಜಗತ್ತಿನಲ್ಲಿ ಇಂದ್ರಿಯ ತೃಪ್ತಿಗಾಗಿ ಭೋಗಪಡುವುದೇ ಜೀವನದ ಮುಖ್ಯ ಗುರಿ. ಶರೀರಕ್ಕೆ ಭೋಗ ಜೀವನವನ್ನು ನಡೆಸಲು ಪೂರ್ಣವಾದ ಸ್ವಾತಂತ್ರ್ಯವಿದೆ" ಎಂಬ ಭ್ರಮೆ, ಆಲೋಚನೆ ಉಂಟಾಗುತ್ತದೆ. ದೇವರಿಗೆ ಸೇರಿದ, ಶೇಷನಾದ ಜೀವವು, ತನಗೆ ತನ್ನದೇ ಆದ ವ್ಯಕ್ತಿತ್ವವೊಂದಿದೆ, ತಾನು ಸ್ವತಂತ್ರ ಎಂದು ತಿಳಿದು ಅಹಂಕಾರಪಡುವುದೇ ಮುಖ್ಯವಾದ ಪಾಪಕಾರ್ಯ. ಅಹಂಕಾರ ಬಂದಾಗ ಜೀವ ಜಗತ್ತುಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವ ಪರಮಾತ್ಮನನ್ನು ಕಾಣಲು ಅಶಕ್ತನಾಗುತ್ತಾನೆ. ಪರಮಾತ್ಮನ ಅಂಶವೇ ಆದರೂ, ಮಾಯೆಯ ವ್ಯಾಮೋಹಕ ಶಕ್ತಿಯ ಪ್ರಭಾವಕ್ಕೆ ಸಿಲುಕಿದ ಜೀವಾತ್ಮನು ತನ್ನ ದೃಷ್ಟಿಯನ್ನು ಜಗತ್ತಿನ ಮೋಹ ವಸ್ತುಗಳ ಕಡೆಗೆ ತಿರುಗಿಸಿ, ಅದರ ಬಂಧನದಲ್ಲಿ ಸಿಲುಕಿ, ತನ್ನ ಜ್ಞಾನ ಕ್ರಿಯೆಗಳ ಪ್ರಾಬಲ್ಯವನ್ನು ಕಳೆದುಕೊಂಡು, ಇಂದ್ರಿಯ ಸುಖದಿಂದ ಉಂಟಾಗುವ ಇತರ ಪರಪೀಡನ ಕಾರ್ಯಗಳನ್ನು ಮಾಡುತ್ತ ಮುಂದುವರೆಯುತ್ತಾನೆ. ಇಂತಹ ತಪ್ಪು ಮಾರ್ಗದಲ್ಲಿ ಶರೀರವು ಉಪಯೋಗಿಸಲ್ಪಟ್ಟಾಗ ಅದು ಹುಟ್ಟುಸಾವುಗಳ ಬಂಧನಕ್ಕೆ ಕಾರಣವಾಗುತ್ತದೆ. ಆಗ

ಆತ್ಮವು ತನ್ನ ನಿಜಸ್ವರೂಪವನ್ನು ಮರೆತು ಅವನತಿಯ ದಾರಿಯತ್ತ ಕೆಳಕ್ಕೆ ಸಾಗ ತೊಡಗುತ್ತದೆ ಹಾಗೂ ಅಧಮ ಸ್ಥಿತಿಯಲ್ಲಿ ತೊಳಲುತ್ತದೆ.

ಆದರೆ ಶರೀರದೊಂದಿಗೆ ಸಂಪರ್ಕ ಹೊಂದಿದಾಗಲೂ ಸಹ ಆತ್ಮವು ತನ್ನ ನಿಜ ಸ್ವರೂಪವನ್ನು ಮರೆಯದೆ ವಿಕಾಸದತ್ತ ಮೇಲಕ್ಕೂ ಸಾಗಬಲ್ಲುದು. ಶರೀರವು ಸರಿ ಯಾದ ರೀತಿಯಲ್ಲಿ ಉಪಯೋಗಿಸಲ್ಪಟ್ಟರೆ, ಶ್ರೇಷ್ಠ ವಿಷಯವಾದ ಪರಮಾತ್ಮನ ಕಡೆಗೆ ಆತ್ಮನ ಗಮನವು ಹರಿದರೆ, ಆತನ ಸ್ಮರಣೆ, ಚಿಂತನೆಗಳಲ್ಲಿ ಜೀವಿಯು ನಿರತ ನಾದರೆ, ಮಾಯೆಯ ಶಕ್ತಿಯ ಪ್ರಭಾವ ಅವನಿಗೆ ಅಂಟಲಾರದು. ಸತ್ಯದೃಷ್ಟಿ ನಿಷ್ಠೆ ಹಾಗೂ ಸತ್ಯದ ಆರಾಧನೆಗಳಿಂದ ಸೌಂದರ್ಯದ ಸವಿಅನುಭವ ಸಿಗುತ್ತದೆ. ಅಂತರಂಗದ ಆನಂದಾನುಭವಗಳು ಇಹಪರಗಳೆರಡಕ್ಕೂ ಸಾಧನವಾಗುತ್ತವೆ. ಹೀಗೆ ಭಗವಂತ, ಭಾಗವತ ಕೈಂಕರ್ಯದಲ್ಲಿ ತೊಡಗಿಸಿದ ಶರೀರವು ಮುಕ್ತಿಗೆ ಕಾರಣ ವಾಗಲು ಸತ್ಸಂಗ ಬಹು ಆವಶ್ಯಕ.

**ಕರ್ಮಸಿದ್ಧಾಂತ** ಮತ್ತು **ಪುನರ್ಜನ್ಮ ಸಿದ್ಧಾಂತ**ಗಳಲ್ಲಿ ನಂಬಿಕೆ ಇಡ ಬೇಕು. ಜನ್ಮತಾಳಿದ ಮಗುವು ಸಂಸ್ಕಾರ ಶೂನ್ಯವಾಗಿ ಜನಿಸುವುದಿಲ್ಲ. ಅದು ಜನ್ಮಜನ್ಮಾಂತರದ ವಿಶೇಷ ಸಂಸ್ಕಾರಗಳನ್ನೆಲ್ಲ ಹೊತ್ತುಕೊಂಡೇ ಬಂದಿರುತ್ತದೆ. ಒಂದು ಜನ್ಮದಲ್ಲಿ ತನ್ನ ಇಚ್ಛೆಯ ಪೂರೈಕೆಗಾಗಿ ಮಾಡಿದ ಕರ್ಮಗಳಿಗೆ ಅನುಗುಣ ವಾಗಿ ಜೀವಾತ್ಮನಿಗೆ ಸಂಸ್ಕಾರದ ಅಂಕಗಳು ದೊರೆಯುತ್ತವೆ. ಮಾನವನಲ್ಲಿ ಸುಪ್ತ ವಾಗಿ ಅಡಗಿರುವ ಪೂರ್ಣತೆ ಮತ್ತು ಪವಿತ್ರತೆಗಳ ವಿಕಾಸವಾಗಲು ಹಲವಾರು ಜನ್ಮ ಗಳು ಅವಶ್ಯಕ. ಈ ಪೂರ್ಣತೆಯು ದೊರೆಯುವವರೆಗೆ ಜೀವಾತ್ಮನು ತನ್ನ ಹಿಂದಿನ ಜನ್ಮದ ಸಂಸ್ಕಾರದ ಫಲವನ್ನು ಹೊತ್ತು ಮತ್ತೆ ಜನ್ಮ ತಳೆದು ಮುಂದೆ ಹೋಗಬೇಕಾ ಗುತ್ತದೆ. ಯೋಗ ಜೀವನವನ್ನು ತ್ಯಜಿಸಿ ಭೋಗ ಜೀವನವನ್ನು ಅಪ್ಪಿ ಅದಕ್ಕೆ ಬೇಕಾದ ಕರ್ಮಗಳನ್ನೇ ಮಾಡಿದರೆ ಜೀವಿಯು ಸಂಸಾರಕೂಪದಲ್ಲಿ ಆಳವಾಗಿ ಸಿಕ್ಕುಹಾಕಿ ಕೊಂಡು, ದುಃಖ ನೋವುಗಳನ್ನು ಅನುಭವಿಸಬೇಕಾಗುತ್ತದೆ. ಇದರ ಪರಿಣಾಮ ವಾಗಿ ಮತ್ತೆಮತ್ತೆ ಅನೇಕ ಜನ್ಮಗಳನ್ನು ಎತ್ತಬೇಕಾಗುತ್ತದೆ. ಪುಣ್ಯ ಪಾಪದ ಫಲಗಳನ್ನು ಅನುಭವಿಸಲು ಸ್ವರ್ಗ-ನರಕಗಳಿಗೆ ಹೋಗಬೇಕಾದ ಅವಶ್ಯಕತೆ ಇರು ವುದಿಲ್ಲ; ಅದನ್ನು ಈ ಲೋಕದಲ್ಲಿಯೇ ಅನುಭವಿಸಬೇಕಾಗುತ್ತದೆ.

ಕರ್ಮದ ನಿಯಮವಿರುವುದು ಆತ್ಮದ ಪರಿಪಕ್ವತೆಗಾಗಿ. ಜೀವಾತ್ಮನ ಪುಣ್ಯ ಪಾಪಗಳಿಗೆ ಪರಮಾತ್ಮನು ಕಾರಣನಲ್ಲ. ಕರ್ಮ ಸೂತ್ರವನ್ನು ಅಥವಾ ಕೆಲವು ನಿಯಮಗಳನ್ನು ಅನುಸರಿಸಿಯೇ ಈಶ್ವರನು ಪ್ರವರ್ತಿಸುತ್ತಾನೆ. ಪಾಪಪುಣ್ಯಗಳಿ ಗನುಸಾರ ಫಲವನ್ನು ಹಂಚಿ ಅದರ ಮೇಲ್ವಿಚಾರಕನಾಗಿ ಇರುವುದೇ ಭಗವಂತನ ಕೆಲಸ. ತಾನು ನಿರ್ಮಿಸಿರುವ ಸೂಕ್ಷ್ಮನಿಯಮ ಜಾಲದಿಂದ ಜೀವಾತ್ಮರನ್ನು ನಿಯಂತ್ರಿಸುವ ಸಲುವಾಗಿ ವಿಧಿಸಿದ ನಿಯಮಗಳನ್ನು ಅವರು ಪಾಲಿಸುವಂತೆ ಮಾಡ ಲೋಸುಗ ಎಲ್ಲ ಜೀವರಲ್ಲಿಯೂ ಅಂತರ್ಯಾಮಿಯಾಗಿ ನೆಲಸಿದ್ದಾನೆ.

ಆತ್ಮವು ತನ್ನ ಕರ್ಮದ ಫಲ ಹಾಗೂ ನೈತಿಕ ಹೊಣೆಯನ್ನು ಅನುಭವಿಸಲು ಸಿದ್ಧವಾಗಿರಬೇಕು. ಆದರೂ ಈ ಕರ್ಮದ ಸಂಕೋಲೆಯಿಂದ ಬಿಡುಗಡೆ ಹೊಂದಿ ಮುಕ್ತಿಯನ್ನು ಪಡೆಯಲು ಆತ್ಮನಿಗೆ ಸಾಕಷ್ಟು ಪ್ರಮಾಣದಲ್ಲಿ ಸ್ವಾತಂತ್ರ್ಯವು ಕೊಡಲ್ಪಟ್ಟಿರುತ್ತದೆ. ತನ್ನ ಆತ್ಮೋದ್ಧಾರ ಮಾಡಿಕೊಳ್ಳಬಲ್ಲ ಚೇತನ ತಾನೇ ಆಗಿರುವ ಮಾನವನು ತನ್ನ ಭವಿಷ್ಯದ ಶಿಲ್ಪಿಯಾಗಿದ್ದಾನೆ. ಹಿಂದಿನ ಜನ್ಮದ ನಡೆವಳಿಕೆಯು ಈ ಜನ್ಮದ ಕ್ರಿಯೆಗಳಿಗೆ ಹಾದಿ ಹಾಕಿಕೊಡುತ್ತದೆ. ಇಂದು ಮಾಡಿದಂತೆ ನಮ್ಮ ಭವಿಷ್ಯವು ರೂಪಿತವಾಗುತ್ತದೆ. The bad past can be made a better future by a good present living. ಕೆಟ್ಟ ದಾರಿಯನ್ನು ಬಿಟ್ಟು ಪರಮಾತ್ಮನ ಕೃಪೆಗೆ ಪಾತ್ರನಾಗಬಲ್ಲ ಹಾಗೂ ಭಗವಂತನ ಸಾನ್ನಿಧ್ಯಕ್ಕೆ ಕರೆದೊಯ್ಯುವ ಸನ್ಮಾರ್ಗವನ್ನು ಆರಿಸಿಕೊಳ್ಳುವ, ಸ್ವಾತಂತ್ರ್ಯವು ಆತ್ಮನಿಗೆ ಇದ್ದರೂ, ಈ ಸ್ವಾತಂತ್ರ್ಯವೂ ಪರಮಾತ್ಮನ ಅಧೀನಕ್ಕೆ ಒಳಪಟ್ಟಿದೆ. ಆದುದರಿಂದ ಅವನ ನಿಯಮವನ್ನು ಅರಿತು ಅದರಂತೆ ನಡೆಯಬೇಕಾದುದು ಜೀವಿಯ ಕರ್ತವ್ಯ. ಆ ಕರ್ತವ್ಯವನ್ನು ಮಾಡದೆ ದುಃಸ್ಥಿತಿಗೆ ಇಳಿಯಬಹುದು. ಅಥವಾ ಮಾಡಿ ಸದ್ಗತಿಗೆ ಏರಬಹುದು. ಅಂದರೆ ಪಾಪ, ಪುಣ್ಯ, ಮೋಕ್ಷ ಎಲ್ಲವೂ ವ್ಯಕ್ತಿಗಳ ಕೈಯಲ್ಲೇ ಇದೆ ಎಂದಂತಾಯಿತು.

ಆದರೆ ಯಾವ ಕಾಲದಲ್ಲಿಯೂ ಜೀವಿಯ ಮೇಲೆ ಹೊರಲಾರದಷ್ಟು ಕರ್ಮದ ಹೊರೆ ಇರುವುದಿಲ್ಲ. ಕರ್ಮದ ಫಲವು ಕೂಡಲೇ ಸಿಗದೆ ವಿಲಂಬ ಆಗಲೂ ಬಹುದು. ಹೇಗಾದರೂ ತನ್ನ ಕರ್ಮದ ಫಲಕ್ಕೆ ತಾನೇ ಜವಾಬ್ದಾರ ಎಂಬುದನ್ನು ನಂಬಿ, ಆಂತರಿಕ ಸ್ಫೂರ್ತಿಯಿಂದ ಉದ್ಭವಿಸುವ ಸತ್ಕರ್ಮಗಳಲ್ಲಿ ನಿರತರಾಗುವುದು ಜಾಣತನ. ಒಂದು ಜನ್ಮದಲ್ಲಿ ಮಾಡಿದ ಸತ್ಕರ್ಮಗಳನ್ನು ಮುಂದುವರೆಸಲು ಹಾಗೂ ಆಮೂಲಕ ಪೂರ್ಣಾವಸ್ಥೆಯನ್ನು ತಲಪಲು ಆವಶ್ಯಕವಾದ ಅವಕಾಶ, ಅನುಕೂಲಗಳು ಮತ್ತೆ ಮುಂದಿನ ಜನ್ಮದಲ್ಲಿ ಸಿಗುವುದೆಂಬುದರ ಬಗ್ಗೆ ಸಂದೇಹ ಪಡಬಾರದು.

ಸಂಸಾರಾವಸ್ಥೆಯಲ್ಲಿ ಪೂರ್ವಕರ್ಮದ ಕಾರಣದಿಂದ ಇಂದ್ರಿಯ ಸುಖದಲ್ಲಿ ಮೋಹಾಂಧಕಾರವಶನಾಗಿ ತಲ್ಲೀನನಾಗಿದ್ದರೂ ಒಂದಲ್ಲ ಒಂದು ಕಾಲದಲ್ಲಿ ಅಂತರಾತ್ಮನ ಪ್ರಚೋದನೆಯಿಂದ ತನ್ನ ಆತ್ಮದ ನಿಜವಾದ ಸ್ವರೂಪದ ಅರಿವು ಉಂಟಾಗಿ, ಜೀವನು ಆರ್ತನಾಗಿ ಭಗವಂತನಲ್ಲಿ ಮೊರೆ ಇಡುತ್ತಾನೆ. ದುಃಖನೋವುಗಳು ಅತಿಯಾಗಿ ಅತೃಪ್ತಿ ಹೆಚ್ಚಿದಾಗ, ಸಂಸಾರ ಬಂಧನದಿಂದ ತಪ್ಪಿಸಿಕೊಳ್ಳಲು ಪರಿತಪಿಸಿ ತನ್ನ ಯತ್ನದಲ್ಲಿ ಸೋಲು ಉಂಟಾದಾಗ, ಇತರ ಸಾಧನಗಳಿಂದ ಪ್ರಭಾವ ಆಗದಿದ್ದಾಗ, ರೆಕ್ಕೆ ಮುರಿದ ಹಕ್ಕಿಯಂತಾದ ಮಾನವನು ಶ್ರೇಷ್ಠ ಸಾಧನವಾದ ಭಗವಂತನ ಕಡೆಗೆ ಮನಸ್ಸನ್ನು ತಿರುಗಿಸುತ್ತಾನೆ, ಗುರುವನ್ನು ಹುಡುಕಿಕೊಂಡು ಹೋಗುತ್ತಾನೆ. ನಾನು, ನನ್ನದು ಎನ್ನುವ ಅಹಂಕಾರ–ಮಮಕಾರ, ವಿಷಯ ಭೋಗ

ಗಳಲ್ಲಿ ಆಸೆ–ಇವುಗಳನ್ನು ಬಿಟ್ಟು ತನ್ನ ಕರ್ತವ್ಯ ಕರ್ಮಗಳನ್ನು ಫಲಾಪೇಕ್ಷೆ ಇಲ್ಲದೆ ಭಗವಂತನ ಕೈಂಕರ್ಯವೆಂದೇ ಮಾಡುತ್ತಾನೆ.

ಹೀಗೆ ಜೀವಿಯು ತನ್ನ ಕಡೆಗೆ ಮನಸ್ಸನ್ನು ತಿರುಗಿಸುವ ಸಮಯಕ್ಕಾಗಿ ಕಾಯುತ್ತಿರುವ ಭಗವಂತನು ಆಗ ಜೀವಿಯಲ್ಲಿ ಭಕ್ತಿಯನ್ನು ಹುಟ್ಟಿಸಿ, ಅವನಿಗೆ ಒಬ್ಬ ದಯಾಳುವಾದ ಗುರು ಅಥವಾ ಆಚಾರ್ಯನನ್ನು ಕರುಣಿಸಿ, ಆತನ ಮೂಲಕ ಜೀವಿಯನ್ನು ದುಃಖ, ನೋವು, ಅಜ್ಞಾನಗಳಿಂದ ಉದ್ಧರಿಸಲು ಯತ್ನಿಸುತ್ತಾನೆ. ಗುರುವು ಜೀವೇಶ್ವರ ಸಂಬಂಧದ ಜ್ಞಾನವನ್ನು ತಿಳಿಸಿಕೊಡುತ್ತಾನೆ. ಇದರ ಫಲ ವಾಗಿ ಭಕ್ತಿ ಹೆಚ್ಚಿ, ಪರಮಕಾರುಣಿಕ ಹಾಗೂ ಪ್ರಿಯಮಿತ್ರ ಆದ ಭಗವಂತನ ನಿರ್ಹೇತುಕ ಕೃಪೆ–ಅನುಗ್ರಹಗಳಿಗೆ ಪಾತ್ರನಾಗಿ ಮುಕ್ತಿಗೇ ಆಶಿಸುವಂತಾಗುತ್ತದೆ.

ಜೀವಾತ್ಮ ಬೇರೆ, ಪರಮಾತ್ಮ ಬೇರೆ ಎಂದಾಗ ಸಂಸಾರದಲ್ಲಿ **ಜನನ**ವೂ, ಇವೆರಡೂ ಬೇರೆಬೇರೆಯಲ್ಲ ಒಂದೇ, ಎಂದಾಗ **ಅಮೃತತ್ವ**ವೂ ಉಂಟಾಗುತ್ತದೆ. ಜೀವವು ನಿತ್ಯಸತ್ಯವಾದುದು. ಜೀವಿಯ ಶರೀರವು ಕ್ಷರವೆನಿಸಿ ನಾಶವಾದರೂ, ಅಕ್ಷರವೆನಿಸಿದ ಆತ್ಮವು ನಾಶವಾಗದು. ಮಾನವರಲ್ಲಿರುವ ಅಮರ, ಅಜ ಎನಿಸಿದ ಆತ್ಮವು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಆದುದರಿಂದಲೇ ಶರೀರಕ್ಕೆ ಸಂಬಂಧಿಸಿರುವ ಗುಣಾವಗುಣಗಳು ಆತ್ಮಕ್ಕೆ ಅನ್ವಯಿಸುವುದಿಲ್ಲ. ಹುಟ್ಟುಸಾವು ಎಂಬುದು ಶರೀರಕ್ಕೆ ಮಾತ್ರ ಒದಗುವ ಆಕಸ್ಮಿಕಗಳು ಹಾಗೂ ದುರ್ಘಟನೆಗಳು. ಆತ್ಮಕ್ಕೆ ದೇಹಸಂಬಂಧವಾದರೆ ಅದೇ ಹುಟ್ಟು ಎನಿಸುತ್ತದೆ, ದೇಹವಿಯೋಗವಾದರೆ ಅದೇ ಸಾವು ಎನಿಸುತ್ತದೆ. ಆದಕಾರಣ ಸಾವಿನೊಂದಿಗೇ ಜೀವನವು ನಾಶ ವಾಗುವುದಿಲ್ಲ.

ನೋವು–ನಲಿವು, ಲಾಭ–ನಷ್ಟ, ಜಯ–ಅಪಜಯ, ಮಾನ–ಅಪಮಾನ ಆದ ಸಂದರ್ಭಗಳಲ್ಲಿ ಮನಸ್ಸನ್ನು ಸಮತೋಲದಲ್ಲಿ ಇಟ್ಟುಕೊಳ್ಳುವುದು ಉಚಿತ. ತಾನೂ ಹಾಗೂ ತನ್ನ ಎದುರಿಗಿರುವ ಪ್ರಪಂಚವೂ ದೇವರ ಶರೀರ ಎಂದು ತಿಳಿದಾಗ ಜೀವವು ಸ್ವಾರ್ಥದಿಂದ ತಪ್ಪುದಾರಿಯಲ್ಲಿ ಹೋಗುವುದು ಸಾಧ್ಯವಾಗುವುದಿಲ್ಲ. ಅದಕ್ಕೆ ಬದ ಲಾಗಿ ನಿಸ್ವಾರ್ಥದಿಂದ ಜೀವರಾಶಿಯ ಸೇವೆಯಲ್ಲಿ ತೊಡಗುತ್ತದೆ. ವಿಶ್ವನಿಯಾಮಕ ನಾದ ಭಗವಂತನ ಶೇಷಾಂಶವಾದ ಜೀವಿಯು ತನ್ನನ್ನು ಭಗವಂತನು ಒಪ್ಪಿಕೊಳ್ಳಲು ಯೋಗ್ಯವನ್ನಾಗಿ ಮಾಡಿಕೊಳ್ಳುವುದೇ ಶೇಷತ್ವದ ನಿಜವಾದ ಅರ್ಥ. ಭಗವಂತನ ಅಧೀನವಾದ ಜೀವಾತ್ಮನು ತನ್ನ ಜೀವನವನ್ನು ಸರಿಯಾಗಿ ರೂಪಿಸಿಕೊಂಡು ಮರ, ಹಣ್ಣು, ಗಂಧ, ಹೂ, ಕರ್ಪೂರ, ಮೇಣದ ಬತ್ತಿ, ತೆಂಗು, ಮೋಡ, ನದಿ ಇವುಗ ಳಂತೆ ನಿಸ್ವಾರ್ಥಿ, ಪರೋಪಕಾರಿ, ಪರಿಮಳಯುಕ್ತ ಆಗಿದ್ದು, ಭಗವಂತನ ಪ್ರೀತಿ ವಾತ್ಸಲ್ಯಗಳಿಗೆ ಪಾತ್ರನಾಗುವಂತೆ ಪರರ ಏಳಿಗೆಗಾಗಿ ದುಡಿಯಬೇಕು.

ನಮ್ಮ ಎಲ್ಲ ಕಾರ್ಯಗಳಲ್ಲಿಯೂ ನಿರ್ಲಿಪ್ತತೆ, ನಿರಭಿಮಾನಗಳು ಇರಬೇಕೇ ಹೊರತು, ವ್ಯಾಮೋಹ, ಅಭಿಮಾನಗಳು ಸಲ್ಲದು. ಶ್ರದ್ಧೆ, ಸಂತೃಪ್ತಿ, ನಿಷ್ಕಾಮ ಗಳಿಂದ ಕೂಡಿದ್ದು, ಭಗವಂತನಿಗೆ ಸಂತಸವನ್ನುಂಟುಮಾಡುವ ಪರೋಪಕಾರವೆಂಬ ಪುಣ್ಯಕಾರ್ಯವನ್ನು ಎಸಗುತ್ತ, ಭಗವಂತನಿಗೆ ದುಃಖವನ್ನುಂಟುಮಾಡುವ ಪರ ಪೀಡನವೆಂಬ ಪಾಪಕಾರ್ಯದಿಂದ ದೂರ ಸರಿಯಬೇಕು. ಕಾಯಾ ವಾಚಾ ಮನಸಾ ಅಂದರೆ ಕೃತಿ, ಮಾತು, ಆಲೋಚನೆಗಳಲ್ಲೆಲ್ಲ ಬಹುಜನರ ಹಿತ-ಸುಖಗಳನ್ನು ಸಾಧಿ ಸಲು ಯತ್ನಿಸಬೇಕು. ಸಾಮಾನ್ಯ ಜನರ ಸೇವೆಮಾಡಿ, ಅವರಲ್ಲಿಯೇ ದೇವರನ್ನು ಕಾಣಲು ಶ್ರಮಿಸಬೇಕು. ಮನುಷ್ಯರು ತಾವು ಇತರರಿಂದ ಏನನ್ನು ನಿರೀಕ್ಷಿಸು ತ್ತಾರೆಯೋ ಅದನ್ನು ತಾವು ಇತರರಿಗೆ ಮೊದಲು ಮಾಡಿಬಿಡಬೇಕು.

ಸಕಲ ಪ್ರಪಂಚವೂ ಪರಮಾತ್ಮನ ಶರೀರವಾಗಿರುವುದರಿಂದ ಏಕದೇಹಾವ ಯವನ್ಯಾಯದಂತೆ ಸಕಲ ಜೀವಿಗಳೂ ಪರಸ್ಪರ ದ್ವೇಷ–ವಿರೋಧ–ಅಸಹಕಾರ ಗಳಿಲ್ಲದೆ ಪ್ರೀತಿ–ಸೌಹಾರ್ದ–ಸಹಕಾರಗಳಿಂದ ಜೀವಿಸುವುದನ್ನು ಕಲಿಯಬೇಕು. ಲೋಕಸೇವೆಯೇ ಈಶಸೇವೆ, ಎನ್ನುವ ತತ್ತ್ವದಂತೆ ಲೋಕವೆಂಬ ಶರೀರದಮೂಲಕವೇ ಭಗವಂತನ ಸೇವೆಯನ್ನು ಮಾಡಲು ಯತ್ನಿಸಬೇಕು. ಯಾರೊಬ್ಬರೂ ಇನ್ನೊಬ್ಬರ ವೇಷಭೂಷ, ನಡೆ ನುಡಿ, ಆಚಾರ ವಿಚಾರಗಳನ್ನು ದೂಷಿಸುವುದು, ಅವರ ಸ್ವಾಭಾ ವಿಕ ಗುಣಗಳ ಅವಹೇಳನ ಮಾಡುವುದು, ತನ್ನ ವರ್ತನೆ-ವ್ಯಕ್ತಿತ್ವಗಳೇ ಸರ್ವೋ ತ್ಕೃಷ್ಟವೆಂದು ಭಾವಿಸುವುದು, ಸರಿಯಲ್ಲ. ಏಕೆಂದರೆ ಇದರಿಂದ ಭಗವಂತನಿಗೆ ಪ್ರಿಯ ವಾದ ಇನ್ನೊಂದು ಜೀವಿಯ ವಿಷಯದಲ್ಲಿ ನಮ್ಮ ದುರ್ವರ್ತನೆಯನ್ನು ಪ್ರದರ್ಶಿಸಿ ದಂತಾಗಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗಲು ತಡೆಯುಂಟಾಗುತ್ತದೆ; ಕೆಲವು ವೇಳೆ ಅವನ ಆಗ್ರಹಕ್ಕೂ ಗುರಿಯಾಗಬಹುದು.

ಇನ್ನೊಬ್ಬರನ್ನು ತುಳಿದು ಬದುಕಿನ ಮೆಟ್ಟಲುಗಳನ್ನು ಏರಲು ಯತ್ನಿಸದೆ, ಇತರರನ್ನೂ ಬದುಕಗೊಟ್ಟು ತಾನೂ ಬದುಕಲು ಯತ್ನಿಸುವುದು ಸರಿಯಾದುದು. ಇತರರಿಗಾಗಿ, ಆಮೂಲಕ ಭಗವಂತನಿಗಾಗಿ, ಅವನ ಸಂಕಲ್ಪಗಳನ್ನು ನೆರವೇರಿಸು ವುದಕ್ಕಾಗಿ, ಬದುಕುವುದೇ ಪಕ್ವವಾದ ಜೀವಿಯ ಹೆಗ್ಗುರುತು. ನಾವು ಮಾಡುವ ಕರ್ಮವೆಲ್ಲವೂ ಈಶ್ವರಾರಾಧನವಾದಾಗ, ನಮ್ಮೊಂದಿಗೇ ದೈವಸಾನ್ನಿಧ್ಯವಿದ್ದು, ಅದರ ಫಲವಾಗಿ ಅಪೂರ್ವವಾದ ಆನಂದ ಸಿಗಬಲ್ಲುದು; ಇದೇ ಶೇಷತ್ವದ ಪೂರ್ಣ ವಾದ ಮತ್ತು ಸರಿಯಾದ ಅರ್ಥ.

"ಓಂ ನಮೋ ನಾರಾಯಣಾಯ, ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ। ಶ್ರೀಮತೇ ನಾರಾಯಣಾಯ ನಮಃ" ಎಂಬೀ ಮಂತ್ರಗಳನ್ನು ಶ್ರೀವೈಷ್ಣ ವರು ನಿತ್ಯವೂ ಜಪಿಸುವ ಅರ್ಥ, ನಾವು ಬದುಕಿರುವುದೆಲ್ಲ ನಾರಾಯಣನಿಗಾಗಿಯೇ ಹೊರತು ನಮಗಾಗಿ ಅಲ್ಲ ಎಂದು ಪ್ರತಿಜ್ಞೆಯನ್ನು ಕೈಕೊಂಡಂತೆ. ನಮ್ಮ ಪ್ರೀತಿ,

ಭಕ್ತಿ, ಗೌರವ, ಸೇವೆಗಳೆಲ್ಲವೂ ಭಾಗವತ-ಭಗವಂತರಿಗೆ ದೊರೆತರೆ ಅದೇ ಕೈಂಕರ್ಯ ವಾಗುತ್ತದೆ. ಭಾಗವತ ಕೈಂಕರ್ಯವೇ ಭಗವಂತನ ಕೈಂಕರ್ಯ, ಭಾಗವತಾಪ ಚಾರವೇ ಭಗವದಪಚಾರ ಆಗುತ್ತದೆ. ಹೀಗೆ ಜನತಾ ಸೇವೆಯೇ ಜನಾರ್ದನ ಸೇವೆ ಯಾದುದರಿಂದ ಸಮಾಜಜೀವಿ, ಸಮಾಜಸೇವಕ, ಸಹಕಾರಿಜೀವಿ ಆದವನು ಮಾತ್ರ ಮಹಾಮಹಿಮನೆನಿಸಿ ತಾನೂ ಉದ್ಧಾರವಾಗಿ ಸಮಾಜವನ್ನೂ ಉದ್ಧರಿಸಲು ಶಕ್ತನಾಗುತ್ತಾನೆ.

ಮುಖ್ಯವಾಗಿ ಮಾನವನ ಶೀಲ, ಚಾರಿತ್ರ್ಯ, ವ್ಯಕ್ತಿತ್ವಗಳೆಲ್ಲ ಆದರ್ಶವಾಗಿರಲು ಅಂತಃಕರಣ ಶುದ್ಧಿ ಅತ್ಯಾವಶ್ಯಕ; ಅಂತಃಕರಣ ಶುದ್ಧಿಯಾಗಲು ಸತ್ಕರ್ಮಾನು ಷ್ಠಾನ ಅತ್ಯಾವಶ್ಯಕ; ಸದಾಚಾರ, ತೀರ್ಥಸ್ನಾನ, ಪುಣ್ಯಕ್ಷೇತ್ರಗಳಲ್ಲಿನ ಭಗವ ದ್ದರ್ಶನ ಇವುಗಳಿಂದ ಚಿತ್ತಶುದ್ಧಿ ಆಗುತ್ತದೆ. ಶುದ್ಧಚಿತ್ತನಾಗಿ ಭಗವಂತನ ಉಪಾ ಸನೆ ಮಾಡಿದರೆ ಆತ್ಮಾನುಭವ ಉಂಟಾಗುತ್ತದೆ. ಆಗ ಅವನಲ್ಲಿ ದೇವರ ಶಕ್ತಿಯು ಕೆಲಸಮಾಡಿ, ದೇವರ ಬೆಳಕು ಉಂಟಾಗಿ, ಅವನು ಪ್ರಪಂಚದಲ್ಲಿ ಅತ್ಯಂತ ಪ್ರಬಲ ಜೀವಿ ಆಗಬಲ್ಲ.

ನಿಶ್ಚಿತವಾದ ಒಂದು ಸದ್ಬುದ್ಧಿಯಿಂದ, ಕಾರ್ಯಾಕಾರ್ಯ ಮತ್ತು ನಿತ್ಯಾನಿತ್ಯ ಎಂಬೆರಡು ವಸ್ತುವನ್ನು ನಿರ್ಧರಿಸಿ, ಕಾಮ ಕ್ರೋಧ ಲೋಭ ಮತ್ತು ಶತ್ರು ಮಿತ್ರ ಉದಾಸೀನ ಎಂಬ ಮೂರನ್ನೂ, ಶಮ ದಮ ಉಪರತಿ ಶ್ರದ್ಧೆ ಹಾಗೂ ಸಾಮ ದಾನ ಭೇದ ದಂಡ ಎಂಬ ನಾಲ್ಕರಿಂದ ಸ್ವಾಧೀನದಲ್ಲಿರಿಸಿಕೊ. ಹಸಿವು-ಬಾಯಾರಿಕೆ, ಶೋಕ ಮೋಹ, ಜರಾಮೃತ್ಯು, ದೋಷ ಸಂಧಿ ವಿಗ್ರಹ, ಯಾನ, ಆಸನ, ಸಂಶ್ರಯ ದ್ವೈಧೀ ಭಾವಗಳನ್ನು ಅರಿತು ಪಂಚೇಂದ್ರಿಯಗಳನ್ನು ಗೆದ್ದುಕೊ. ಪಂಚೇಂದ್ರಿಯ ದೊಂದಿಗೆ ಬುದ್ಧಿ ಮನಸ್ಸುಗಳನ್ನು ಅರಿತು, ಹೆಂಗಸು, ಜೂಜು, ಬೇಟೆ, ಕುಡಿತ, ನಿಷ್ಠೂರಮಾತು, ಬೈಗಳು, ಕಠಿಣಶಿಕ್ಷೆ ಎಂಬ ಏಳನ್ನು ಬಿಟ್ಟು ಸುಖವಾಗಿರು— ಇದು ಹಿರಿಯರ ಉಪದೇಶ.

ಒಟ್ಟಿನಲ್ಲಿ ಐಹಿಕ ಸುಖಗಳಿಗೆ ಬಲಿಯಾಗದೆ, ಇಂದ್ರಿಯ ಭೋಗ್ಯ ವಸ್ತುಗಳ ಕಡೆಗೆ ಬೆನ್ನು ತಿರುಗಿಸಿ, ನಿಷ್ಕಾಮ ಕರ್ಮಗಳನ್ನು ಈಶ್ವರಾರ್ಪಣವೆಂದು ಮಾಡಿ, ನಾವು ಭಗವಂತನ ಅಂಶವೆಂದು ತಿಳಿದು, ಭಗವಂತನ ಕಡೆ ಮನಸ್ಸನ್ನು ತಿರುಗಿಸಿ, ಅವನನ್ನು ಕುರಿತು ಸತತವಾಗಿ ಚಿಂತಿಸಿ, ಸ್ಮರಿಸಿ, ಇತರರಿಗೂ ಒಳ್ಳೆಯದಾಗಲೆಂದು ಪ್ರಾಮಾಣಿಕವಾಗಿ ಬಯಸಿ, ಇತರರಿಗೆ ಸಾಧ್ಯವಾದಷ್ಟು ಒಳಿತನ್ನು ಮಾಡಿ, ತೊಡಕು-ತೊಂದರೆಗಳು ಬಂದಾಗಲೂ ಆಶಾವಾದಿಯಾಗಿದ್ದರೆ, ಆಗ ದೇಹತ್ಯಾಗದ ನಂತರ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ಅರ್ಹನಾಗುವುದರಲ್ಲಿ ಸಂದೇಹವಿಲ್ಲ.

ಭಾರತೀಯರ ಗುರಿ ಇದು. ಇದನ್ನು ಸಾಧಿಸಲು ಜೀವರುಗಳೆಲ್ಲ ಸತತವಾಗಿ ಯತ್ನಿಸಿದಾಗಲೇ ಮೋಕ್ಷ ಸಿಗಲು ಸಾಧ್ಯ. ಈ ಆದರ್ಶದಲ್ಲಿ ನಮ್ಮ ಜೀವನ ಹಾಗೂ ಮುಂದಿನ ಜನಾಂಗದ ಜೀವನ ರೂಪುಗೊಳ್ಳಬೇಕು.

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ।
ದೇಶೋಽಯಂ ಕ್ಷೋಭರಹಿತಃ ಸಾತ್ವಿಕಾಸ್ಸಂತು ನಿರ್ಭಯಾಃ ||೧||

ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು।
ಸರ್ವಸ್ಸದ್ಬುದ್ಧಿಮಾಪ್ನೋತು ಸರ್ವಸ್ಸರ್ವತ್ರನಂದತು ||೨||

ಸರ್ವೇಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ।
ಸರ್ವೇ ಭದ್ರಾಣಿ ಪಶ್ಯಂತು ಮಾಕಶ್ಚಿದ್ದುಃಖ ಭಾಗ್ಭವೇತ್ ||೩||

ದುರ್ಜನಃ ಸಜ್ಜನೋಭೂಯಾತ್ ಸಜ್ಜನಃ ಶಾಂತಿಮಾಪ್ನುಯಾತ್।
ಶಾಂತೋ ಮುಚ್ಯೇತಬಂಧೇಭ್ಯೋ ಮುಕ್ತಾಶ್ಚಾನ್ಯಾನ್ ವಿಮೋಚಯೇತ್ ||೪||

ಅಸತೋಮಾಸದ್ಗಮಯ। ತಮಸೋಮಾ ಜ್ಯೋತಿರ್ಗಮಯ।
ಮೃತ್ಯೋರ್ಮಾ ಅಮೃತಂಗಮಯ||

—ಇದು ಭಾರತೀಯರ ಆದರ್ಶ ಪ್ರಾರ್ಥನೆ.

---

# ಅಧ್ಯಾಯ ೪

# ಹಿತ (ಸಾಧನ)

ಇದಕ್ಕೆ ಉಪಾಯ, ಸಾಧನ, ಮಾರ್ಗ, ಯೋಗ ಎಂದೂ ಹೆಸರು. ನಶ್ವರವಾದ ಜೀವನದಿಂದ ಬೇರೆಯಾದ ಶಾಶ್ವತವಾದ ಜೀವನದ ಬಗೆಗೆ ಅವ್ಯಾಹತವಾದ ಅನ್ವೇಷಣೆ ನಡೆಯುತ್ತ ಬಂದಿದೆ. ದೇಹವು ನಾಶವಾದರೂ ಆತ್ಮವು ಅವಿನಾಶಿ ಎಂದೂ ಹಿಂದೂ ತತ್ತ್ವಶಾಸ್ತ್ರದ ಆಧಾರ ಸ್ತಂಭಗಳಾದ ಶಂಕರ, ರಾಮಾನುಜ, ಮಧ್ವ ಎಂಬೀ ಮೂವರು ಆಚಾರ್ಯರುಗಳೂ ಒಪ್ಪಿದ್ದಾರೆ.

ಶಾಶ್ವತ ಸುಖವು ಜೀವನದ ಒಂದು ಮಟ್ಟ. ಅದೇ ಮುಕ್ತಿ ಎಂಬುದು ಕೆಲವು ದಾರ್ಶನಿಕರ ಅಭಿಪ್ರಾಯ. ಮೋಕ್ಷವು ಅವ್ಯಯ ಪದ, ಅಕ್ಷಯ ಸುಖ, ಭಗವಂತನ ಸಾಕ್ಷಾತ್ಕಾರ, ಬ್ರಹ್ಮಪ್ರಾಪ್ತಿಗಳನ್ನು ಒಳಗೊಂಡಿದೆ. ಅಂದರೆ ಸಾಕ್ಷಾತ್ಕಾರ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ ಮೋಕ್ಷದ ಗುರಿ. ಇದನ್ನು ಪಡೆಯಲು ಐದು ಮಾರ್ಗಗಳುಂಟು. ಪ್ರತಿಯೊಬ್ಬರೂ ತಮ್ಮತಮ್ಮ ಪ್ರಕೃತಿಗೆ ತಕ್ಕಂತೆ ಯಾವುದಾದರೂ ಒಂದು ಅಥವಾ ಹೆಚ್ಚು ಮಾರ್ಗಗಳನ್ನು ನೇರಿಸಿ ಸಾಧನೆಮಾಡಿ ಮುಕ್ತಿಯನ್ನು ಗಳಿಸಬಹುದು.

ಜೀವಾತ್ಮನನ್ನು ಪರಮಾತ್ಮನೊಂದಿಗೆ ಒಂದುಗೂಡಿಸುವುದಕ್ಕೆ ಯೋಗ ಎಂದು ಹೆಸರು. ಕ್ರಿಯಾಪಟತ್ವವಿರುವವರಿಗಾಗಿ ಕರ್ಮಯೋಗ, ಬುದ್ಧಿಶಕ್ತಿ ಇರುವವರಿಗಾಗಿ ಜ್ಞಾನಯೋಗ, ಏಕಾಗ್ರತೆಯನ್ನು ಹೊಂದಿರುವವರಿಗಾಗಿ ರಾಜಯೋಗ, ರಸಭಾವ ಇರುವವರಿಗಾಗಿ ಭಕ್ತಿಯೋಗ, ಯಾವುದೇ ರೀತಿಯ ಶಕ್ತಿಯ ಅಭಾವವಿರುವವರಿಗಾಗಿ ಪ್ರಪತ್ತಿಯೋಗ—ಇವು ಸಾಧನಗಳು. ಸ್ವಲ್ಪ ಹೆಚ್ಚು ಕಡಮೆಯಾಗಿ ಮಾನವರೆಲ್ಲರಲ್ಲಿಯೂ ಈ ನಾಲ್ಕು ಗುಣ ಶಕ್ತಿಗಳೂ ಇರುತ್ತವೆಯಾದುದರಿಂದ ಯಾವ ಮಾರ್ಗವನ್ನಾದರೂ ಅನುಸರಿಸಿ ಜೀವಿಯ ಗುರಿಯಾದ ಮುಕ್ತಿಯನ್ನು ಪಡೆಯಬಹುದು. ಈ ಮಾರ್ಗಗಳು ಒಂದಕ್ಕೊಂದು ಪೂರಕವಾಗಿಯೇ ಇವೆ. ಕರ್ಮ ಜ್ಞಾನಗಳಿಗಿಂತ ಭಕ್ತಿಮಾರ್ಗವು ಸುಲಭ, ದೊಡ್ಡದು ಆದರೂ ಪರಿಶುದ್ಧವಾದ ಕರ್ಮ ಹಾಗೂ ನಿಜವಾದ ಜ್ಞಾನಗಳಿಂದ ಕೂಡಿದ ಭಕ್ತಿಯೇ ಮೋಕ್ಷಪ್ರಾಪ್ತಿಗೆ ಸರಿಯಾದ ಮಾರ್ಗ ಕರ್ಮ ಜ್ಞಾನ ಭಕ್ತಿ ಪ್ರಪತ್ತಿ ಮಾರ್ಗಗಳನ್ನು ಸರಿಯಾಗಿ ಅನುಷ್ಠಿಸಲು ಆಗದ ಅಶಕ್ತರಿಗೆ ಹಾಗೂ ಅಜ್ಞರಿಗೆ ಆಚಾರ್ಯಾನುಗ್ರಹವೆಂಬ ಪಂಚಮ ಮಾರ್ಗವು ಅತ್ಯಂತ ಸರಳ ಹಾಗೂ ಸುಲಭವಾದುದು.

ಪ್ರತಿಯೊಂದು ಮತದಲ್ಲಿಯೂ ಗಹನ, ಸೂಕ್ಷ್ಮ ಆಗಿರುವ ತತ್ತ್ವಗಳನ್ನು ಸರಳ, ಸ್ಥೂಲ ಆಗಿಸುವ ಸಲುವಾಗಿ ಪವಿತ್ರ ಗ್ರಂಥಗಳು, ನಿಯಮಗಳು, ಆಚಾರ

ಕ್ರಿಯೆಗಳು ಸಿದ್ಧಪಡಿಸಲ್ಪಟ್ಟಿರುತ್ತವೆ. ಇವುಗಳ ಸಹಾಯವನ್ನು ಪಡೆದು ವಿವಿಧಮತೀಯರು ತತ್ತ್ವಗಳನ್ನು ಸರಿಯಾಗಿ ತಿಳಿದು ಆಚರಿಸಿ ಜನ್ಮ ಸಾಫಲ್ಯ ಮಾಡಿಕೊಳ್ಳಬೇಕು.

## 1. ಕರ್ಮಮಾರ್ಗ

ವ್ಯಕ್ತವಾಗಲು ಯತ್ನಿಸುವ ಮೂಲ ಸ್ವಭಾವವನ್ನು ಮತ್ತು ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಪಡೆಯಲು ಅವಶ್ಯಕವಾದ ಜ್ಞಾನವನ್ನು ಪಡೆಯಬೇಕಾದರೆ, ಜೀವನದಲ್ಲಿ ಪ್ರಮುಖ ಸ್ಥಾನವನ್ನು ಹೊಂದಿರುವ ವರ್ಣಾಶ್ರಮ ಧರ್ಮಗಳಿಗೆ ಗೊತ್ತಾದ ಧಾರ್ಮಿಕ ಸಂಸ್ಕಾರಗಳನ್ನು ಪಡೆಯಬೇಕು. ಆತ್ಮ ಪರಮಾತ್ಮ ಸ್ವರೂಪವನ್ನು ಮನನಮಾಡಿ, ಅಹಂಕಾರ-ಮಮಕಾರ ಫಲಾಪೇಕ್ಷೆಗಳಿಲ್ಲದೆ, ಸುಖ ದುಃಖ, ಲಾಭನಷ್ಟ ಆದಾಗ ಸಮಚಿತ್ತನಾಗಿ, ಭಗವದಾರಾಧನೆ ಎಂಬ ಪವಿತ್ರ ಭಾವನೆಯಿಂದ, ಕರ್ಮಗಳಲ್ಲಿರುವ ಜ್ಞಾನಾಂಶಕ್ಕೆ ಪ್ರಾಧಾನ್ಯತೆ ನೀಡುತ್ತ ಕರ್ಮಮಾಡಬೇಕು.

ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಚಕ್ರಾಂಕನ, ಉಪಾಕರ್ಮ, ಸಮಾವರ್ತನ, ಪಾಣಿಗ್ರಹಣ ಇವು ಷೋಡಶ ಸಂಸ್ಕಾರಗಳಲ್ಲಿ ಪ್ರಮುಖವಾದವು. ಆಧುನಿಕ ಕಾಲದಲ್ಲಿ ಕೆಲವು ಮಾತ್ರ ಆಚರಣೆಯಲ್ಲಿವೆ.

ಶಮ, ದಮ, ತಪ, ಶೌಚ, ಕ್ಷಮೆ, ಆರ್ಜವ, ಭಯಾದಭಯ ಸ್ಥಾನ ವಿವೇಕ, ದಯೆ ಮತ್ತು ಅಹಿಂಸೆ, ಈ ಆತ್ಮಗುಣಗಳನ್ನು ಪಡೆದು ಚಿತ್ತಶುದ್ಧಿಯನ್ನು ತಂದುಕೊಳ್ಳುವುದೇ ಕರ್ಮಯೋಗದ ಉದ್ದೇಶ.

ಕರ್ಮಯೋಗಿಯು ಆಸೆಗಳಿಂದ ಪಾರಾಗಿದ್ದಾನೆ. ಅವನು ಸ್ವತಂತ್ರ. ಅವನಿಗೆ ಉಂಟಾಗುವ ಸ್ಫೂರ್ತಿ, ಸಂತೋಷ, ಶಾಂತಿಗಳು ಅಂತರ್ಯದಿಂದ ಬರುತ್ತವೆಯೇ ಹೊರತು ಬಾಹ್ಯದಿಂದಲ್ಲ. ಅವನ ಮನಸ್ಸು ಸಮತ್ವದಲ್ಲಿರುವುದರಿಂದ ಅವನು ಜಯದಿಂದ ಹಿಗ್ಗುವುದು, ಅಪಜಯದಿಂದ ಕುಗ್ಗುವುದು ಇಲ್ಲ. ಅವನು ಮುಕ್ತ. ತನ್ನ ಸಂಚಾರಕ್ರಿಯೆಗಳಲ್ಲಿ ಯಾರ ಅಧೀನವೂ ಆಗಿಲ್ಲ. ಅವನಿಗೆ ತನ್ನ ಇಂದ್ರಿಯಗಳ ಮೇಲೆ ಪೂರ್ಣ ಹತೋಟಿ ಇರುತ್ತದೆ. ಅಂದರೆ ಅವನು ಇಂದ್ರಿಯಗಳ ಒಡೆಯನೇ ಹೊರತು, ದಾಸನಾಗಿಲ್ಲ. ಯಾವಾಗಲೂ ಸಂತೋಷಚಿತ್ತನಾಗಿದ್ದು, ತನ್ನ ಬಳಿಗೆ ಬರುವವರಿಗೆಲ್ಲ ಆನಂದವನ್ನು ಉಂಟುಮಾಡುತ್ತಾನೆ. ತನ್ನ ಕರ್ಮದ ಮೂಲಕ ಪರಮಾತ್ಮನ ಸಾಕ್ಷಾತ್ಕಾರವನ್ನು ಅನುಭವಿಸುತ್ತಾನೆ. ಹೀಗೆ ಕರ್ಮಯೋಗಿಯು ಸ್ಥಿತಪ್ರಜ್ಞನಾಗಲು ಸಾಧ್ಯವಾಗುತ್ತದೆ.

ಹಿಂದೂಗಳು **ವರ್ಣಾಶ್ರಮಧರ್ಮ**ಕ್ಕೆ ಪ್ರಮುಖ ಸ್ಥಾನವನ್ನು ಕೊಟ್ಟಿರುತ್ತಾರೆ.

ಸಮಾಜದಲ್ಲಿ ನಾನಾಬಗೆಯ ಶಕ್ತಿ, ಸಾಮರ್ಥ್ಯಗಳನ್ನೂ, ವಿಶಿಷ್ಟ ಸ್ವಭಾವಗಳನ್ನೂ ಪಡೆದ ನಾನಾ ಬಗೆಯ ಜನರಿರುತ್ತಾರೆ. ಈ ಶಕ್ತಿ, ಸಾಮರ್ಥ್ಯಗಳು ಹಾಗೂ ವಿಶಿಷ್ಟ ಸ್ವಭಾವಗಳು ಆಯಾ ರೀತಿಯಲ್ಲಿ ಅಂತಹ ಜನರಲ್ಲಿ ಕ್ರಿಯಾ ಸ್ವರೂಪವನ್ನು ಪಡೆದರೆ ಸಾಮಾಜಿಕ ಸುಖ ಉಂಟಾಗಿ ಮೇಲ್ಮೆ ಲಭಿಸುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ **ನಾಲ್ಕು ವರ್ಣ**ಗಳನ್ನು ಒಪ್ಪಿಕೊಂಡಿದ್ದಾರೆ.

**ಬ್ರಾಹ್ಮಣ**ರೆಂಬ ಬೌದ್ಧಿಕವರ್ಗಕ್ಕೆ ಯಜನಯಾಗ, **ಕ್ಷತ್ರಿಯ**ರೆಂಬ ಆಡಳಿತ ವರ್ಗಕ್ಕೆ ದುಷ್ಟ ಶಿಕ್ಷಣ ಹಾಗೂ ಶಿಷ್ಟ ಪರಿಪಾಲನ, **ವೈಶ್ಯ**ರೆಂಬ ಉತ್ಪಾದಕ ವ್ಯಾಪಾರಿ ವರ್ಗಕ್ಕೆ ವ್ಯವಹಾರ ಕುಶಲತೆ, **ಶೂದ್ರ**ರೆಂಬ ಶ್ರಮಜೀವಿ ವರ್ಗಕ್ಕೆ ಸೇವೆ —ಎಂಬೀ ವಿಶೇಷ ಧರ್ಮ ಅವರವರಿಗೆ ಆ ಪ್ರಾಚೀನ ಕಾಲದಲ್ಲಿ ವಿಹಿತವಾಗಿದ್ದು ಅದರಿಂದ ಸಮಾಜದಲ್ಲಿ ಶ್ರೇಷ್ಠಮಟ್ಟದ ವ್ಯವಸ್ಥೆ ಇದ್ದಿತು.

ಅಜ್ಞಾನವನ್ನು ತೊಲಗಿಸಿ, ಆಧ್ಯಾತ್ಮಿಕ ವಿಚಾರ ಹಾಗೂ ಜ್ಞಾನವನ್ನು ಪಡೆದುಕೊಳ್ಳುವ ಸಲುವಾಗಿ ಪೂರ್ಣ ವಿದ್ಯಾವಂತ ಮತ್ತು ಬುದ್ಧಿವಂತ ಆಗಿರುವ ಬ್ರಾಹ್ಮಣ ಸಮೂಹ ಬೇಕಾಗುತ್ತದೆ; ಅಸತ್ಯ, ಪಕ್ಷಪಾತಗಳಿಂದ ಕೂಡಿದ ಅನ್ಯಾಯವನ್ನು ತೊಲಗಿಸಿ, ಸುವ್ಯವಸ್ಥೆ, ಸಮಾನತೆ, ನ್ಯಾಯಗಳನ್ನು ದೊರಕಿಸಿ ಕೊಡಲು, ಶೂರ, ವೀರ, ಧೀರ ಆಗಿರುವ ಕ್ಷತ್ರಿಯ ಸಮೂಹ ಇರಬೇಕಾಗುತ್ತದೆ; ಅನ್ನ, ವಸ್ತ್ರ, ವಸತಿಗಳ ಅಭಾವವನ್ನು ತೊಲಗಿಸಲು ಬೇಕಾದ ಕೃಷಿ, ಗೋ, ವಾಣಿಜ್ಯಗಳನ್ನು ಬೆಳೆಸಲು ನೀತಿವಂತ, ವ್ಯವಹಾರ ಚತುರ, ಸತ್ಯವಂತ, ಪ್ರಾಮಾಣಿಕ, ಸೇವಾಮನೋಭಾವವುಳ್ಳ **ವೈಶ್ಯ** ಮತ್ತು **ಶೂದ್ರ** ಸಮೂಹ ಇರಬೇಕು.

ಮುಖ್ಯವಾಗಿ ಆಧುನಿಕ ಕಾಲದಲ್ಲಿ ಬ್ರಾಹ್ಮಣನ ಬುದ್ಧಿಶಕ್ತಿ ಮತ್ತು ಆತ್ಮ ಸಂಯಮ; ಕ್ಷತ್ರಿಯನ ಧೈರ್ಯ, ಕೆಚ್ಚು ಮತ್ತು ಬಾಹುವೀರ್ಯ; ವೈಶ್ಯನ ವ್ಯವಹಾರ ಕೌಶಲ್ಯ, ಲಾಭ ಚಿಂತನೆ ಮತ್ತು ಉಪಾಯ ಯೋಜನೆ; ಶೂದ್ರನ ದೇಹದಾರ್ಢ್ಯ ಮತ್ತು ದುಡಿಯುವ ಮನೋಭಾವನೆ—ಎಂಬೀ ನಾಲ್ಕು ವರ್ಣಗಳ ಮುಖ್ಯ ಅಂಶಗಳು ಸಮಾಜದ ಎಲ್ಲ ಶಿಕ್ಷಿತರು ಹಾಗೂ ಉದ್ಯೋಗಸ್ಥರಲ್ಲಿ ಮೈಗೂಡಬೇಕಾಗಿದೆ. ವಿವಿಧತೆಯನ್ನು ಕಿತ್ತೊಗೆಯದೆ ಅದರ ಹಿಂದೆ ಅಡಗಿರುವ ಏಕತೆಯನ್ನು ಗುರುತಿಸಿ ಉಪಯೋಗಮಾಡಿಕೊಳ್ಳುವುದು ಜಾಣರ ಲಕ್ಷಣ.

ನಾಲ್ಕು ವರ್ಣಗಳ ಜೊತೆಗೆ **ನಾಲ್ಕು ಆಶ್ರಮ**ಗಳ ಧರ್ಮವು ವ್ಯಕ್ತಿಜೀವನದ ನಾಲ್ಕು ಪ್ರಮುಖ ಹಂತಗಳನ್ನು ಗುರುತಿಸಿ, ವಿವರಿಸಿ ಅದನ್ನು ಪಾಲಿಸುವುದರಿಂದ ಸಮಾಜದಲ್ಲಿ ಸುಖ ಶಾಂತಿ ಸಮಾಧಾನಗಳಿರಲು ಸಾಧ್ಯವೆಂದು ತಿಳಿಸುತ್ತದೆ.

ಜ್ಞಾನಾರ್ಜನೆಯ ಮತ್ತು ಸಾಮರ್ಥ್ಯ ಸಂಪಾದನೆಯ ಕಾಲವಾದ **ಬ್ರಹ್ಮಚರ್ಯ** ಆಶ್ರಮವು ಅಂದರೆ ಜೀವನದ ಮೊದಲನೆಯ ಇಪ್ಪತ್ತು ವರ್ಷವು ಗುರು

ಕುಲವಾಸ, ವೇದಶಾಸ್ತ್ರಪುರಾಣಾದಿಗಳ ಅಧ್ಯಯನ, ವ್ಯವಸ್ಥಿತ ಶಿಸ್ತು ಜೀವನ, ಇವುಗಳಿಗಾಗಿ ಇದ್ದು, ಮುಂದಿನ ಫಲಪ್ರದ ಘಟ್ಟಗಳಿಗೆಲ್ಲ ತಳಹದಿಯಾಗಿದೆ. ಈ ಆಶ್ರಮದಲ್ಲಿರುವವರಿಗೆ ವೇದಗಳಲ್ಲಿನ ಮಂತ್ರಗಳ ವಿಷಯವು ಮುಖ್ಯ. ಆತ್ಮ ಸಂಯಮ, ಆತ್ಮವಿಕಾಸ, ಸ್ವಾತಂತ್ರ್ಯ, ಸೌಂದರ್ಯಾನುಭವದ ಆನಂದ, ವಿಶ್ವ ಪ್ರೇಮ, ಈ ಅವಸ್ಥೆಯ ಲಕ್ಷಣಗಳು. ಗುರುಕುಲ ವಾಸದಲ್ಲಿ ಶಿಷ್ಯನಾಗಿ ಶ್ರದ್ಧೆ ಭಕ್ತಿ ಯಿಂದ ಕಲಿತುದನ್ನು, ಗುರುವಾಗಿ ಶ್ರದ್ಧೆ, ಆಸಕ್ತಿಗಳಿಂದ ಕಲಿಸಿ ತರಬೇತು ಹೊಂದ ಬೇಕು. ನಮ್ಮ ಪ್ರಾಚೀನ ಋಷಿಗಳು ಆಧ್ಯಾತ್ಮಿಕ ವೀರರಾಗಿದ್ದು, ನಮಗಾಗಿ ಜ್ಞಾನನಿಧಿಯನ್ನು ಸಂಗ್ರಹಿಸಿಟ್ಟು ಹೋಗಿದ್ದಾರೆ. ಅದನ್ನು ಓದಿ ತಿಳಿದುಕೊಂಡು, ತಿಳಿದುಕೊಂಡದ್ದನ್ನು ಇತರರಿಗೆ ತಿಳಿಸಬೇಕು. ಇದೇ ಋಷಿಯಜ್ಞ ಅಥವಾ ಬ್ರಹ್ಮ ಯಜ್ಞ. ಬ್ರಹ್ಮಚರ್ಯ ಆಶ್ರಮವು ಋಷಿಋಣವನ್ನು ತೀರಿಸಲು ನೆರವಾಗುತ್ತದೆ.

ಎರಡನೆಯ ಇಪ್ಪತ್ತು ವರ್ಷದ **ಗೃಹಸ್ಥ** ಆಶ್ರಮವು ಸುಖಮಯವಾದ ಸಾಂಸಾರಿಕ ಜೀವನವನ್ನು ನಡೆಸಲು, ಸತ್ಕರ್ಮಗಳನ್ನು ಮಾಡಲು, ಸತ್ಸಂತಾನ ವನ್ನು ಪಡೆಯಲು, ನ್ಯಾಯಮಾರ್ಗದಲ್ಲಿ ಹಣವನ್ನು ಸಂಪಾದಿಸಿ ಅದನ್ನು ಸದು ದ್ದೇಶಗಳಿಗಾಗಿ ದಾನ–ವೆಚ್ಚಮಾಡಲು, ಮಾತಾಪಿತೃ, ಪತ್ನೀಪುತ್ರ, ಆಚಾರ್ಯ, ಅತಿಥಿ, ಅಭ್ಯಾಗತ, ಅನಾಥ ಜನರನ್ನು ಆದರಿಸಿ, ಸೇವಿಸಲು, ಇರುತ್ತದೆ. ಉಳಿದ ಆಶ್ರಮಗಳ ಜನರು ಸುಖವಾಗಿದ್ದು ತಮ್ಮತಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಈ ಆಶ್ರಮವು ಸಹಾಯಕವಾದುದು. ಈ ಆಶ್ರಮದಲ್ಲಿರುವವರಿಗೆ ವೇದಗಳಲ್ಲಿನ ಬ್ರಾಹ್ಮಣಗಳ ವಿಷಯಗಳು ಮುಖ್ಯವಾಗಿರುತ್ತವೆ. ಆತ್ಮಕಲ್ಯಾಣ, ಲೋಕಕಲ್ಯಾಣ ಗಳೆರಡಕ್ಕೂ ಅಗತ್ಯವಾದ ಸದ್ಗುಣ, ಸದ್ವ್ಯವಹಾರಗಳ ಪೋಷಣೆ ಈ ಅವಸ್ಥೆಯ ಲಕ್ಷಣಗಳು. ಇದು ಮುಖ್ಯವಾಗಿ ಪಿತೃ, ನರ, ಭೂತಯಜ್ಞ ಮಾಡಿ ಋಣ ತೀರಿಸಲು ನೆರವು ನೀಡುತ್ತದೆ.

ನಮ್ಮನ್ನು ಈಗಿನ ಸ್ಥಿತಿಗೆ ತಂದ ತಾಯಿತಂದೆಗಳು ಈಗ ನಮ್ಮ ಕಣ್ಣು ಮುಂದೆ ಇಲ್ಲದಿದ್ದರೂ, ಅವರು ಯಾವುದೇಲೋಕದಲ್ಲಿ ಯಾವುದೇ ದೇಹವನ್ನು ಧರಿಸಿರಲಿ, ಅವ ರಿಗೆ ಸುಖಶಾಂತಿ ಸಿಗಲೆಂದು ಪ್ರಾರ್ಥಿಸುವುದು ಪಿತೃಯಜ್ಞ; ನಮ್ಮಜೀವನವು ಸುಸೂ ತ್ರವಾಗಿ ನೆರವೇರಬೇಕಾದರೆ ಸಾವಿರಾರು ಮಂದಿ ಮಾನವರು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನಮಗಾಗಿ ದುಡಿಯುತ್ತಿದ್ದಾರೆ. ಅವರಿಗೆ ನಮ್ಮಿಂದಾದಷ್ಟನ್ನಾದರೂ ಹಿಂದಿರುಗಿಸುವುದೇ ನರ ಅಥವಾ ಮನುಷ್ಯಯಜ್ಞ; ಜಂತುಗಳು, ಕ್ರಿಮಿಕೀಟಗಳು, ಮೃಗಪಕ್ಷಿಗಳು ಹಲವು ರೀತಿಯಲ್ಲಿ ನಮಗಾಗಿ ದುಡಿದು ಸಹಾಯಮಾಡುತ್ತವೆ. ಅವುಗಳಲ್ಲಿ ಪ್ರೀತಿ ತೋರಿಸಿ, ಆರೈಕೆ ಮಾಡುವುದು ಭೂತಯಜ್ಞ; ಅಪ್ರತ್ಯಕ್ಷವಾಗಿ ಋಷಿ ಮತ್ತು ದೇವ ಋಣವೂ ತೀರುತ್ತದೆ. ಅಂತರಂಗಶುದ್ಧಿ ಮತ್ತು ಶ್ರದ್ಧೆಗಳಿಂದ ಮಾಡಿದ ಲೋಕಸೇವೆಯಿಂದ ಚರಮಗುರಿಯನ್ನು ಸಾಧಿಸಬಹುದು.

ಮೂರನೆಯ ಕಾಲವಾದ **ವಾನಪ್ರಸ್ಥ** ಆಶ್ರಮದಲ್ಲಿ ಹೆಚ್ಚು ಹೆಚ್ಚು ಜ್ಞಾನವನ್ನು ಸಂಪಾದಿಸಿ, ಧ್ಯಾನಮಾಡಲು ಯೋಗ್ಯತೆಯನ್ನು ಪಡೆದು, ಹಿಂದಿನ ಎರಡು ಆಶ್ರಮಗಳಲ್ಲಿ ಹೊಂದಿದ್ದ ಮಾನವೀಯ ಸಂಬಂಧ ಹಾಗೂ ಹಿತಾಹಿತಗಳೆಲ್ಲವನ್ನೂ ತನ್ನ ಕುಲ, ವಂಶ, ಜನಾಂಗಗಳಿಗಾಗಿಯೇ ಮೀಸಲಾಗಿಡುವ ಬದಲು, ಅವುಗಳ ವ್ಯಾಪ್ತಿಯು ಸೀಮಾತೀತವಾಗಿರುವಂತೆ ಮಾಡಬೇಕಾಗುತ್ತದೆ. ಈ ಆಶ್ರಮದಲ್ಲಿರುವವರಿಗೆ ವೇದಗಳಲ್ಲಿನ ಆರಣ್ಯಕಗಳ ವಿಷಯವು ಆವಶ್ಯಕವಾಗುತ್ತದೆ. ಈ ಜನರು ಸಮಾಜದಲ್ಲಿನ ಇತರರಿಗೆ ಮೇಲ್ಪಂಕ್ತಿಯಾಗಿ ಜೀವಿಸುವಂಥವರು, ಹಾಗೂ ವಿಶ್ವಾತ್ಮರೆನಿಸಿಕೊಂಡಿರುವವರು. ಇವರು ದೇವಋಣವನ್ನು ತೀರಿಸಲು ಶಕ್ತರಾಗಿರುತ್ತಾರೆ. ನಾವು ಈ ಪ್ರಪಂಚದಲ್ಲಿರಲು ಏನು ಬೇಕೋ ಅದನ್ನೆಲ್ಲಾ ಮೊದಲೇ ಅಣಿಮಾಡಿ, ಇಲ್ಲಿಗೆ ಬಂದ ಮೇಲೆ ಯಾವ ಕಾಲಕ್ಕೆ ಏನು ಬೇಕೋ ಅದನ್ನೆಲ್ಲಾ ಒದಗಿಸಿ, ನಮ್ಮನ್ನು ಸದಾ ರಕ್ಷಿಸುತ್ತಿರುವವನು ದೇವರು. ಇದಕ್ಕಾಗಿ ಕೃತಜ್ಞತೆಯಿಂದ ಅವನನ್ನು ಪ್ರಾರ್ಥಿಸುವುದು ದೇವಯಜ್ಞವೆನಿಸಿಕೊಳ್ಳುತ್ತದೆ.

ಕೊನೆಯ **ಸಂನ್ಯಾಸ** ಆಶ್ರಮದಲ್ಲಿ ದೈಹಿಕ ಶಕ್ತಿಸಾಮರ್ಥ್ಯಗಳು ಕಮ್ಮಿಯಾದರೂ, ಈವರೆಗೆ ಅಪಾರವಾಗಿ ನಡೆಸಿದ ಸಮಾಜ ವೀಕ್ಷಣೆ, ಗ್ರಂಥಗಳ ಅಧ್ಯಯನ, ಧ್ಯಾನ-ಚಿಂತನೆಗಳಿಂದ ಗಳಿಸಿದ ಜ್ಞಾನಾನುಭವ, ಇವುಗಳಿಂದ ಸಫಲಜೀವನವನ್ನು ನಡೆಸುತ್ತ, ಆತ್ಮೋದ್ಧಾರ ಮತ್ತು ಆತ್ಮಸಾಕ್ಷಾತ್ಕಾರಗಳಿಗೆ ಸಿದ್ಧತೆ ಮಾಡಿಕೊಳ್ಳಬೇಕು. ಈ ಆಶ್ರಮದಲ್ಲಿರುವವರಿಗೆ ವೇದಗಳಲ್ಲಿನ ಉಪನಿಷತ್ತುಗಳ ವಿಷಯವು ಆವಶ್ಯಕವಾಗುತ್ತದೆ. ಜಗತ್ತೆಲ್ಲವೂ ಬ್ರಹ್ಮಮಯ ಎಂದು ಅರಿತ ಈ ಮಹಾಚೇತನಗಳಲ್ಲಿ ಜಗತ್ತೆಲ್ಲವೂ ತಮ್ಮ ಸಂಸಾರವೇ ಎಂಬ ಮಮತೆ ಉತ್ಪನ್ನವಾಗುತ್ತದೆ. ಇವರು ವೈಯಕ್ತಿಕ ಸಂಸಾರವನ್ನು ದಾಟಿ ವಿಶ್ವಸಂಸಾರವನ್ನು ಕಟ್ಟಿಕೊಂಡಿರುವವರು. ಅಂತ್ಯದಲ್ಲಿ ಇವರಿಗೆ ಮೋಕ್ಷವು ಕಟ್ಟಿಟ್ಟ ಬುತ್ತಿ.

ಶ್ರೀವೈಷ್ಣವ ಭಕ್ತನನ್ನು ಪಂಚಕಾಲಜ್ಞ ಎಂದು ಕರೆಯಲಾಗುತ್ತದೆ. ಏಕೆಂದರೆ ಅವನು ತನ್ನ ದಿನದ ಸಮಯವನ್ನು ಐದು ಭಾಗವನ್ನಾಗಿ ಮಾಡಿ ಆಮೂಲಕ ಭಗವಂತನ ಪೂಜೆಯಲ್ಲಿ ನಿರಂತರವಾಗಿ ಇರುತ್ತಾನೆ, ಕರ್ಮಗಳನ್ನು ಆಚರಿಸುತ್ತಾನೆ. ಈ **ಪಂಚಕಾಲ**ಗಳ **ಕೆಲಸ**ವನ್ನು ಸರಿಯಾಗಿ ಅರಿತು ಆಚರಿಸಬೇಕು.

ದಿನದ ಒಂದನೆಯ ಪ್ರಹರದಲ್ಲಿ ಬೆಳಗಿನ ಶೌಚ, ಸ್ನಾನ, ಊರ್ಧ್ವಪುಂಡ್ರ, ಸಂಧ್ಯಾವಂದನೆ, ಜಪ, ಧ್ಯಾನ, ಅರ್ಚನೆಗಳನ್ನು ಮಾಡುತ್ತ ಪರಮಾತ್ಮನ ವಿಷಯದ ಕಡೆ ಇರುವುದು **ಅಭಿಗಮನ**; ಎರಡನೆಯ ಪ್ರಹರದಲ್ಲಿ ಭಗವದಾರಾಧನಕ್ಕೆ ಬೇಕಾಗುವ ಪೂಜಾಸಾಮಗ್ರಿಗಳನ್ನು ಸಂಗ್ರಹಿಸುವುದು ಮತ್ತು ಜೀವಿಸಲು ಬೇಕಾದಷ್ಟನ್ನು ಸಂಪಾದಿಸುವುದು **ಉಪಾದಾನ**; ಮೂರನೆಯ ಪ್ರಹರದಲ್ಲಿ ಉಪಕರಣಗಳಿಂದ

ವಿಧ್ಯುಕ್ತವಾಗಿ ದೇವತಾರಾಧನೆಯನ್ನು ಮಾಡುವುದು **ಇಜ್ಯಾಪೂಜಾ** ಮತ್ತು ಪಂಚ ಮಹಾಯಜ್ಞದ ಮೂಲಕ ದೇವ, ಋಷಿ, ಪಿತೃ, ನರ, ಭೂತ ಎಂಬೀ ಪಂಚಋಣ ವನ್ನು ತೀರಿಸಿ, ದೇವರಿಗೆ ಸಮರ್ಪಿಸಿದ ಆಹಾರವನ್ನು ಭುಂಜಿಸುವುದು **ಅನುಯಾಗ;** ನಾಲ್ಕನೆಯ ಪ್ರಹರದಲ್ಲಿ ತನ್ನ ರುಚಿ, ಶಕ್ತಿಗಳಿಗನುಸಾರ ವೇದ ಶಾಸ್ತ್ರ ಪುರಾಣೇತಿಹಾಸ ಆಗಮ ಪ್ರಬಂಧಗಳ ಶ್ರವಣ, ಮನನ, ಉಪದೇಶ, ಮಾಡುವುದು **ಅಧ್ಯಯನ** ಮತ್ತು **ಅಧ್ಯಾಪನ;** ರಾತ್ರಿಯ ಮೊದಲನೆಯ ಪ್ರಹರದಲ್ಲಿ ಪರಮಾತ್ಮನನ್ನು ಕುರಿತು ಚಿಂತನೆ ಮಾಡಿ, ಭಗವತ್ಪೂಜೆಯನ್ನು ಮಾಡಿ, ಅಷ್ಟಾಂಗಯೋಗವನ್ನು ಅನುಷ್ಠಾನಮಾಡಿ, ವಿಶ್ರಾಂತಿ ಪಡೆಯುವುದು **ಯೋಗ.** ಶರೀರಯಾತ್ರೆಯಲ್ಲಿ ಉಪೇಕ್ಷೆ ಹಾಗೂ ಆತ್ಮ ಯಾತ್ರೆಯಲ್ಲಿ ಅಪೇಕ್ಷೆ ಮುಖ್ಯವಾಗಿರುವ ಈ ಪಂಚಕಾಲಗಳ ಕೆಲಸವೆಲ್ಲ ನಿಷ್ಠಾವಂತ ನಾದ ಶ್ರೀವೈಷ್ಣವನಿಗೆ ಮುಖ್ಯವಾದ ಕರ್ಮ. "ಕಲ್ಯೋದ್ಬೋಧೋಽಚ್ಯುತಾಂಘ್ರಿ ಸ್ಮರಣಮುಷಸಿಚಸ್ನಾನಮರ್ಘ್ಯಂ ಜಪೋಽಗ್ನ್ಯೌ । ಹೋಮಶ್ಚ ಬ್ರಹ್ಮಯಜ್ಞೋಹಿತ ಭಜನಮಥಸ್ನಾನ ಮಧ್ಯಾಹ್ನ ಕೃತ್ಯೇ ॥ ವಿಷ್ಣ್ವರ್ಚಾ ವೈಶ್ವದೇವಂ ಮಖವಿಧಿರಶನಂ ಸತ್ಪ್ರಬಂಧಾನುಸಂಧಾ। ಸಂಧ್ಯಾ ಹೋಮಾರ್ಚನಾನ್ನಂ ಶ್ರುತಿ ಮನನಮಿತಿಪ್ರತ್ಯಹಂಸ ಚ್ಚರಿತ್ರಂ ॥ ಇದು ಸಂಗ್ರಹವಾಗಿ ಒಂದು ದಿನದಲ್ಲಿ ನಡೆಸಬೇಕಾದ ಆಹ್ನಿಕವಿಧಿ.

ಇದೇ ಅಲ್ಲದೆ ಪವಿತ್ರ ಕ್ಷೇತ್ರಗಳಿಗೆ ಯಾತ್ರೆಹೋಗಿ, ಅಲ್ಲಿನ ತೀರ್ಥಗಳಲ್ಲಿ ಸ್ನಾನ ಮಾಡಿ, ಅಲ್ಲಿನ ದೇವಾಲಯಗಳಲ್ಲಿರುವ ಅರ್ಚಾಮೂರ್ತಿಗಳಿಗೆ ಕೈಂಕರ್ಯ ನಡೆಸು ವುದು, ಭಗವದ್ದ್ವೇಷಿಗಳಿಂದ ದೂರವಿದ್ದು ಭಗವದ್ಭಕ್ತರ ಸಂಗದಲ್ಲಿರುವುದು—ಇವೂ ಮುಖ್ಯವಾದ ನಿತ್ಯನೈಮಿತ್ತಿಕ ಕರ್ಮಗಳು.

ಕರ್ಮವೇ ಜೀವನಯಾತ್ರೆಯ ಪ್ರಧಾನವಾದ ಆಧಾರ. ಕರ್ಮಚಕ್ರದಿಂದ ಯಾರೂ ತಪ್ಪಿಸಿಕೊಳ್ಳಲಾರರು. ಒಂದು ಕ್ಷಣವೂ ಕರ್ಮಮಾಡದೆ ಯಾವ ವ್ಯಕ್ತಿಯೂ ಇರಲಾರ. ಪ್ರಕೃತಿಯ ಮೂರು ಗುಣಗಳು ಬಲಾತ್ಕಾರವಾಗಿ ನಮ್ಮಿಂದ ಕರ್ಮವನ್ನು ಮಾಡಿಸುತ್ತವೆ. ಕರ್ಮದ ಮೂಲಕ ವ್ಯಕ್ತವಾಗಲೆತ್ನಿಸುವ ನಮ್ಮ ಮೂಲ ಸ್ವಭಾವವನ್ನು ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಪಡೆಯಲು ಪರಿವರ್ತಿಸ ಬಹುದು. ಆದುದರಿಂದ ಮನುಷ್ಯರು ತಮ್ಮಪಾಲಿಗೆ ಬಂದ ಕರ್ಮವನ್ನಾಚರಿಸಿ ಸಿದ್ಧಿ ಯನ್ನು ಹೊಂದಬಹುದು.

ಕರ್ಮದ ಮೇಲೆ ಇರುವ ವಾಸನೆ, ಫಲಾಕಾಂಕ್ಷೆ, ಆಸಕ್ತಿಗಳೇ ನಮ್ಮನ್ನು ಸಂಸಾರದಲ್ಲಿ ಬಂಧಿಸುತ್ತವೆ. ಫಲಾಪೇಕ್ಷೆ ಇಲ್ಲದೆ ಮಾಡಲಾದ ಕರ್ಮಗಳು ಬಂಧನ ವನ್ನುಂಟುಮಾಡುವುದಿಲ್ಲ. ಆದುದರಿಂದ ಕರ್ಮವನ್ನು ಒಂದು ಯಜ್ಞದಂತೆ ಮಾಡ ಬೇಕು. ನಿಸ್ವಾರ್ಥ ಬುದ್ಧಿಯಿಂದ ಮಾಡಲಾದ ಹಾಗೂ ಪರಮಾತ್ಮನ ಕಡೆಗೆ ಕರೆ ದೊಯ್ಯುವ ಸಮಸ್ತ ಕರ್ಮಗಳೂ ಯಜ್ಞವೆನಿಸುತ್ತವೆ. ಕರ್ಮವನ್ನು ಯೋಗದಂತೆ

ಬಹಳ ಕೌಶಲದಿಂದ ಮಾಡಬೇಕು. ಫಲಾಕಾಂಕ್ಷೆಯು ಮತ್ತು ಕರ್ತೃತ್ವವೆಂಬ ಅಭಿಮಾನದ ತ್ಯಾಗ, ಈಶ್ವರಾರ್ಪಣ ಬುದ್ಧಿ ಇವು ಕರ್ಮವನ್ನು ಯೋಗದಲ್ಲಿ ಪರಿವರ್ತಿಸುತ್ತವೆ. ಕರ್ಮವನ್ನು ತ್ಯಜಿಸದೆ, ಕರ್ಮದ ಫಲವನ್ನು ತ್ಯಾಗ ಮಾಡಬೇಕು. ಅಜ್ಞರು ಇಚ್ಛೆ, ಆಸಕ್ತಿಗಳಿಂದ ಕರ್ಮಮಾಡುತ್ತಾರೆ, ಆದರೆ ಜ್ಞಾನಿಗಳು ನಿರಾಸಕ್ತರಾಗಿ, ಕೇವಲ ಕರ್ತವ್ಯ ಬುದ್ಧಿಯಿಂದ, ಲೋಕಸಂಗ್ರಹ ನಿಮಿತ್ತವಾಗಿ ಕಾರ್ಯಗಳನ್ನು ಮಾಡುತ್ತಾರೆ.

ಆಚರಿಸಲ್ಪಟ್ಟ ಕರ್ಮವು, ಆಚರಿಸಿದವನ ಸ್ವಂತಪ್ರಯೋಜನವನ್ನು ಲೆಕ್ಕಿಸದೆ, ಪ್ರಾಣಿಹಿತ ಮತ್ತು ಪ್ರಪಂಚಹಿತಗಳನ್ನುಂಟುಮಾಡುವಂತಹುದಾಗಿರಬೇಕು. ಇಹದ ಸುಖಕ್ಕಾಗಿ ಮತ್ತು ಭೋಗಜೀವನಕ್ಕಾಗಿ ಮಾಡಿದ ಕರ್ಮಗಳು ನಿಷ್ಫಲವಾಗಿ ಗುರಿಯನ್ನು ಮುಟ್ಟಿಸಲಾರವು. ಆದರೆ ಕರ್ತವ್ಯಗಳನ್ನು ಲೋಕಸಂಗ್ರಹ ನಿಮಿತ್ತವಾಗಿ ಭಗವಂತನ ಕೈಂಕರ್ಯವೆಂದೇ ಭಾವಿಸಿ ಎಸಗಿದರೆ, ಅವು ಸಫಲವಾಗಿ ಗುರಿಯನ್ನು ಮುಟ್ಟಿಸಿ, ಮೋಕ್ಷಕ್ಕೆ ಸಾಧಕವಾಗುತ್ತವೆ. ಹೀಗೆ ಪರಮಾತ್ಮನನ್ನು ನೋಡಿ ಆನಂದಿಸಲು, ಸ್ವಾರ್ಥತ್ಯಾಗಮಾಡಲು, ಋಣವನ್ನು ತೀರಿಸಲು ಇರುವ ಈ ಮತೀಯ ಕರ್ತವ್ಯಗಳನ್ನು ಮಾಡುತ್ತ, ಪಾಪಕಾರ್ಯಗಳಿಂದ ದೂರ ಉಳಿದರೆ ನಿಜವಾದ ಜ್ಞಾನ ಉದಯಿಸುತ್ತದೆ. ಇದೇ ಕರ್ಮಯೋಗ.

ತಾನಿರುವ ಪ್ರಪಂಚದ ಸ್ಥಿತಿಯು ಹೀನವಾಗಿದ್ದಲ್ಲಿ ಅದಕ್ಕಾಗಿ ವ್ಯಸನಪಡದೆ, ಅದು ತಾತ್ಕಾಲಿಕವಾದುದೆಂದು ತಿಳಿದು, ಅದರ ವಿಷಯದಲ್ಲಿ ಉದಾಸೀನ, ವೈರಾಗ್ಯ ತಳೆದು, ಭವಿಷ್ಯತ್ತಿನ ಸುಖಸಂತೋಷಗಳಿಗಾಗಿ ಅವಶ್ಯವಾದ ಮನೋಧರ್ಮ, ಆಚರಣೆಗಳನ್ನು ಹೊಂದಿರಬೇಕು. ಕರ್ಮಯೋಗದಿಂದ ತಾನು ಪರಮಾತ್ಮನ ಅಂಶವೆಂಬ ಜ್ಞಾನ ಹೊಂದಿದಾಗ ಅದೇ ಜ್ಞಾನಯೋಗವಾಗುತ್ತದೆ. ಮುಖ್ಯವಾಗಿ ಗುರೂಪದೇಶದಿಂದ ಜೀವಾತ್ಮ ಪರಮಾತ್ಮರ ಯಥಾರ್ಥ ಜ್ಞಾನವನ್ನು ಹೊಂದಿ, ಸ್ವಶಕ್ತ್ಯನುಸಾರವಾಗಿ ಫಲಸಂಗವನ್ನು ಬಿಟ್ಟು ಆಚರಿಸುವ, ನಿಷಿದ್ಧವಲ್ಲದ, ಕಾಮ್ಯಕವಲ್ಲದ, ನಿತ್ಯನೈಮಿತ್ತಿಕ ಕರ್ಮಗಳೆಲ್ಲ ಕರ್ಮಯೋಗವೆನಿಸುತ್ತದೆ. ಇವನ್ನು ಆಚರಿಸುವುದು ಎಲ್ಲರಿಗೂ ಸಾಧ್ಯ.

## 2. ಜ್ಞಾನಮಾರ್ಗ

ಪ್ರಕೃತಿಯ ಮಾಯಾ ತೆರೆಯನ್ನು ಸರಿಸಿ ಜಗತ್ತಿನ ತತ್ತ್ವಗಳ ಅಂದರೆ ಪ್ರಪಂಚ, ಆತ್ಮ, ಪರಬ್ರಹ್ಮ ಇವುಗಳ ವಿಷಯದಲ್ಲಿ ಸತ್ಯವನ್ನು ಅರಿತು, ಅನುಸಂಧಾನ ಮಾಡುವುದು ಜ್ಞಾನಮಾರ್ಗ. ವಿಶ್ವನಿಯಾಮಕನಾದ ಪರಮಾತ್ಮನ ಅಧೀನಕ್ಕೆ ಒಳಪಟ್ಟಿದ್ದು, ಅವನನ್ನೇ ಅವಲಂಬಿಸಿ, ಅವನ ಉದ್ದೇಶ ಪೂರೈಕೆಗಾಗಿ ಇರುವ ಜೀವಾತ್ಮ—ಪ್ರಕೃತಿಗಳ

ವಿಷಯದಲ್ಲಿ ಹಾಗೂ ಪರಮಾತ್ಮನೊಡನೆ ಇವೆರಡರ ಸಂಬಂಧದ ಬಗ್ಗೆ, ಜಿತೇಂದ್ರಿಯನಾಗಿ ನಿರಂತರವಾದ ಧ್ಯಾನ–ಚಿಂತನೆಗಳಲ್ಲಿರುವುದು ಜ್ಞಾನಯೋಗವೆನಿಸುತ್ತದೆ.

ಪ್ರತಿಯೊಬ್ಬ ಮಾನವನೂ ತನ್ನ ದೇಹದ ನಶ್ವರತೆಯನ್ನೂ, ಆತ್ಮನ ನಿತ್ಯತೆಯನ್ನೂ, ಇವೆರಡನ್ನೂ ಧರಿಸಿರುವಪರಮಾತ್ಮನ ಸರ್ವೋತ್ಕೃಷ್ಟತೆಯನ್ನೂ ಅನುಸಂಧಾನ ಮಾಡುತ್ತ, ಆತ್ಮನ ಯಥಾರ್ಥಸ್ವರೂಪಜ್ಞಾನದ ಅರಿವು ಉಂಟಾದಾಗ, ಆ ಆತ್ಮಸ್ವರೂಪಚಿಂತನೆಯಲ್ಲಿಯೇ ಸಂತುಷ್ಟನಾಗಿ, ಇತರ ಎಲ್ಲ ಆಸೆಗಳನ್ನೂ ಸಂಪೂರ್ಣವಾಗಿ ತ್ಯಾಗಮಾಡಿ ಸ್ಥಿತಪ್ರಜ್ಞನಾಗುತ್ತಾನೆ. ಆಗ ದೇಹವೇ ಆತ್ಮ ಎಂಬ ಭ್ರಮೆ, ಮಮತೆ, ಮೋಹ ಮುಂತಾದುವು ಇರುವುದಿಲ್ಲ. ಜೀವವು ಪ್ರಕೃತಿಯಿಂದ ಭಿನ್ನ, ಈಶ್ವರನ ಶೇಷ ಎಂಬ ತಿಳಿವಳಿಕೆ ಬಂದಾಗ ಜೀವಿಯಲ್ಲಿ ಪರಮಾತ್ಮನಲ್ಲದೆ ಇತರ ವಸ್ತು–ವಿಷಯಗಳಲ್ಲಿ ವೈರಾಗ್ಯ ಹುಟ್ಟುತ್ತದೆ. ಜಗತ್ತಿಗೂ, ತನಗೂ, ಒಡೆಯನಾದ, ಅಂತರ್ಯಾಮಿಯಾದ ಪರಮಾತ್ಮನಿಗೆ ತಾನು ದಾಸ ಎಂಬ ಪವಿತ್ರ ಜ್ಞಾನ ಹುಟ್ಟಿದಾಗ, ಪರಮಾತ್ಮನಲ್ಲಿ ತುಂಬ ಗೌರವಹುಟ್ಟಿ, ಅವನ ಕಲ್ಯಾಣ ಗುಣಗಳನ್ನು ಸ್ಮರಿಸಿ, ಮನನ ಮಾಡಿದರೆ, ಅವನಲ್ಲಿ ಪ್ರೀತಿಹುಟ್ಟಿ, ಪ್ರೀತಿ ಅಥವಾ ಭಕ್ತಿಯು ವಿಕಾಸಗೊಂಡಾಗ ಅದು ಶರಣಾಗತಿಯಲ್ಲಿ ಪರ್ಯವಸಾನ ಹೊಂದುತ್ತದೆ.

ಜ್ಞಾನ ಲಭಿಸಲು ಗುರುಕರುಣೆ ಬೇಕಾಗುತ್ತದೆ. **ಸಾಧನ ಚತುಷ್ಟಯ**ಸಂಪತ್ತಿ ಉಳ್ಳವನು ಮಾತ್ರ ಬ್ರಹ್ಮನ ವಿಚಾರಮಾಡಿ ಜ್ಞಾನಿಯಾಗಲು ಯೋಗ್ಯನಾಗುತ್ತಾನೆ. (1) ನಿತ್ಯಬಳಕೆಯಲ್ಲಿ ಬೆರೆತಿರುವ ನಿತ್ಯ–ಅನಿತ್ಯ, ಸತ್ಯ–ಮಿಥ್ಯಗಳನ್ನು ಅರಿಯುವುದು **ನಿತ್ಯಾನಿತ್ಯವಸ್ತುವಿವೇಕ.** ನಮ್ಮೊಂದಿಗೆ ಬರುವ ಪರಮಾತ್ಮವಸ್ತು ಸತ್ಯವಾದುದು; ನಮ್ಮೊಂದಿಗೆ ಬಂದ ಹಣ, ಕೀರ್ತಿ, ಅಧಿಕಾರ ಇವು ಮಿಥ್ಯವಾದುವು. (2) ಬಂಧನಕ್ಕೆ ಗುರಿ ಮಾಡುವ ಇಹಪರ ಲೋಕಗಳ ಫಲಗಳನ್ನು ನಿಕೃಷ್ಟ ದೃಷ್ಟಿಯಿಂದ ನೋಡಿ ತ್ಯಾಗಮಾಡುವುದು **ಇಹಾಮುತ್ರಫಲಭೋಗವಿರಾಗ.** (3) ಆರು ಸದ್ಗುಣಗಳನ್ನು ಪಡೆದಿರುವುದು **ಶಮದಮಾದಿಷಟ್ಕ.** ವಿಷಯ ವಸ್ತುಗಳನ್ನು ಆಶಿಸುವ ಮನಸ್ಸನ್ನು ನಿಗ್ರಹಿಸುವುದು **ಶಮ;** ಸ್ಥೂಲವಾದ ಇಂದ್ರಿಯಗಳನ್ನು ಆಯಾ ಅನರ್ಥ ವಸ್ತುವಿಷಯಗಳ ಸಂಬಂಧದಿಂದ ತಡೆಯುವುದು **ದಮ;** ನಿಂದೆ ಶಿಕ್ಷೆಗಳಿಗೆ ಪಾತ್ರರಲ್ಲದಿದ್ದಾಗಲೂ, ಟೀಕೆ, ಶಿಕ್ಷೆ ಆದಾಗ, ತಾಳ್ಮೆಯಿಂದ ಸಹಿಸುವುದು **ತಿತೀಕ್ಷೆ;** ಮನಸ್ಸಿನೊಳಗಿರುವ ವಿಷಯಸುಖದ ಆಸೆಯನ್ನು ತ್ಯಜಿಸಿ, ಉದ್ವಿಗ್ನತೆಗೆ ಒಳಗಾಗದೆ, ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿಟ್ಟಿರುವುದು **ಉಪರತಿ;** ಮಹಾಮಹಿಮರ ನುಡಿ, ಗುರುವಾಕ್ಯ, ಆಧ್ಯಾತ್ಮಿಕ ವಿಷಯ ಇವುಗಳನ್ನು ಬೋಧಿಸುವ ಶಾಸ್ತ್ರಗಳಲ್ಲಿ ವಿಮರ್ಶಾತ್ಮಕವಾದ ನಂಬಿಕೆ ಹೊಂದಿ, ಜೀವನದಲ್ಲಿ ಅದರ ಪ್ರಯೋಗಮಾಡುವುದು **ಶ್ರದ್ಧೆ;** ತಿಳಿದು ಅನುಷ್ಠಾನ ಮಾಡುತ್ತಿರುವ ಬಲ್ಲವರಿಂದ ಕೇಳುವುದು **ಶ್ರವಣ;** ತಿಳಿದು ಅದನ್ನೇ

ಆಲೋಚಿಸಿ, ಚಿಂತನೆಮಾಡುವುದು **ಮನನ;** ಮನಸ್ಸು ಸತ್ಯದ ಮೇಲೆ ನೆಲಸುವುದು **ನಿಧಿಧ್ಯಾಸನ.** (4) ಸ್ವರ್ಗನರಕಗಳನ್ನು ಆಶಿಸದೆ, ಮುಕ್ತನಾಗಲು ಇರುವ ಆಸಕ್ತಿಯೇ **ಮುಮುಕ್ಷತ್ವ** ಎನಿಸಿಕೊಳ್ಳುತ್ತದೆ.

ಎಲ್ಲ ಪ್ರಾಣಿಗಳಲ್ಲಿಯೂ ಆತ್ಮನನ್ನು ನೋಡುವುದು, ಆತ್ಮನಲ್ಲಿ ಸಮಸ್ತ ಪ್ರಾಣಿಗಳನ್ನು ನೋಡುವುದು—ಇವು ಜ್ಞಾನದ ಪರಸ್ಪರಪೂರಕವಾದ ಎರಡು ಮಾರ್ಗಗಳು. ಈ ಜ್ಞಾನವು ಮೋಹ, ಕೋಪ, ದ್ವೇಷಗಳನ್ನು ಹೋಗಲಾಡಿಸುತ್ತದೆ. ಕಣ್ಣಿಗೆ ಕಾಣಿಸದ, ಕಿವಿಗೆ ಕೇಳಿಸದ, ಇಂದ್ರಿಯಗಳ ಅರಿವಿಗೆ ನಿಲುಕದ, ಜೀವಾತ್ಮ—ಪರಮಾತ್ಮ ಸ್ವರೂಪ ಚಿಂತನೆಯಲ್ಲಿ ಚಂಚಲವಾದ ಮನಸ್ಸನ್ನು ನಿಲ್ಲಿಸುವುದು ಬಲುಕಷ್ಟ. ಇಂದ್ರಿಯನಿಗ್ರಹ, ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸುವುದು, ರಾಗ ದ್ವೇಷಗಳನ್ನು ಬಿಡುವುದು ಸುಲಭವೇನಲ್ಲ. ಆದಕಾರಣ ಜ್ಞಾನಯೋಗವನ್ನು ಎಲ್ಲರೂ ಆಚರಿಸಲಾರರು. ಕರ್ಮಯೋಗದ ಮೂಲಕ ನಿರ್ಮಲವಾದ ಮನಸ್ಸನ್ನು ಪಡೆದು, ಜಿತೇಂದ್ರಿಯರಾದ ಕೆಲವರು ಮಾತ್ರ ಜ್ಞಾನಯೋಗವನ್ನು ಅನುಷ್ಠಿಸಲು ಅರ್ಹರು.

ಜ್ಞಾನಯೋಗಕ್ಕೆ ಅವಶ್ಯವಾದ ಚಂಚಲ ಮನಸ್ಸನ್ನು ನಿಗ್ರಹಿಸಿ ಏಕಾಗ್ರತೆಯಲ್ಲಿಡಲು ಯಮನಿಯಮಾದಿ ಅಷ್ಟಾಂಗಯೋಗ ನಿಯಮಗಳು ಅಂದರೆ **ರಾಜಯೋಗ**ವು ಮುಖ್ಯವಾದುದು. ಇದರ ಗುರಿ ಜಿತೇಂದ್ರಿಯತ್ವ. (1) ಕಾಯಾ ವಾಚಾ ಮನಸಾ ಅಂದರೆ ಕೃತಿ, ಮಾತು, ಆಲೋಚನೆಗಳಿಂದ ಯಾರಿಗೂ ಹಿಂಸೆಮಾಡದಿರುವುದು **ಅಹಿಂಸೆ;** ಅಂಜಿಕೆ, ಸ್ವಾರ್ಥಗಳನ್ನು ಬಿಟ್ಟು ಬಾಳುವುದು **ಸತ್ಯ;** ಶ್ರಮಪಡದೆ ಆಸ್ತಿ, ಹಕ್ಕುಗಳನ್ನು ಪಡೆಯದಿರುವುದು **ಅಸ್ತೇಯ;** ಲೈಂಗಿಕ ಶಕ್ತಿಯನ್ನು ನಿಗ್ರಹಿಸಿ, ಅದನ್ನು ಊರ್ಧ್ವಗಾಮಿಯಾಗಿ ಮಾಡಿ ಜಿತೇಂದ್ರಿಯನಾಗಿರುವುದು **ಬ್ರಹ್ಮಚರ್ಯ;** ದಾನಸ್ವೀಕಾರ, ಋಣಿಯಾಗಿರುವುದು, ಪರತಂತ್ರನಾಗಿರುವುದು ಇವುಗಳ ತ್ಯಾಗವೇ **ಅಪರಿಗ್ರಹ** — ಇವು ಐದೂ ಸೇರಿ **ಯಮ** ಎನಿಸುತ್ತದೆ. (2) ಬಾಹ್ಯ ಹಾಗೂ ಆಂತರಿಕವಾಗಿ ದೇಹ—ಮನಸ್ಸುಗಳು ಶುದ್ಧಿಯಾಗಿರುವುದು **ಶೌಚ;** ಗೊಣಗದೆ, ಟೀಕಿಸದೆ, ದೇವರಿಂದ ದೊರೆತಷ್ಟರಲ್ಲಿ ಸಂತೋಷಪಡುವುದು **ತೃಪ್ತಿ;** ದ್ವಂದ್ವ ಜೀವನದಲ್ಲಿ ಸಮತ್ವವನ್ನು ಹೊಂದಿರುವುದು **ತಪಸ್ಸು;** ಆಧ್ಯಾತ್ಮಿಕ ವಿಷಯವನ್ನು ಪದೇ ಪದೇ ಅಧ್ಯಯನಮಾಡುತ್ತ, ಕ್ರಮಬದ್ಧ ಅಭ್ಯಾಸ, ಮನನ ಮಾಡುತ್ತ ಇರುವುದು **ಸ್ವಾಧ್ಯಾಯ;** ಭಕ್ತಿ ಶ್ರದ್ಧೆಗಳಿಂದ ಅವನ ಕೃಪೆಗಾಗಿ ಪ್ರಾರ್ಥಿಸುತ್ತ ಪರಮಾತ್ಮನಿಗೆ ಶರಣು ಹೋಗುವುದು, ಅವನಿಗೇ ಸಾಧನೆಯ ಫಲವನ್ನು ಅರ್ಪಿಸುವುದು **ಈಶ್ವರಪ್ರಣಿಧಾನ**—ಇವು ಐದೂ ಸೇರಿ **ನಿಯಮ**ವಾಗುತ್ತದೆ. (3) ನಿದ್ರೆ, ಆಕಳಿಕೆ, ಸೋಮಾರಿತನಗಳಿಲ್ಲದೆ ಬೆನ್ನುಮೂಳೆಯನ್ನು ನೇರವಾಗಿ ಇಟ್ಟುಕೊಂಡು ಕುಳಿತು ಧ್ಯಾನಿಸಲು ಬೇಕಾದಸ್ಥಿತಿಯೇ **ಆಸನ.** (4) ಬಿಡುವ ಉಸಿರು

ಹಾಗೂ ಮಾಡುವ ಆಲೋಚನೆಗಳಲ್ಲಿ ನಿಕಟಸಂಬಂಧವಿದ್ದು ಪ್ರಾಸಬದ್ಧವಾದ ಉಸಿರಿನಿಂದ ಮಾನಸಿಕ ಶಕ್ತಿಯನ್ನೆಲ್ಲ ನಿಗ್ರಹಿಸಿ ಧ್ಯಾನಮಾಡುವುದು **ಪ್ರಾಣಾಯಾಮ.** (5) ಇಂದ್ರಿಯಗಳು ಬಾಹ್ಯವಿಷಯ ಮುಖವಾಗುವುದನ್ನು ತಡೆದು, ಅವು ಧ್ಯಾನದಲ್ಲಿ ಸಹಕರಿಸಿ ಅಂತರಾಳದಲ್ಲಿರುವ ಪರಮಾತ್ಮನ ದರ್ಶನಮಾಡುವುದು **ಪ್ರತ್ಯಾಹಾರ.** (6) ಭಗವಂತನ ಒಂದು ಆಕಾರ, ಚಿತ್ರ, ಮೂರ್ತಿ, ಗುಣ, ಭಾವಗಳ ಮೇಲೆ ಮನಸ್ಸನ್ನು ಏಕಾಗ್ರಗೊಳಿಸಿ ತನ್ಮಯನಾಗುವುದು **ಧ್ಯಾನ.** (7) ದೇಹದ ಒಂದು ಭಾಗದ ಮೇಲೆ ಏಕಾಗ್ರಗೊಳಿಸಿದನಂತರ ಮನಸ್ಸನ್ನು ಅಲ್ಲಿಯೇ ಸ್ವಲ್ಪಕಾಲ ಹಿಡಿದು ನಿಲ್ಲಿಸುವುದು **ಧಾರಣ.** (8) ಧ್ಯಾನಿಸುತ್ತಿರುವಾಗ ತನ್ನನ್ನೇ ಮರೆತು ಪರಮಾತ್ಮನಲ್ಲಿ ಐಕ್ಯವಾಗಿ ಸಾಕ್ಷಾತ್ಕಾರ ಪಡೆಯುವುದು **ಸಮಾಧಿ.**

ರಾಜಯೋಗದ ಈ ಅಷ್ಟಾಂಗಯೋಗಗಳು ಜ್ಞಾನಯೋಗಕ್ಕೆ ಸಹಕಾರಿಯಾಗಿರುವುದರಿಂದ ಇವೂ ಅದರೊಳಗೇ ಸೇರಿಹೋಗುತ್ತವೆ. ಸತ್ಸಂಗ ಮತ್ತು ಶಾಸ್ತ್ರಾಭ್ಯಾಸಗಳಿಂದ ಅರಿತು, ಪ್ರೀತಿಯಿಂದ ಮಾಡಿದ ಧ್ಯಾನವು ಉಪಾಸನೆ ಎನಿಸಿಕೊಂಡು, ಸ್ನೇಹವಾಗಿ ಪರಿಣಮಿಸಿ, ಪರಮಾತ್ಮನ ಸಾಕ್ಷಾತ್ಕಾರ ಅಥವಾ ಮುಕ್ತಿಯನ್ನು ದೊರಕಿಸಿ ಕೊಡಬಲ್ಲದು.

## 3. ಭಕ್ತಿಮಾರ್ಗ

ಭಕ್ತಿಯು ಭಾರತದ ಧಾರ್ಮಿಕ ಜೀವನದಲ್ಲಿ ಬಹು ಹಿಂದಿನಿಂದಲೂ ಇರುವ ಒಂದು ಮುಖ್ಯ ಅಂಶ. ಭಾರತದಲ್ಲಿ ಪ್ರಚಲಿತವಾಗಿರುವ ವಿವಿಧ ಮತ, ಪಂಥ, ಮಾರ್ಗಗಳಲ್ಲಿ ಭಕ್ತಿಮಾರ್ಗವೇ ಬಹು ಲೋಕಪ್ರಿಯವಾದುದು. ಭಕ್ತಿಯ ಸಾಧನಗಳಾದ ಕರ್ಮ, ಜ್ಞಾನಗಳಿಗಿಂತಲೂ ಭಕ್ತಿಯಿಂದಲೇ ಮೋಕ್ಷವು ಬೇಗ ಸಾಧಿಸಲ್ಪಡುತ್ತದೆ. ಮಾನವನು ತನ್ನಲ್ಲಿ ಸ್ವಾಭಾವಿಕವಾಗಿರುವ ಪ್ರೀತಿಯ ಭಾವನೆಯನ್ನು ಪರಿಶುದ್ಧ, ವಿಕಾಸ, ವಿಸ್ತಾರ ಮಾಡುವುದರಿಂದ, ಅನಂತ ಪ್ರೇಮದೊಡೆಯನಾದ ಭಗವಂತನನ್ನು ಸಾಕ್ಷಾತ್ಕಾರಮಾಡಿಕೊಳ್ಳಬಹುದು. ಇದೇ ಮಾನವನ ಮುಖ್ಯ ಧ್ಯೇಯ.

ತಾಯಿತಂದೆ, ಗುರುಹಿರಿಯರು, ರಾಜರಾಣಿ, ಸುಂದರವಸ್ತು, ಸತಿಸುತ ಇವುಗಳ ಮೇಲಿರುವ ಪ್ರೀತಿಯು ಭಕ್ತಿ ಎನಿಸಿಕೊಳ್ಳಲಾರದು. ಜನನಮರಣರಹಿತ, ಹಾಗೂ ನಿತ್ಯ ಸತ್ಯನಾದ ಪರಬ್ರಹ್ಮನೆಡೆಗೆ ಹೊರಹೊಮ್ಮಿ ಹರಿಯುವ ಪರಿಶುದ್ಧ, ದೋಷಾತೀತ, ನಿರ್ಹೇತುಕ ಆದ ಗಾಢಪ್ರೇಮವೇ ಭಕ್ತಿ ಎನಿಸುತ್ತದೆ. ದೇವ–ಜೀವರುಗಳಲ್ಲಿನ ಆಕರ್ಷಣೆ, ಎಳೆತ, ಸೆಳೆತಗಳು ಪರಮ ಪ್ರೇಮರೂಪವನ್ನು ತಳೆದಾಗ ಅದು ಭಕ್ತಿಯಾಗುತ್ತದೆ. ಅಂದರೆ ಭಗವಂತನ ಕರುಣೆ ಮತ್ತು ಭಕ್ತನ ಭಕ್ತಿ ಇವುಗಳ

ಮೂಲಕವೇ ದೇವಜೀವರು ಒಬ್ಬರನ್ನೊಬ್ಬರು ಸಾರಿ-ಸೇರಬಹುದು, ಅರಿತು-ಬೆರೆಯ ಬಹುದು.

ಭಕ್ತಿಯ ಬಗ್ಗೆ ಪರಾಶರ, ವ್ಯಾಸ, ನಾರದ, ಶಾಂಡಿಲ್ಯ, ಗರ್ಗ, ಭಾಸ್ಕರ, ಶಂಕರ, ರಾಮಾನುಜ, ಮಧ್ವ, ವೇದಾಂತ ದೇಶಿಕ, ವಲ್ಲಭ ಮುಂತಾದವರು ವ್ಯಾಖ್ಯಾನ ಮಾಡಿದ್ದಾರೆ. ಭಜ್ ಎಂಬ ಸಂಸ್ಕೃತಧಾತುವಿನಿಂದ ಬಂದಿರುವ ಭಕ್ತಿ ಎಂಬ ಪದಕ್ಕೆ ನೋಡು, ಅನುಭವಿಸು, ಸಂತೋಷಿಸು, ನಿರೀಕ್ಷಿಸು, ಕಲ್ಪಿಸು, ಸೇವಿಸು, ಪೂಜಿಸು, ಪ್ರೇಮಿಸು, ಒಪ್ಪಿಸು, ಭಾಗಿಯಾಗು ಎಂಬ ನಾನಾ ಅರ್ಥ ಗಳುಂಟು. ಇದರಲ್ಲಿ ಮುಖ್ಯವಾಗಿ ಇರಬೇಕಾದುದು ಶ್ರದ್ಧೆ, ನಿಷ್ಠೆ, ಪೂಜೆಗಳು.

ಮಾನವನಲ್ಲಿ ಮೊಟ್ಟಮೊದಲು ಧಾರ್ಮಿಕ ಭಾವನೆಗಳಿಗೆ ಎಡೆಮಾಡಿಕೊಟ್ಟದು **ಆಶ್ಚರ್ಯ** ಮತ್ತು **ಭಯ.** ಕಣ್ಣುಕುಕ್ಕುವ ಪ್ರಚಂಡ ಸೂರ್ಯ, ಪ್ರಶಾಂತನಾದ ಚಂದ್ರ, ಹೊಳೆಯುವ ಸೂರ್ಯಚಂದ್ರರ ಉದಯಾಸ್ತ, ಮಿನುಗುವ ನಕ್ಷತ್ರಗಳು ಮತ್ತು ಮಿಂಚು, ನಿರರ್ಗಳವಾಗಿ ತುಂಬಿಹರಿಯುವ ನದಿಗಳು, ನೊರೆತೊರೆಗಳಿಂದಲಂ ಕೃತವಾದ ಸಾಗರ, ಅಚಲವಾಗಿ ತಲೆಯೆತ್ತಿ ನಿಂತಿರುವ ಪರ್ವತಗಳು, ಕ್ಷಣಕ್ಷಣಕ್ಕೂ ನಾನಾಬಣ್ಣವನ್ನು ಧರಿಸುವ ಮೋಡಗಳು, ಹಲವು ಬಣ್ಣಗಳಿಂದ ಅಲ್ಪಕಾಲ ಮೆರೆದು ಮಾಯವಾಗುವ ಮನಮೋಹಕ ಕಾಮನಬಿಲ್ಲು — ಈ ನಿಸರ್ಗ ವ್ಯಾಪಾರಗಳು ಆದಿ ಶಕ್ತಿಯ ಪರಿಚಯ ಮಾಡಿಕೊಟ್ಟು ಮಾನವನನ್ನು ವಿಸ್ಮಿತನಾಗಿ ಮಾಡಿದುವು.

ಹಾಗೆಯೇ ಭಯಂಕರವಾಗಿ ಬೀಸಿ ಅನರ್ಥವನ್ನುಂಟುಮಾಡುವ ಬಿರುಗಾಳಿ, ಕರ್ಣಕಠೋರವಾಗಿ ಗದ್ದರಿಸುವ ಗುಡುಗು, ಹೃದಯವನ್ನು ಕಂಪಿಸುವ ಸಿಡಿಲು, ಕ್ರೂರಮೃಗಗಳಿಗೆ ಆಶ್ರಯವೀಯುವ ಭೀಕರಕಾಡು, ಇವು ಮಾನವನನ್ನು ಭಯ ಭೀತನನ್ನಾಗಿ ಮಾಡಿದುವು. ಅತಿಮಾನವ ಶಕ್ತಿಯುಳ್ಳ ದೇವತೆಗಳು ಅದೃಶ್ಯರಾಗಿದ್ದು, ಈ ಅಗಾಧ ಸಂರಕ್ಷಕ ಹಾಗೂ ವಿಧ್ವಂಸಕ ಕೃತ್ಯಗಳನ್ನು ಮಾಡುತ್ತಾರೆಂದು ಜನರು ಭಾವಿಸಿದರು.

ಈ ಚಂಡಮಾರುತ, ಸಿಡಿಲು, ದುಷ್ಟಪ್ರಾಣಿಗಳು, ಪ್ರವಾಹ, ರೋಗ ಮುಂತಾದ ದೈವೀಪ್ರಕೋಪಗಳಿಂದ ರಕ್ಷಣೆ ಪಡೆಯಲು, ಪಶುಪಾಲನೆ ಮತ್ತು ವ್ಯವ ಸಾಯಗಳಲ್ಲಿ ಅಭಿವೃದ್ಧಿಹೊಂದಲು, ಸುಖ ಜೀವನಕ್ಕೆ ಅವಶ್ಯಕವಾದ ವೀರ್ಯ, ತೇಜಸ್ಸು, ಬುದ್ಧಿವಂತಿಕೆಗಳನ್ನು ಪಡೆಯಲು, ಮಾನವರು ದೇವ-ದೇವತೆಗಳಿಗೆ ಪಶು ಬಲಿನೀಡಿ, ಯಜ್ಞಯಾಗಗಳನ್ನು ಮಾಡಿ, ಪ್ರಕೃತಿಮಾತೆ ಹಾಗೂ ಶಕ್ತಿಗಳನ್ನು ಸ್ತುತಿಸುತ್ತಿದ್ದರು, ಆರಾಧಿಸುತ್ತಿದ್ದರು. ಜೊತೆಗೆ ಸ್ವಾಸ್ಥ್ಯರಕ್ಷಣೆ, ನಿರ್ಭಯತೆ, ದೀರ್ಘಾಯುಸ್ಸು, ಸುಖಮಯ ವೈವಾಹಿಕ ಜೀವನ, ಶತ್ರುಗಳ ಮೇಲೆ ಜಯ,

ಸನ್ಮಾರ್ಗದರ್ಶನ–ಇವುಗಳಿಗಾಗಿಯೂ ಇವುಗಳ ಅಧಿದೇವತೆ, ಚೇತನ ಎಂದು ನಂಬಿದ್ದ ಅಗ್ನಿ, ವಾಯು, ಇಂದ್ರ, ವರುಣ, ಉಷಸ್, ಸೂರ್ಯ ಮುಂತಾದವರನ್ನು ನವವಿಧ ಭಕ್ತಿರಸದಿಂದ ಪ್ರಾರ್ಥಿಸುತ್ತಿದ್ದರು. ಕಾಲಾನಂತರದಲ್ಲಿ ಅಗ್ನಿಯ ಬದಲು ಬ್ರಹ್ಮ, ವಾಯುವಿನ ಬದಲು ರುದ್ರ, ಸೂರ್ಯನ ಬದಲು ವಿಷ್ಣು ಎಂಬೀ **ತ್ರಿಮೂರ್ತಿ**ಗಳು ಪ್ರಾಮುಖ್ಯತೆಗೆ ಬಂದರು. ಕಾಲಕ್ರಮದಲ್ಲಿ ಬ್ರಹ್ಮನಿಗೆ ಪ್ರಾಮುಖ್ಯತೆ ಹೋಗಿ, ಶಿವ, ವಿಷ್ಣು ಇಬ್ಬರೇ ಉಳಿದರು. ಈ ದೇವತೆಗಳಲ್ಲಿ ಶ್ರದ್ಧೆ, ವಿನಯ, ಪ್ರೇಮಗಳನ್ನು ತೋರಿಸಿ, ಆ ಮೂಲಕ ಅವರ ಗೌರವಾನ್ವಿತ ಮಿತ್ರ ಮತ್ತು ಉತ್ತಮ ಭಕ್ತ ಆಗಿದ್ದರು.

ತನಗೆ ಕಾಣದ ಜಗತ್ತಿನ ಅತ್ಯುಚ್ಚ ಶಕ್ತಿಯೊಂದಕ್ಕೆ ಮಣಿಯುವ ವಿನಯದ ಒಂದು ರೂಪವೇ ಆರಾಧನೆ. ಅಂದರೆ ಪ್ರಕೃತಿ ಮತ್ತು ಮಾನವ ಜೀವನದ ವಿಕಾಸದ ರಹಸ್ಯಕ್ಕೆ ಮಾನವನು ಸಲ್ಲಿಸುವ ಕೃತಜ್ಞತಾಭಾವನೆ ಮತ್ತು ಸೂಚಿಸುವ ಗೌರವಾರ್ಪಣೆಯು ಆರಾಧನೆ ಎನಿಸುತ್ತದೆ. ಆರಾಧನೆಯ ಕ್ರಿಯೆಯೇ ಪೂಜೆಯಾಗುತ್ತದೆ. ಹೀಗೆ ದೈವೀ ಶಕ್ತಿಯನ್ನು ಪ್ರೀತಿಯಿಂದ ತಮ್ಮ ಪರವಾಗಿ ಒಲಿಸಿಕೊಂಡು ಕಷ್ಟ ಪರಿಹಾರ ಮಾಡಿಕೊಳ್ಳಲು ಹಾಗೂ ಸುಖಸಮೃದ್ಧ ಸುಗಮ ಜೀವನವನ್ನು ಪಡೆಯಲು, ಮಾನವರು ಅನೇಕ ಪೂಜಾ ವಿಧಾನಗಳನ್ನು ರೂಪಿಸಿಕೊಂಡು ಆಚರಿಸ ತೊಡಗಿದರು. ಮೊದಲು ದೇವರನ್ನು ಮನುಷ್ಯ, ಪ್ರಾಣಿ, ಸಸ್ಯ, ಭೂಮಿ, ಶಿಲೆ ಈ ರೂಪದಲ್ಲಿ ಕಲ್ಪಿಸಿ ಪೂಜಿಸಲಾಗುತ್ತಿದ್ದಿತು. ಜೊತೆಗೆ ಸೃಷ್ಟಿ, ಸ್ತ್ರೀ, ಶಕ್ತಿಗಳ ಪೂಜೆಯೂ ಇದ್ದಿತು ಹೀಗೆ ಕೆಲವು ಕಾಲ ವಿವಿಧ ಲೋಕಗಳಲ್ಲಿನ ಸಾವಿರಾರು ಸ್ತ್ರೀ–ಪುರುಷ ದೇವತೆಗಳ ಪೂಜೆಯನ್ನು ಮಾಡುತ್ತಿದ್ದು, ಕಾಲಕ್ರಮದಲ್ಲಿ ಅವರೆಲ್ಲ ಒಬ್ಬನೇ ಪರಮಾತ್ಮನ ಪ್ರತಿನಿಧಿಶಕ್ತಿ ವಿಶೇಷವಾದ ಹಲವು ರೂಪಗಳು ಎಂಬ ಭಾವನೆಯು ಉದಯಿಸಿದುದರ ಫಲವಾಗಿ **ಏಕದೇವೋಪಾಸನೆ** ಹುಟ್ಟಿಕೊಂಡಿತು.

ವಿಷ್ಣುಭಕ್ತಿಯು ವೇದ, ಉಪನಿಷತ್ತು, ಆಗಮ, ಪುರಾಣ, ರಾಮಾಯಣ, ಮಹಾಭಾರತ, ದಿವ್ಯ ಪ್ರಬಂಧಗಳಲ್ಲೆಲ್ಲ ನಿರೂಪಿಸಲ್ಪಟ್ಟಿರುತ್ತದೆ.

ದೇವ ಮಾನವರಲ್ಲಿ ಪರಸ್ಪರ ಮಧುರ ಸಂಬಂಧವನ್ನು ಸ್ಥಾಪಿಸುವ ಸಲುವಾಗಿಯೇ **ವೇದಗಳು** ಹುಟ್ಟಿಕೊಂಡುವು. ವೇದಗಳ ಸೂಕ್ತಿಗಳು ಹಾಗೂ ಋಕ್ಕುಗಳು ದೇವ ಪೂಜೆಯಲ್ಲಿರಬೇಕಾದ ಶ್ರದ್ಧಾಭಕ್ತಿಗಳಿಂದ ತುಂಬಿವೆ. ಜ್ಞಾನ ಪ್ರಧಾನವಾದ ಋಗ್ವೇದ, ಕರ್ಮ ಪ್ರಧಾನವಾದ ಯಜುರ್ವೇದ, ಭಕ್ತಿ ಪ್ರಧಾನವಾದ ಸಾಮವೇದ, ವಿಜ್ಞಾನ ಪ್ರಧಾನವಾದ ಅಥರ್ವವೇದ–ಇವೆಲ್ಲ ಸರ್ವೋತ್ತಮನಾದ ವಿಷ್ಣುವಿನ ಅಂಶಗಳಾದ ವಿವಿಧ ದೈವೀಶಕ್ತಿಗಳ ಸಾಮೂಹಿಕ ಪ್ರಾರ್ಥನೆಯ ಸಲುವಾಗಿ ಹುಟ್ಟಿದುವು.

ಯಜ್ಞಯಾಗಗಳನ್ನು ಮಾಡಿ, ಅಗ್ನಿಯ ಮೂಲಕ ಬಲಿ, ಆಹುತಿಗಳನ್ನು ಕೊಟ್ಟರೂ, ಮಾನವರಿಗೆ ಸುಖ, ಶಾಂತಿ, ಆನಂದ, ತೃಪ್ತಿಗಳು ಸಿಗಲಿಲ್ಲ. ವೇದಗಳ

ಅಂತ್ಯದಲ್ಲಿನ **ಉಪನಿಷತ್ತು**ಗಳಲ್ಲಿ ಸೂಚಿಸಿದ ಆತ್ಮಸ್ವರೂಪದ ದರ್ಶನಾನುಭವಗಳಿಂದ ಸಿಗುವ ಆನಂದವೇ ಮುಖ್ಯವೆಂದು ತಿಳಿಯಿತು. ವ್ಯಕ್ತ–ಅವ್ಯಕ್ತ, ಪಿಂಡಾಂಡ-ಬ್ರಹ್ಮಾಂಡಗಳೆರಡರಲ್ಲಿಯೂ ಇರುವ ಏಕೈಕ ಪರಮಾತ್ಮನ ಬೇರೆಬೇರೆ ಸ್ವರೂಪ-ಸ್ವಭಾವಗಳ ಪರಿಚಯ ಮಾಡಿಕೊಡುವುದೇ ಉಪನಿಷತ್ತು ಅಥವಾ ವೇದಾಂತದ ವಿಷಯವಾಗಿದೆ. ರಹಸ್ಯವಾದ ಈ ಬ್ರಹ್ಮಜ್ಞಾನವನ್ನು ನೀಡುವ ಉಪನಿಷತ್ತುಗಳು, ವಿಷ್ಣುಭಕ್ತಿಯ ಪ್ರಮುಖ ಸಾಧನವೆಂದು ತಿಳಿದ ಋಷಿಗಳು, ತಪಸ್ಸು ಮಾಡಿ ಅದರ ಮೂಲಕ ಇಡೀ ವಿಶ್ವವನ್ನು ಆಕ್ರಮಿಸಿರುವ ಬ್ರಹ್ಮನನ್ನು ಸಾಕ್ಷಾತ್ಕಾರಮಾಡಿಕೊಂಡರು. ಅದೇ ಬ್ರಹ್ಮವು ತಮ್ಮ ಮನಸ್ಸಿನಲ್ಲಿ ಆತ್ಮನೆಂಬ ಹೆಸರಿನಿಂದ ಪ್ರಕಾಶಿಸುತ್ತಿದೆ ಎಂಬುದನ್ನೂ ಕಂಡುಕೊಂಡು, ದೇಹದೊಳಗೇ ಇರುವ ಅಂತರ್ಯಾಮಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಯತ್ನವನ್ನು ನಡೆಸಿದರು. ಜ್ಞಾನದ ಮೂಲಕ ಕರ್ಮದ ವ್ಯಾಖ್ಯೆನಡೆದು, ಭಕ್ತಿಗೆ ಪ್ರಾಮುಖ್ಯತೆ ಬಂದಿತು.

ಊಹೆ, ಕಲ್ಪನೆಗಳಿಲ್ಲದೆ ಸ್ವಾನುಭವದಿಂದ ಮನಗಂಡ, ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿಸಿದ ಶ್ರೇಷ್ಠತಮ ಭಾವನೆಗಳು ಇರುವ ಉಪನಿಷತ್ತುಗಳನ್ನು ತಿಳಿದುಕೊಳ್ಳುವುದು ಬಹು ಕಠಿಣವಾದ ಕಾರ್ಯ. ಕಠಿಣವಾದ ಉಪನಿಷತ್ತುಗಳನ್ನು ಸಾಮಾನ್ಯ ಜನರೂ ಅರಿತು ಅದರಲ್ಲಿನ ಸಾಕ್ಷಾತ್ಕಾರವನ್ನು ಪಡೆಯಲೆಂಬ ಘನ ಉದ್ದೇಶದಿಂದ **ಪುರಾಣಗಳು** ಹುಟ್ಟಿದುವು. ಇವುಗಳಿಂದ ಭಕ್ತಿಯ ವಿಕಾಸವು ಇನ್ನೂ ಹೆಚ್ಚಿತು. ಧರ್ಮಾನುಕೂಲವಾದ ಕಾಮ, ಸ್ವಾರ್ಥರಹಿತ ಅರ್ಥೋಪಾರ್ಜನ, ತ್ಯಾಗೋನ್ಮುಖ ಭೋಗಾನುಭೋಗ ಇವುಗಳನ್ನು ತಿಳಿಸುವುದರ ಮೂಲಕ ಇವು ಮಾನವರಿಗೆ ಪುರುಷಾರ್ಥಗಳನ್ನು ಒದಗಿಸಿವೆ. ಮಾನವ ಜೀವನದ ಪರಿಪೂರ್ಣತೆಯ ಸಿದ್ಧಿಗಾಗಿ ಅತ್ಯಾವಶ್ಯಕವಾದ ಅಂತಃಕರಣ ಶುದ್ಧಿಯು ಆಗುವ ಉಪಾಯ, ಜೀವನವನ್ನು ಸರ್ವಾಂಗ ಸುಂದರವನ್ನಾಗಿಮಾಡಿ ಜೀವಿಗಳಲ್ಲೆಲ್ಲ ದೈವೀಗುಣಗಳ ವಿಕಾಸ ಆಗುವ ಉಪಾಯ–ಇವುಗಳಲ್ಲಿ ಇವೆ. ಒಟ್ಟಿನಲ್ಲಿ ಕಥೆಗಳ ಮೂಲಕ ಜನಸಾಮಾನ್ಯರಲ್ಲಿ ಸಮಸ್ತ ಜ್ಞಾನ ರಾಶಿಯನ್ನು ವಿತರಣೆಮಾಡಿ, ಅವರಲ್ಲಿ ದೈವಭಕ್ತಿಯನ್ನು ಹೆಚ್ಚಿಸಿ, ಅವರನ್ನು ಸುಸಂಸ್ಕೃತರನ್ನಾಗಿ ಮಾಡುವುದೇ ಈ ಪುರಾಣಗಳ ಮುಖ್ಯೋದ್ದೇಶ ಎನ್ನಬಹುದು.

ಭಕ್ತಿಗೆ **ಭಾಗವತ** ಪುರಾಣವು ಬಹು ಮುಖ್ಯವಾದ ಗ್ರಂಥ. ವೇದಗಳನ್ನು ವ್ಯವಸ್ಥೆಗೊಳಿಸಿ, ಮಹಾಭಾರತವನ್ನು ರಚಿಸಿದ ವ್ಯಾಸರಿಗೆ ಶಾಂತಿ ಸಿಗದಿದ್ದಾಗ, ನಾರದರ ಸೂಚನೆಯಂತೆ ಭಾಗವತವನ್ನು ಬರೆದರು. ತ್ರಿಮೂರ್ತಿಗಳಲ್ಲಿ ಮುಖ್ಯನಾದ ವಿಷ್ಣುವು ಶ್ರೀಕೃಷ್ಣನಾಗಿ ಅವತರಿಸಿದುದು ಹಾಗೂ ಭಕ್ತಿವಿರಕ್ತಿಗಳಿಗೆ ಪ್ರಾಮುಖ್ಯತೆ ಬಂದುದು, ಇದರ ವಿಷಯವಾಗಿದೆ. ದೇವರನ್ನು ಮಗು, ಮಗ, ಪ್ರಿಯಕರ, ಮಿತ್ರ, ನಾಯಕ, ಮಾರ್ಗದರ್ಶಕ, ಸ್ವಾಮಿ, ಸಹಾಯಕ ಮುಂತಾದ ವಿವಿಧ ಭಾವಗಳಲ್ಲಿ

ಧ್ಯಾನಿಸಿರುವುದೇ ಕೃಷ್ಣಾವತಾರದ ಮಹಿಮೆ. ಕಲಿಯುಗದಲ್ಲಿ ದಕ್ಷಿಣ ಭಾರತದ ನದಿಗಳ ಬಳಿಯಲ್ಲಿ ಅನೇಕ ಜನರು ಶ್ರೀಮನ್ನಾರಾಯಣನ ಭಕ್ತರಾಗುವರೆಂದು ಈ ಪುರಾಣದಲ್ಲಿ ಸೂಚಿಸಿದೆ.

ದೇವರ ಅವತಾರಗಳ ಪೂಜೆಯನ್ನು ವ್ಯವಸ್ಥಿತವಾಗಿ ಮಾಡಿ ಕೃತಾರ್ಥರಾಗಲೆಂಬ ಘನ ಉದ್ದೇಶದಿಂದ ಪಾಂಚರಾತ್ರ, ವೈಖಾನಸ ಎಂಬ ಎರಡು ವೈಷ್ಣವ **ಆಗಮ**ಗಳು ಹುಟ್ಟಿದವು. ಸಾವಿರಾರು ಋಷಿಗಳು ಸೇರಿ, ಕ್ಷೀರಸಾಗರದಲ್ಲಿ ಶೇಷಶಾಯಿಯಾದ ವಿಷ್ಣು ಅಥವಾ ನಾರಾಯಣನ ಆರಾಧನ ಕ್ರಮವನ್ನು ತಿಳಿದುಕೊಳ್ಳಲೆಂಬ ಉದ್ದೇಶದಿಂದ, ಆಗಮ ಸಂಹಿತೆಗಳನ್ನು ರಚಿಸಿದರು. ಪರಮಾತ್ಮನ ಪಂಚರೂಪ, ಅರ್ಥಪಂಚಕ, ವೈಷ್ಣವರ ಪಂಚಕಾಲದಕರ್ಮ, ಇವೆಲ್ಲ ಇದರಲ್ಲಿ ವಿವರಿಸಲ್ಪಟ್ಟಿವೆ. ವೇದಾಧಿಕಾರವಿಲ್ಲದ ಹೆಂಗಸರು, ಶೂದ್ರರು, ಮೋಕ್ಷವನ್ನು ಹೊಂದಲು ಅನುಕೂಲವಾಗುವಂತೆ, ಪೂಜೆಗಾಗಿ ದೇವಾಲಯಗಳು ನಿರ್ಮಿಸಲ್ಪಟ್ಟು, ಸಾರ್ವಜನಿಕ ಹಬ್ಬ ಉತ್ಸವಗಳು ಆಚರಣೆಗೆ ಬಂದವು. ಭಗವಚ್ಛಾಸ್ತ್ರವೆನಿಸಿದ ಆಗಮಗಳೂ ಪರಮ ಪ್ರಮಾಣವೆಂಬುದು ಆಚಾರ್ಯ ಯಾಮುನ, ರಾಮಾನುಜ ಹಾಗೂ ವೇದಾಂತ ದೇಶಿಕರ ಅಭಿಪ್ರಾಯ.

ಭಗವಂತನು ಧರ್ಮರಕ್ಷಕ, ಆಶ್ರಿತ ರಕ್ಷಕ ಎಂದು ತೋರಿಸಿದ ಲೀಲೆಯೇ **ರಾಮಾಯಣ**ದ ಕಥಾವಸ್ತು. ಧರ್ಮಾಧರ್ಮಗಳ ಹೋರಾಟದಲ್ಲಿ ಅಂತ್ಯ ಜಯವು ಧರ್ಮಕ್ಕೇ ಮೀಸಲು ಎಂಬುದನ್ನು ಸೂಚಿಸುವುದು **ಮಹಾಭಾರತ.** ಈ ಎರಡೂ ಮಹಾಕಾವ್ಯಗಳ ಮುಖ್ಯ ಗುರಿ, ಜನರು ಧರ್ಮಮಾರ್ಗದಲ್ಲಿ ಹೋಗಲು ಅಗಾಧ ನೆರವು ನೀಡುವುದು.

ಮಹಾಭಾರತದಲ್ಲಿ ಅಂತರ್ಗತವಾಗಿರುವ **ಭಗವದ್ಗೀತೆ**ಯಲ್ಲಿ ಇರುವ ನಾಲ್ಕು ಯೋಗ ಸಾಧನಗಳಲ್ಲಿ ಭಕ್ತಿಗೇ ಹೆಚ್ಚಿನ ಪ್ರಾಮುಖ್ಯ ಇದೆ. ಅಹಂಭಾವದ ನಾಶ, ಎಲ್ಲದರಲ್ಲಿಯೂ ಭಗವಂತನ ಅಂತರ್ಯಾಮಿತ್ವದ ಪ್ರತಿಪಾದನೆ, ಧರ್ಮಪರಾಯಣತಾ ದೃಷ್ಟಿಯನ್ನು ಹೊಂದಿರುವ ಆವಶ್ಯಕತೆ, ವೈವಿಧ್ಯತೆಯಲ್ಲಿ ಏಕತೆಯ ಸ್ಥಾಪನೆ—ಎಂಬೀ ವೈಷ್ಣವ ಭಕ್ತಿಯ ಸಮನ್ವಯಾತ್ಮಕ ಸಿದ್ಧಾಂತಗಳ ಸಾರಸಂಗ್ರಹವು ಗೀತೆಯಲ್ಲಿ ಮುಖ್ಯವಾದ ವಿಷಯ. ಇದರ ಮೂಲಕ ಜ್ಞಾನಾಂಧರಾದ ನಮಗೆಲ್ಲರಿಗೂ, ನಮ್ಮೊಳಗೆ ನಡೆಯುತ್ತಿರುವ ಆಸುರೀ ಮತ್ತು ದೈವೀ ವೃತ್ತಿಗಳ ಸಂಘರ್ಷವನ್ನು, ನಮ್ಮ ಆಂತರಿಕ ಜ್ಞಾನಕ್ಕೆ ಗೋಚರಿಸುವಂತೆ ಮಾಡಿ, ಈ ಕಲಹದಲ್ಲಿ ದೈವೀ ಪ್ರವೃತ್ತಿಗಳೇ ಜಯಗಳಿಸುವ ಸಲುವಾಗಿ, ಮಾನವರು ಮಾಡಬೇಕಾದ ಯೋಗ ಸಾಧನಗಳನ್ನು ತಿಳಿಸಲಾಗಿದೆ.

ತಪಸ್ಸು, ತೀರ್ಥ—ಕ್ಷೇತ್ರಯಾತ್ರೆ, ದಾನ, ಧರ್ಮ ಮುಂತಾದ ಒಳ್ಳೆಯ ಕೆಲಸಗಳನ್ನು ಪ್ರತಿಫಲದ ಆಸೆಯಿಲ್ಲದೆ, ದೇವರ ಪೂಜೆಯೆಂದೇ ಮಾಡುವುದು, ಹಾಗೂ ಆ

ಮೂಲಕ ಮನಸ್ಸನ್ನು ಪವಿತ್ರಗೊಳಿಸುವುದು ಕರ್ಮಯೋಗ; ಪರಮಾತ್ಮನ ಚಿಂತನೆಯೊಂದಿಗೆ ಇಂದ್ರಿಯನಿಗ್ರಹಮಾಡಿ, ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸುವುದು ರಾಜಯೋಗ; ಜಿತೇಂದ್ರಿಯನಾಗಿ ಜೀವಾತ್ಮ–ಪರಮಾತ್ಮರ ಯಥಾರ್ಥ ಸ್ವರೂಪ, ರೂಪ, ಗುಣಗಳೆಲ್ಲದರ ಅಧ್ಯಯನ–ಅನುಸಂಧಾನಗಳೇ ಜ್ಞಾನಯೋಗ; ಅವುಗಳ ನಿರಂತರ ಚಿಂತನ, ಮನನ, ಧ್ಯಾನಗಳೇ ಧ್ಯಾನಯೋಗ; ನಿರಂತರವಾದ ಚಿಂತನದ ಫಲವಾಗಿ ಪರಮಾತ್ಮನಾದ ನಾರಾಯಣನಲ್ಲಿ ಅತ್ಯಂತ ಪ್ರೀತಿಯನ್ನಿಟ್ಟು ಎಡಬಿಡದೆ ನಮಸ್ಕರಿಸಿ, ಪೂಜಿಸಿ, ಧ್ಯಾನಿಸುವುದೇ ಭಕ್ತಿಯೋಗ; ಭಕ್ತಿಯು ಹೆಚ್ಚು ಹೆಚ್ಚಾಗಿ ಬೆಳೆದು, ಅಹಂಕಾರ–ಮಮಕಾರಗಳಿಲ್ಲದೆ ಭಗವಂತನಲ್ಲಿ ತನ್ನನ್ನು ಪೂರ್ಣ ನಂಬಿಕೆಯಿಂದ, ಪೂರ್ತಿಯಾಗಿ ಒಪ್ಪಿಸುವುದು ಪ್ರಪತ್ತಿಯೋಗ. ಹೀಗೆ ಸರ್ವದೇಶ, ಸರ್ವಕಾಲ, ಸರ್ವಅವಸ್ಥೆಗಳಲ್ಲಿರುವ ಸಮಸ್ತ ಮಾನವರಿಗೂ ಭಗವಂತನು ನೀಡಿರುವ ಉಪದೇಶವು ಗೀತೆಯಲ್ಲಿ ಅಡಗಿರುವುದರಿಂದ ಇದು ಎಲ್ಲ ಆಚಾರ್ಯರು, ಭಕ್ತರು ಹಾಗೂ ರಾಷ್ಟ್ರನಾಯಕರಿಗೆ ಸ್ಫೂರ್ತಿದಾಯಕವಾಗಿದೆ.

ಭಕ್ತಿಯ ಮೂಲಗಳಲ್ಲಿ ಕೆಲವು ಪ್ರಾಚೀನ ತಮಿಳು ಸಾಹಿತ್ಯದಲ್ಲಿಯೂ ಕಾಣಬರುತ್ತದೆ. ಭಕ್ತಿಯು ದ್ರಾವಿಡದೇಶ ಅಥವಾ ತಮಿಳು ನಾಡಿನಲ್ಲಿ ಹುಟ್ಟಿ, ಉತ್ತರ ಭಾರತಕ್ಕೆ ಹರಡಿತೆಂದು ಭಾಗವತ ಪುರಾಣವು ಹೇಳುತ್ತದೆ. ಭಕ್ತರಲ್ಲಿ ಮೊದಲಿಗರಾದ ಆಳ್ವಾರರು ತಮಿಳಿನಲ್ಲಿ ರಚಿಸಿದ ನಾಲ್ಕುಸಾವಿರ ಪದ್ಯಗಳು **ನಾಲಾಯಿರ ದಿವ್ಯಪ್ರಬಂಧ**ವೆನಿಸಿ, ಶ್ರೀವೈಷ್ಣವರಿಗೆ ಪರಮ ಪ್ರಮಾಣವಾದ ಪೂಜ್ಯ ಗ್ರಂಥವಾಗಿದೆ. ಸಂಪತ್ತು, ಸ್ತ್ರೀ ಸುಖ, ರಾಜಮರ್ಯಾದೆ, ಸ್ವರ್ಗಸುಖ, ಇವೆಲ್ಲವೂ ಭಗವಂತನ ಸಾನ್ನಿಧ್ಯದ ಮುಂದೆ ಹುಲ್ಲಿನಂತೆ ಬೆಲೆಯಿಲ್ಲದ್ದು, ಪ್ರೀತಿಯೇ ಸರ್ವೋತ್ತಮವಾದ ಮಾರ್ಗ ಎಂಬುದೇ ಇದರ ಸಾರ. ಪರಮಾತ್ಮನೊಂದಿಗೆ ನಿಕಟ ಸಂಬಂಧವನ್ನು ಕಲ್ಪಿಸಿಕೊಳ್ಳಲು ಮಾನವನು ಯತ್ನಿಸಿದ ಕೂಗು ಈ ಪ್ರಬಂಧದಲ್ಲಿದೆ. ಇದನ್ನು ತಮಿಳು ವೇದವೆಂದು ಕರೆದು ಗೌರವಿಸಲಾಗಿದೆ.

ವೇದೋಪನಿಷತ್ತುಗಳ ಆಧಾರದಿಂದ ಹಾಗೂ ಅವುಗಳ ಪ್ರೇರಣೆಯಿಂದ ಬರೆಯಲಾದ ಪಾಂಚರಾತ್ರಾಗಮವು ಭಾಗವತೋಕ್ತ ಭಕ್ತಿಮಾರ್ಗಕ್ಕೆ ಮುಖ್ಯ ಆಧಾರ. ಈ ಪಾಂಚರಾತ್ರಾಗಮದಲ್ಲಿ ಹೇಳಲಾದ ತತ್ತ್ವಗಳನ್ನು ಸೂತ್ರರೂಪದಲ್ಲಿ ಸಂಕ್ಷೇಪವಾಗಿ ನಾರದ ಮತ್ತು ಶಾಂಡಿಲ್ಯರು ಸಂಗ್ರಹಿಸಿದ **ನಾರದ–ಶಾಂಡಿಲ್ಯರ ಭಕ್ತಿ ಸೂತ್ರಗಳು** ಭಕ್ತಿಮಾರ್ಗಕ್ಕೆ ಬಹಳ ಮುಖ್ಯ ಹಾಗೂ ಮಹತ್ವದ್ದು ಆಗಿವೆ. ಏಕೆಂದರೆ ಭಕ್ತಿಯೆಂಬ ಅಮೃತವನ್ನು ಆಸ್ವಾದಿಸಿ, ಅದರಿಂದುಂಟಾದ ಅನುಭವದ ಆಳದಿಂದ ಬಂದ ಭಾವಗಳು ಇಲ್ಲಿವೆ.

ಪಾಂಚರಾತ್ರ, ಏಕಾಂತಿಕ, ಸಾತ್ವತ ಎನಿಸಿದ ಬಹು ಪ್ರಾಚೀನವಾದ ಭಾಗವತ ಪಂಥಕ್ಕೆ ಒಂದು ವಿಶೇಷವಾದ ರೂಪವನ್ನು ಕೊಟ್ಟು, ಅದನ್ನು ಒಂದು ವಿಶಿಷ್ಟ

ಮಾರ್ಗದಲ್ಲಿ ಒಯ್ಯುವ ಕಾರ್ಯವನ್ನು ಮಾಡಿದವನು ಯಾದವ, ವೃಷ್ಣಿ, ಸಾತ್ವತ ಎಂಬ ಬುಡಕಟ್ಟಿಗೆ ಸೇರಿದ ಕ್ಷತ್ರಿಯ ವೀರನಾದ ವಾಸುದೇವ ಅಥವಾ ಶ್ರೀಕೃಷ್ಣ. ಯಾವರೀತಿಯ ನೀಚಗುಣಗಳಿಲ್ಲದ, ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು, ವಾತ್ಸಲ್ಯ, ಸೌಶೀಲ್ಯ, ಸೌಲಭ್ಯ ಮುಂತಾದ ಸದ್ಗುಣಗಳ ಪ್ರತೀಕವಾದ **ಭಗವತ್** ಅಥವಾ ಭಗವಾನ್ ಎಂಬ ಹೆಸರಿನ ದೇವತೆಗೇ ತಮ್ಮ ಪೂಜೆಯೆಲ್ಲವೂ ಸಲ್ಲಬೇಕೆಂದು ಪ್ರತಿಪಾದಿಸಿದುದರಿಂದ ಇದಕ್ಕೆ **ಭಾಗವತಮತ**ವೆಂದೂ, ಇದರ ಅನು ಯಾಯಿಗಳಿಗೆ **ಭಾಗವತ**ರೆಂದೂ ಹೆಸರು ಬಂದಿತು. ಮುಖ್ಯವಾಗಿ ಭಕ್ತಿ, ಭಕ್ತ ಅಥವಾ ಭಾಗವತ, ಮತ್ತು ಭಗವಾನ್ ಇವು ಮೂರೂ ಭಕ್ತಿಮಾರ್ಗದಲ್ಲಿನ 'ತ್ರಿಪುಟಿ' ಎಂದು ಹೇಳಬಹುದು.

ವಿಷ್ಣುವು ಶುಭದಾಯಕ, ಕಾರುಣ್ಯದಾಯಕ ಆಗಿದ್ದು, ಅವನು ಭಗವಂತನಿಗಿಂತ ಬೇರೆಯಲ್ಲ, ಅವನೇ ಪರದೈವ, ಎಂದು ಭಾಗವತರು ನಂಬಿದುದರಿಂದ, ವಿಷ್ಣುವಿನ ಮೇಲಿರುವ ಅನನ್ಯ ಭಕ್ತಿಯು ಭಾಗವತ ಧರ್ಮದ ಮೂಲವಾಗಿ ಅದು **ವೈಷ್ಣವ ಮತ**ವೆನಿಸಿಕೊಂಡಿತು. ಇದನ್ನು ಯಾಮುನ, ರಾಮಾನುಜ, ವೇದಾಂತ ದೇಶಿಕ ಎಂಬೀ ಆಚಾರ್ಯತ್ರಯರು ಸಮರ್ಥಿಸಿದ್ದಾರೆ. ವಿಷ್ಣುವು ತ್ರಿವಿಕ್ರಮನಾದಾಗ, ದೇವತೆಗಳಲ್ಲಿ ಸರ್ವೋತ್ತಮನೆನಿಸಿದುದರಿಂದ, ಅವನ ಮೂರನೆಯ ಪಾದವು ಸ್ವರ್ಗದ ಸಂಕೇತವಾಯಿತು. ತನ್ನಲ್ಲಿ ವಿಷ್ಣುವನ್ನು ಅಂತರ್ನಿಹಿತ ನಿವಾಸಿಯಾಗಿ ಮಾಡಿಕೊಂಡ ಸೂರ್ಯನೂ ಸಹ ವಿಷ್ಣುವಿನ ಸಂಕೇತವಾದುದರಿಂದ, ವಿಷ್ಣುವಿನ ಆರಾಧನೆಯು ಸೂರ್ಯಾರಾಧನೆಯೊಂದಿಗೆ ಬೆರೆತುಹೋಗಿದೆ. ನರನ ಹೃದಯಸ್ಥನಾದ ನಾರಾಯಣನ ಕಲ್ಪನೆ ಬಂದಾಗ ಅವನಲ್ಲಿ ವಾಸುದೇವ ಶ್ರೀಕೃಷ್ಣರೂ ಬೆರೆತುಹೋದರು.

'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರದ ತತ್ತ್ವ, ಪಂಚವ್ಯೂಹ, ಅರ್ಥಪಂಚಕ, ಪಂಚಕಾಲದ ಕರ್ತವ್ಯ, ಇವುಗಳ ಅರಿವು— ಅನುಷ್ಠಾನಗಳ ಮೂಲಕ ಭಗವಂತನಾದ ನಾರಾಯಣನ ಕೈಂಕರ್ಯದಲ್ಲಿ ನಿರತರಾದ ವರೇ **ಭಾಗವತ**ರು. ಪಂಚಸಂಸ್ಕಾರ ಹೊಂದಿ, ಪಾಂಚರಾತ್ರಾಗಮ ವಿಧಾನದಿಂದ ವಾಸುದೇವನನ್ನು ಪೂಜಿಸುವವನು ಮಹಾಭಾಗವತ ವೈಷ್ಣವನೆನಿಸುತ್ತಾನೆ. ಈ ಭಾಗವತ ಧರ್ಮವನ್ನು ವಿಪ್ರ, ದ್ವಿಜ ಅಲ್ಲದವರೂ ಅನುಸರಿಸುವ ಅಧಿಕಾರ ಉಂಟು.

ಪ್ರಶಾಂತಚಿತ್ತ, ಸದ್ಗುಣ ಪಕ್ಷಪಾತಿ, ಕೋಮಲ ಭಾವನೆಯುಳ್ಳವ, ಪವಿತ್ರ ಬಾಳುವೆ ಮಾಡುವವ, ಮನೋವಾಕ್ಕಾಯಗಳಲ್ಲಿ ವೈರಬಗೆಯದವ, ಹಿಂಸೆ ಕಳವು ಸುಲಿಗೆಗಳನ್ನು ಮಾಡದವ, ಬಡವರಲ್ಲಿ ಕನಿಕರದಿಂದ ಕರಗಿದ ಮನಸ್ಸುಳ್ಳವ, ಪರಹಿತ ಕಾರ್ಯಗಳಲ್ಲಿ ಇಷ್ಟವುಳ್ಳವ, ಈರ್ಷ್ಯೆ ಇಲ್ಲದವ, ಪರರ ದೋಷಗಳನ್ನು ಎಣಿಸದವ, ಸವಿನುಡಿ ನುಡಿಯುವವ, ಸದಾಚಾರಿಯಾಗಿರುವವ, ಅಪೇಕ್ಷೆಯೇ ಇಲ್ಲದವ, ತನ್ನದು

—ಪರರದು ಎಂಬ ಭೇದವನ್ನೆಣಿಸದ ಸಮದರ್ಶಿತ್ವವುಳ್ಳವ, ಎಲ್ಲ ಪ್ರಾಣಿಗಳಲ್ಲಿಯೂ ಭಗವಂತನನ್ನು ದರ್ಶಿಸುವವ — ಅಂಥವನೇ **ಪರಮಭಾಗವತ** ಎನಿಸಿಕೊಳ್ಳಲು ಅರ್ಹನಾಗುತ್ತಾನೆ.

ಪ್ರಹ್ಲಾದ ನಾರದ ಪರಾಶರ ಪುಂಡರೀಕ ।
ವ್ಯಾಸಾಂಬರೀಷ ಶುಕ ಶೌನಕ ಭೀಷ್ಮ ದಾಲ್ಭ್ಯಾನ್ ॥
ರುಕ್ಮಾಂಗದಾರ್ಜುನ ವಸಿಷ್ಠ ವಿಭೀಷಣಾದೀನ್ ।
ಪುಣ್ಯಾನಿಮಾನ್ ಪರಮಭಾಗವತಾನ್ ಸ್ಮರಾಮಿ ॥

ಎಂದು ಶ್ರೀವೈಷ್ಣವರು ಈ ಜನರನ್ನು ನಿತ್ಯವೂ ಸ್ಮರಿಸುತ್ತಾರೆ.

ಭಕ್ತಿಯಿಂದ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರದ ಚಿಂತನೆಯಲ್ಲೇ ಕಾಲವನ್ನು ಕಳೆಯುತ್ತ, ಮೋಕ್ಷದ ಹೊರತು ಬೇರಾವ ಫಲಾಪೇಕ್ಷೆಯೂ ಇಲ್ಲದ, ಈ ಭಾಗವತ ಮತದ ಜನರಿಗೆ ಗೋತ್ರ ಪ್ರವರಗಳಿಲ್ಲ, ಸೂತಕ ಆಶೌಚಗಳ ಸೋಂಕಿಲ್ಲ. ಅವರ ದೃಷ್ಟಿಯಲ್ಲಿ ಭಗವಂತನಿಂದ ಸೃಷ್ಟಿಸಲ್ಪಟ್ಟ ನಾಲ್ಕು ವರ್ಣಗಳ ಜನರೂ ಸಮಾನರು. ಜಾತಿ, ಕುಲ, ವಯಸ್ಸು, ಅಂತಸ್ತು, ರೂಪ, ವಿದ್ಯೆ, ಗುಣ, ಹಣ ಇವಾವುದೂ ಭಕ್ತಿಯ ಮುಂದೆ ಗಣನೆಗೆ ಬರಲಾರದು. ಏಕೆಂದರೆ ಭಕ್ತಿಗೆ ಎಲ್ಲರೂ ಅಧಿಕಾರಿಗಳು. ಭಗವದ್ಭಕ್ತಿಯು ಕುಲ ಮತ್ತು ಸಂಪತ್ತು ತಂದುಕೊಟ್ಟು, ಮುಕ್ತಿಗೆ ದಾರಿಯನ್ನು ತೋರಿಸುವ ಸಾಧನ ಎಂಬುದು ಭಾಗವತ ಮತದ ಮುಖ್ಯ ತತ್ತ್ವ.

ಮುಖ್ಯವಾಗಿ ಸಮಾಜ ಜೀವನದ ಡಂಭಾಚಾರ-ದುರಾಚಾರಗಳನ್ನೂ, ಮತೀಯ ಜೀವನದಲ್ಲಿ ಮೂಡಿದ್ದ ಧರ್ಮಚ್ಯುತಿ-ನೈತಿಕ ಕ್ಷಿಣತೆಗಳನ್ನೂ ತೊಡೆದುಹಾಕಿ, ಶುದ್ಧಿ ಪಡಿಸಲು ಬಂದ ಒಂದು ಸುಧಾರಣಾ ಚಳುವಳಿಯೇ **ಭಾಗವತ ಸಂಪ್ರದಾಯ**. ತಾರತಮ್ಯ ದೃಷ್ಟಿಯನ್ನು ಪೋಷಿಸುತ್ತ ಬಂದಿದ್ದ ವೈದಿಕ ಸಂಪ್ರದಾಯಕ್ಕೂ, ಸಮ ದರ್ಶಿತ್ವ ಹಾಗೂ ಸಮನ್ವಯದೃಷ್ಟಿಗಳನ್ನು ಬೋಧಿಸಿ ಆಚರಿಸಿದ ಭಾಗವತ ಸಂಪ್ರ ದಾಯಕ್ಕೂ, ಘರ್ಷಣೆ ಉಂಟಾಗಿ ಅನೇಕ ಧಾರ್ಮಿಕ ಬದಲಾವಣೆಗಳು ಉಂಟಾದುವು ಎಂಬುದು ಭಾರತೀಯ ಸಂತರ ಚರಿತ್ರೆಯಿಂದ ತಿಳಿದುಬರುತ್ತದೆ. ಈ ಭಾಗವತ ಸಂಪ್ರದಾಯವು ತನ್ನ ಕಾರ್ಯದಲ್ಲಿ ಫಲಪ್ರದ, ಯಶಪ್ರದ ಆಗಿ ನಡೆದು ಬರುತ್ತಿದೆ ಎಂಬುದಕ್ಕೆ, ಭಾರತದಲ್ಲಿ ಹುಟ್ಟಿ ಬಂದ ನೂರಾರು ಸಂತರು, ಭಕ್ತರು, ಕವಿಗಳು, ಆಚಾರ್ಯರು ಸಾಕ್ಷಿಯಾಗಿದ್ದಾರೆ.

ಪರಮಾತ್ಮನೇ ಸರ್ವೋತ್ತಮನೆಂಬ ವಿಷಯದಲ್ಲಿ ನಿಶ್ಚಲವಾದ ನಂಬಿಕೆ ಯುಳ್ಳವ ; ಇಷ್ಟದೇವತಾ ಪ್ರಾಪ್ತಿಗಾಗಿ ತನ್ನ ಸರ್ವಸ್ವವನ್ನೂ ತ್ಯಜಿಸಿ ಸೇವೆ

ಮಾಡಲು ಸಿದ್ಧನಾಗಿರುವವ ; ಇಷ್ಟ ದೈವವನ್ನು ಒಲಿಸಿಕೊಳ್ಳುವುದನ್ನೇ ತನ್ನ ಜೀವಿತದ ಅತಿ ಮುಖ್ಯ ಪ್ರಯೋಜನವನ್ನಾಗಿ ತಿಳಿದು ಅನನ್ಯ ಶರಣನಾಗಿರುವವ ; ತಂದೆತಾಯಿ, ಬಂಧು ಬಳಗ, ಪತ್ನೀಪುತ್ರ, ಧನಕನಕ ಮೊದಲಾದ ಪ್ರಾಪಂಚಿಕ ವ್ಯಕ್ತಿ ವಸ್ತುಗಳಿಗಿಂತ ಇಷ್ಟದೈವವೇ ಮುಖ್ಯವೆಂದು ಭಾವಿಸುವವ ; ಇಷ್ಟದೈವಕ್ಕಾಗಿ ಪ್ರಾಣವನ್ನೇ ತ್ಯಜಿಸಲು ಸಿದ್ಧನಾಗಿರುವವ , ಅಂಥವನೇ ನಿಜವಾದ **ಭಕ್ತ**ನೆನಿಸಿ ಕೊಳ್ಳಲು ಅರ್ಹನಾದವನು.

ಪರಮಾತ್ಮನನ್ನು ಮೆಚ್ಚಿ ಮೈಮರೆತು ಹುಚ್ಚನಂತಿರುವುದು, ದುಃಖತಾಪ ಗಳಿಂದ ಪೀಡಿತರಾಗಿ ಆರ್ತಭಾವದಿಂದ ದೇವರನ್ನು ಮೊರೆಹೊಗುವುದು, ತಮ್ಮ ಪಾಪಗಳ ಭೀಷಣ ಚಿತ್ರವನ್ನು ರೇಖಿಸಿ, ಗದ್ಗದ ಕಂಠದಿಂದ ದೇವನ ಕ್ಷಮೆ ಕೇಳು ವುದು, ಶಾಂತಭಾವದಿಂದ ಪರಮಾತ್ಮನ ಮಹಿಮೆಯನ್ನು ಪಾಡುವುದು, ತಾಯಿ, ತಂದೆ, ಪ್ರಿಯ, ಮಗ, ಸೇವಕ, ಸಖ ಎಂದು ಆವನನ್ನು ಸಂಬೋಧಿಸುವುದು, ಪತಿತರನ್ನು ಪರಮಾತ್ಮನು ನೋಡನು ಎಂದು ಕೆಲವು ವೇಳೆ ನಿರಾಶರಾಗುವುದು, ಭಕ್ತರನ್ನು ಸಲಹುವುದೇ ಅವನ ಕರ್ತವ್ಯವೆಂದು ಅವನಿಗೇ ಉಪದೇಶ ನೀಡುವುದು, ತನಗೇ ಏನೂ ಇಲ್ಲದವನು ನಮಗೇನು ಕೊಟ್ಟಾನು ಎಂದು ಪರಿಹಾಸಮಾಡುವುದು, ಅವನ ವಿಯೋಗದಿಂದ ಆದ ದುಃಖವನ್ನು ಬಣ್ಣಿಸುವುದು, ಆತನ ಸಂಯೋಗದಿಂದ ಆದ ಸುಖ, ಸಂತೋಷ, ಹರ್ಷಗಳನ್ನು ಧನ್ಯತೆಯಿಂದ ವರ್ಣಿಸುವುದು—ಇವೆಲ್ಲ ಶ್ರೇಷ್ಠಮಟ್ಟದ **ಭಕ್ತರ** ಅಥವಾ **ಅನುಭಾವಿ**ಗಳ ಲಕ್ಷಣ.

ಮುಖ್ಯವಾಗಿ ಸತ್ಯ, ಅಹಿಂಸೆ, ನಿಷ್ಠೆ, ಧೈರ್ಯ, ಸ್ಥೈರ್ಯ, ತಾಳ್ಮೆ, ದಯೆ, ಜಿತೇಂದ್ರಿಯತ್ವ ಎಂಬ ವಿಶಿಷ್ಟ ಗುಣಗಳಿದ್ದರೆ, ಶ್ರದ್ಧೆ, ನಂಬಿಕೆ, ವಿಶ್ವಾಸ, ಪ್ರೀತಿ, ಅನುರಾಗ, ಆಸಕ್ತಿಗಳಿಂದ ಭಗವಂತನ ನಾಮಸ್ಮರಣೆ ಮಾಡಿದರೆ, ಅಂದರೆ ಧ್ಯಾನವು ವಿಧಾಯಕ ರೀತಿಯಲ್ಲಿದ್ದರೆ ಅಂತಹ **ಪ್ರಾರ್ಥನೆ**ಯು ದುಷ್ಟವಾದುದನ್ನು ದೂರಮಾಡುವ, ನೋವನ್ನು ನಲಿವನ್ನಾಗಿಸುವ, ಸಮದರ್ಶಿತ್ವವನ್ನುಂಟು ಮಾಡುವ, ಎಲ್ಲರನ್ನೂ ಒಂದಾಗಿಸುವ, ಸಂತೃಪ್ತಿ ಹಾಗೂ ಅಮರತ್ವಗಳನ್ನು ನೀಡುವ, ಶಕ್ತಿಯನ್ನು ಹೊಂದಿದೆ ಎನ್ನುವುದರಲ್ಲಿ ಸಂದೇಹವಿಲ್ಲ. ತನ್ನ ಕೆಲಸ ಗಳೆಲ್ಲವೂ ಭಗವತ್ಪ್ರೇರಣೆಯಂತೆ ನಡೆಯುತ್ತವೆ, ತಾನು ಕೇವಲ ನಿಮಿತ್ತ ಮಾತ್ರ, ಎಂದು ತಿಳಿಯುವ ಭಕ್ತನಲ್ಲಿ, ಎಲ್ಲ ವಿಧವಾದ ದುಃಖ, ಕಷ್ಟ, ನೋವುಗಳನ್ನೂ ಸೈರಿ ಸುವ, ಲಾಭನಷ್ಟ, ಸುಖದುಃಖ, ಜಯ ಅಪಜಯ ಎಂಬೀ ದ್ವಂದ್ವಗಳನ್ನು ಅಲಕ್ಷಿ ಸುವ, ಶಕ್ತಿ ಬರುತ್ತದೆ.

ಭಕ್ತರ ಅಥವಾ ಭಾಗವತರ ಬಳಿ ಆಡಂಬರ—ತೋರಿಕೆಗಳು ಸುಳಿಯವು ; ಶೋಕ-ದ್ವೇಷಗಳಿಲ್ಲದ ಅವರ ಮನಸ್ಸು ಕೆಟ್ಟ ಕೆಲಸಗಳಲ್ಲಿ ಉದ್ರಿಕ್ತವಾಗುವುದಿಲ್ಲ;

ಅವರು ಯಾವಾಗಲೂ ನಿಸ್ವಾರ್ಥದಿಂದ ಸೇವೆಮಾಡಿ ತಮ್ಮ ಪಾಲಿಗೆ ಬಂದ ಕರ್ತವ್ಯ ಕರ್ಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಾರೆ; ಇತರರನ್ನು ಬದುಕಗೊಟ್ಟು ತಾವೂ ಬದುಕುತ್ತಾರೆ; ತಮ್ಮಿಂದ ಸಮಾಜಕ್ಕೆ ಯಾವುದೇ ರೀತಿಯ ತೊಂದರೆ ಉಂಟಾಗದಂತೆ ಎಚ್ಚರಿಕೆ ವಹಿಸುತ್ತಾರೆ. ಇದರ ಫಲವಾಗಿ ಕ್ಲೇಶ ಕಷ್ಟಗಳೆಲ್ಲದರ ಮೂಲವಾದ ಪಾಪದ ಬೀಜಗಳು ತಾವಾಗಿ ನಾಶ ಹೊಂದುತ್ತವೆ.

ಮುಖ್ಯವಾಗಿ ಭಗವಂತನಲ್ಲಿ ಭಕ್ತಿ ಇಡುವುದು ಎಂದರೆ ಅವನೊಡನೆ ಸ್ನೇಹ ಮಾಡಿಕೊಳ್ಳುವುದು ಎಂದರ್ಥ. ಭಗವಂತನೊಂದಿಗೆ ಮಾಡುವ ಸ್ನೇಹವು ಅವನ ಶರೀರವಾದ ಇತರ ಪ್ರಾಣಿಗಳೊಂದಿಗೆ ಸ್ನೇಹಮಾಡುವುದೆಂಬುದನ್ನೂ ಒಳಗೊಂಡಿರುತ್ತದೆ. ಈ ಸ್ನೇಹಕ್ಕೆ ಪ್ರಪಂಚದ ಹಿತವನ್ನು ಸಾಧಿಸಬೇಕೆಂಬ ಉದ್ದೇಶವೇ ಕಾರಣವಾಗಿರಬೇಕಲ್ಲದೆ ತನ್ನ ಸ್ವಂತ ಪ್ರಯೋಜನವಲ್ಲ. ಇಂತಹ ಭಕ್ತಿಮಾರ್ಗ ಎಲ್ಲರಿಗೂ ಸುಲಭಸಾಧ್ಯವಾದುದು. ಅನೇಕ ವ್ಯಕ್ತಿ-ವಸ್ತುಗಳಿಂದ ಕೂಡಿದ ಈ ಸೃಷ್ಟಿಯು ಪರಮಾತ್ಮನ ಕರುಣಾಶಕ್ತಿಯ ಆವಿರ್ಭಾವ. ಸೃಷ್ಟಿಕರ್ತನ ಉದ್ದೇಶ–ಕೌಶಲಗಳನ್ನು ಅರಿತು, ಆಚರಿಸಿ, ಆನಂದಿಸಿ, ಸೃಷ್ಟಿಯ ಸೊಬಗನ್ನು ಸವಿಯುವುದು ಭಕ್ತಿಯ ಪರಾಕಾಷ್ಠೆಯಾಗಿರುತ್ತದೆ.

ಪ್ರಕೃತಿ ಪುರುಷರಿಬ್ಬರನ್ನೂ ತನ್ನ ಶರೀರವಾಗಿ ಹೊಂದಿರುವ, ಅತ್ಯುತ್ತಮ ವಸ್ತುವಾದ, ಭಗವಂತನ ನಿಜಸ್ವರೂಪವನ್ನರಿತು, ನೋಡಿ, ಪಡೆಯುವುದೇ, ಭಕ್ತಿಯೋಗ. ಭಕ್ತಿಯಿಂದ ಆಧಿಭೌತಿಕ, ಆಧಿಆತ್ಮಿಕ, ಆಧಿದೈವಿಕ ಕ್ಲೇಶಗಳೆಲ್ಲವೂ ನಿವಾರಣೆಯಾಗಿ, ಭಕ್ತರಿಗೆ ಭಗವಂತನ ಸಂಪರ್ಕ ಉಂಟಾಗಿ, ಅದರ ಆನಂದಾನುಭವವು ದೊರೆತು ಮುಕ್ತಿಯು ಸುಲಭವಾಗಿ ಸಿಗುತ್ತದೆ. ಎಲ್ಲವೂ ಸಿದ್ಧಿಸುವ, ಪ್ರೇಮರೂಪವಾದ, ಭಕ್ತಿಯು, ವಿಶ್ವವ್ಯಾಪಿಯಾಗುವುದೇ ಮಾನವನ ಅಂತಿಮ ಗುರಿ.

ಪರಮಾತ್ಮನನ್ನು ಪೂಜಿಸಿ, ಅವನ ಸಾಕ್ಷಾತ್ಕಾರವನ್ನು ಪಡೆಯಲು, ಭಕ್ತಿಯನ್ನೇ ಮುಖ್ಯ **ಸಾಧನ**ವನ್ನಾಗಿ ಮಾಡಿದವರು **ಆಚಾರ್ಯ ರಾಮಾನುಜರು.** ಭಕ್ತಿಯನ್ನು ಶ್ರೀವೈಷ್ಣವ ಮತದ ತಿರುಗುಣಿಯನ್ನಾಗಿ ಮಾಡಿ, ಅದು ಜನಪ್ರಿಯವಾಗುವಂತೆ ಮಾಡಿದುದು, ರಾಮಾನುಜರ ಜೀವನದ ಪ್ರಮುಖ ಸಾಧನೆ. ಕೀಳು ಕುಲ ಎನಿಸಿಕೊಳ್ಳುವ ಜನರ ಉದ್ಧಾರಕ್ಕಾಗಿ ಏರ್ಪಡಿಸಿದ ಈ ವ್ಯವಸ್ಥೆಯು ಭಾರತದ ಸಾಮಾಜಿಕ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಹಿಂದಿನ ಭಕ್ತಿಮಾರ್ಗಗಳೆಲ್ಲವೂ ರಾಮಾನುಜರೆಂಬ ಜಲಾಶಯದಲ್ಲಿ ಸೇರಿ ಐಕ್ಯವಾಗಿ, ಅಲ್ಲಿಂದ ಮುಂದೆ ನಾನಾ ಕವಲುಗಳಾಗಿ ಹೊರಟು ಜನಮನವನ್ನು ತಣಿಸಿವೆ.

ನಾರದ, ಪರಾಶರ, ವಾಲ್ಮೀಕಿ, ವ್ಯಾಸ, ಶಂಕರ, ಕಂಬ ಮುಂತಾದವರು ಮೊದಲ ಭಕ್ತಿ ಸಾಹಿತ್ಯ ನಿರ್ಮಾಪಕರು. ರಾಮಾನುಜರ ನೂತನ ಭಕ್ತಿಮಾರ್ಗ

ದಿಂದ ಸ್ಫೂರ್ತಿಗೊಂಡ ನಿಂಬಾರ್ಕ, ಜಯದೇವ, ಮಧ್ವ, ನಾಮದೇವ, ಜ್ಞಾನದೇವ, ರಾಮಾನಂದ, ವಿದ್ಯಾಪತಿ, ಕಬೀರ, ಪೋತನ, ಅನ್ನಮಾಚಾರ್ಯ, ನರಸಿಮೆಹತಾ, ಶ್ರೀಪಾದರಾಯ, ವ್ಯಾಸರಾಯ, ಶಂಕರದೇವ, ನಾನಕ್, ವಲ್ಲಭ, ಸೂರದಾಸ, ವಾದಿರಾಜ, ಪುರಂದರದಾಸ, ಚೈತನ್ಯ, ತುಲಸೀದಾಸ, ತಾನ್‌ಸೇನ್, ಮೀರಾ, ಮಧುಸೂದನ ಸರಸ್ವತಿ, ರಾಮದಾಸ, ಚಿಕ್ಕದೇವರಾಜ ಒಡೆಯರು, ಏಕನಾಥ, ಭಟ್ಟಾದ್ರಿ, ಪೂಂತಾನಂ, ತುಕಾರಾಂ, ವಿಜಯದಾಸ, ರಾಘವೇಂದ್ರ, ಗೋಪಾಲದಾಸ, ಗಿರಿಯಮ್ಮ, ಜಗನ್ನಾಥದಾಸ, ತ್ಯಾಗರಾಜ, ನಾರಾಯಣ, ಸ್ವಾತಿತಿರುನಾಳ್, ಶ್ರೀರಾಮಕೃಷ್ಣ, ವಿವೇಕಾನಂದ, ಟಾಗೂರ್, ಗಾಂಧಿ, ಅರವಿಂದ, ರಾಜಾಜಿ, ವಿನೋಬಾ, ಲೇಖ್‌ರಾಜ್, ಮುಂತಾದವರ ಪ್ರಯತ್ನದಿಂದ ಕನ್ನಡ, ಮಲಯಾಳಿ, ತಮಿಳು, ತೆಲುಗು, ಮರಾಠಿ, ಗುಜರಾತಿ, ಹಿಂದಿ, ಬಂಗಾಳಿ, ಒರಿಯ, ಅಸ್ಸಾಮಿ, ಸಂಸ್ಕೃತ ಭಾಷೆಗಳಲ್ಲಿ ವಿಷ್ಣು ಮತ್ತು ಅವನ ಅವತಾರ ರೂಪಗಳ ಬಗ್ಗೆ ಅಪಾರವಾದ **ಭಕ್ತಿ ಸಾಹಿತ್ಯ**ವು ಸೃಷ್ಟಿಸಲ್ಪಟ್ಟಿತು. ಈ ಕಾರ್ಯದಲ್ಲಿ ಕುತ್ಬಾನ್, ಮಾಂಝಾನ್, ಮಲ್ಲಿಕ್ ಮಹಮ್ಮದ್, ಜಾಯಸಿ, ರಸಖಾನ್, ಷೇಕ್ ಮಹಮ್ಮದ್, ಷಾ ಮುನಿ, ಆಲುಖಾನ್, ಷೇಕ್ ಸುಲ್ತಾನ್, ಸಯ್ಯದ್ ಹುಸೇನ್, ಸಯ್ಯದ್ ಮಹಮ್ಮದ್, ಜಮಾಲ್ ಷಾ, ಷಾ ಬೇಗ್, ಅಂಬರ್ ಹುಸೇನ್‌ಖಾನ್ ಮುಂತಾದ ಮುಸಲ್ಮಾನ ಸಂತ ಕವಿಗಳೂ ಕೊಡುಗೆ ನೀಡಿದ್ದಾರೆ. ಹೀಗೆ ಆಧ್ಯಾತ್ಮ ಸಾಫಲ್ಯವನ್ನು ಒದಗಿಸಿರುವ ವಿಷ್ಣು ಭಕ್ತಿಯು ಲೋಕಪ್ರಿಯವಾಗಿ ಭಾರತಕ್ಕೇ ಅಲ್ಲದೆ ವಿಶ್ವದ ಅನೇಕ ರಾಷ್ಟ್ರಗಳಿಗೆ ಹಾಗೂ ಅಪಾರ ಸಾಹಿತ್ಯ ನಿರ್ಮಾಣಕ್ಕೆ, ಸ್ಫೂರ್ತಿಯನ್ನು ನೀಡಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಪರಮಾತ್ಮನಲ್ಲಿ ಮೋಕ್ಷಕ್ಕಾಗಿ ಮಾಡುವ ಶುದ್ಧ ಪ್ರೇಮ, ಅನುರಾಗ, ಭಕ್ತಿಗಳಿಗೆ ಯಾವ ಅರ್ಹತೆಯ ಆವಶ್ಯಕತೆಯೂ ಇಲ್ಲವೆಂಬುದು ಧರ್ಮವ್ಯಾಧ, ಧ್ರುವ, ಗಜೇಂದ್ರ, ಕುಬ್ಜೆ, ಕುಚೇಲ, ಸುದಾಮ, ವಿದುರ, ದ್ರೌಪದಿ, ಶಬರಿ, ವಿಭೀಷಣ, ಯಶೋದೆ, ಗೋಪಿ, ಬಾಣ, ಬಲಿ, ಶಿಬಿ, ಪ್ರಹ್ಲಾದ, ಅರ್ಜುನ, ಹನುಮಂತ, ಗರುಡ, ಜಟಾಯು, ಗುಹ, ಅಕ್ರೂರ, ಉದ್ಧವ, ವಾಲ್ಮೀಕಿ, ವ್ಯಾಸ, ಶುಕ, ಪರೀಕ್ಷಿತ್, ಅಂಬರೀಷ, ಅಜಾಮಿಳ, ಜನಕ ಮುಂತಾದವರ ಜೀವನದಿಂದ ತಿಳಿದು ಬರುವ ಮುಖ್ಯ ಅಂಶ.

ಗರುಡ, ಹನುಮಂತ, ಲಕ್ಷ್ಮಣರಂತೆ ಕಷ್ಟ ನಷ್ಟಗಳನ್ನು ಗಣನೆಗೆ ತಾರದೆ, ವಿರಾಮವಿಲ್ಲದೆ ದುಡಿದು, ದೇವರ ಸೇವೆ ಮಾಡಿ, ಆನಂದಿಸಬಹುದು ; ಕೌಸಲ್ಯೆ, ದೇವಕಿ, ಯಶೋದೆ, ಪೆರಿಯಾಳ್ವಾರ್‌ಗಳಂತೆ ದೇವರನ್ನು ಮಗುವೆಂದು ಭಾವಿಸಿ, ಪ್ರೀತಿಸಿ, ಆಡಿಸಬಹುದು ; ಆಂಡಾಳ್, ಮೀರಾ, ರಾಧೆ, ನಮ್ಮಾಳ್ವಾರ್‌ಗಳಂತೆ ಭಗವಂತನನ್ನು ಪತಿ ಎಂದು ಭಾವಿಸಿ, ಭಜಿಸಿ, ಆನಂದಿಸಬಹುದು ; ಅಥವಾ ವಿರಹ

ವ್ಯಥೆಯಿಂದ ಪರಿತಪಿಸುತ್ತ, ಧ್ಯಾನಿಸಬಹುದು; ಬಲಿಚಕ್ರವರ್ತಿ, ತಿರುಪ್ಪಾಣಾಳ್ವಾರ್, ತೊಂಡರಡಿಪ್ಪೊಡಿಆಳ್ವಾರ್‌ಗಳಂತೆ ತಮ್ಮ ಸರ್ವಸ್ವವನ್ನೂ ವ್ಯಕ್ತಿತ್ವದೊಂದಿಗೆ ಸಂತೋಷದಿಂದ ಭಗವಂತನಿಗೆ ಅರ್ಪಿಸಿ, ಸೇವಿಸಿ, ದಾಸನಾಗಿ ದೇಹವನ್ನು ಸವೆಸಿ, ಅವನಲ್ಲಿ ಐಕ್ಯವಾಗಲು ಬಯಸಬಹುದು; ವಿಭೀಷಣ, ಸುಗ್ರೀವರಂತೆ ಅವನಲ್ಲಿ ಶರಣಾಗತಿ ಮಾಡಬಹುದು; ಅರ್ಜುನನಂತೆ ಅವನಿಗೆ ಸಖನಾಗಿ ಇರಬಹುದು; ಪ್ರಹ್ಲಾದ, ಶುಕ, ಪರೀಕ್ಷಿತ್, ಧ್ರುವ, ಜನಕರಂತೆ ಅನನ್ಯ ಮನಸ್ಸಿನಿಂದ ಧ್ಯಾನಿಸಿ, ಅವನ ಕಾರುಣ್ಯವನ್ನು ಸಂಪಾದಿಸಬಹುದು; ವಾಲ್ಮೀಕಿ, ಅಜಾಮಿಳ, ಗಜೇಂದ್ರ, ದ್ರೌಪದಿ ಇವರಂತೆ ಕೇವಲ ನಾಮಸ್ಮರಣೆಯಿಂದ ಇಚ್ಛಿಸಿದುದನ್ನು ಪಡೆಯಬಹುದು.

ದೇವರನ್ನು ಕಟುವಾಗಿ ದ್ವೇಷಿಸಿ, ಟೀಕಿಸಿ, ಅವನ ಸಾನ್ನಿಧ್ಯವನ್ನು ಹೊಂದುವುದು ಇನ್ನೊಂದು ಬಗೆಯ ಭಕ್ತರ ಲಕ್ಷಣ. ಪರಮಾತ್ಮನಲ್ಲಿ ಪ್ರೀತಿಯಿಲ್ಲದೆ, ದ್ವೇಷ–ಭಯಗಳಿದ್ದು ಅವನನ್ನು ಎಡಬಿಡದೆ, ಧ್ಯಾನಿಸಿ, ಸ್ಮರಿಸಿದರೂ ಧ್ಯೇಯಸಾಧನೆ ಆಗುತ್ತದೆಂಬುದು ಹಿರಣ್ಯಕಶಿಪು, ರಾವಣ, ಶಿಶುಪಾಲ ಇವರ ಜೀವನದಿಂದ ತಿಳಿದು ಬರುತ್ತದೆ. ನಿಶ್ಚಲ ಮನಸ್ಸು, ಉಗ್ರ ಆಚರಣೆ, ಕಠೋರ ವರ್ತನೆ ಈ ಮಾರ್ಗಕ್ಕೆ ಅವಶ್ಯಕವಾದುದರಿಂದ ಇದು ಬಹು ಕಠಿಣವಾಗಿದ್ದು, ಎಲ್ಲರಿಗೂ ಸಾಧ್ಯವಾಗಲಾರದು. ಏನೇ ಆದರೂ ದ್ವೇಷಕ್ಕಿಂತ ಪ್ರೀತಿ ಮಾರ್ಗವೇ ಕ್ಷೇಮಕರವಾದುದು.

ಸೂರ್ಯನ ಬೆಳಕು ಒಂದೇ ಆಗಿದ್ದರೂ ತ್ರಿಕೋಣಾಕಾರದ ಗಾಜಿನ ಮೂಲಕ ಪ್ರವೇಶಿಸಿದಾಗ ಅದು ಏಳು ಬಣ್ಣವಾಗಿ ಕವಲು ಒಡೆಯುತ್ತದೆ. ಹಾಗೆಯೇ ಭಕ್ತಿಯೂ ಹಲವು ಭಾವಗಳನ್ನು ತಳೆದು ವ್ಯಕ್ತವಾಗುವುದು ಸಹಜ. ಸಾಧಾರಣ ಮಾನವ ಭಕ್ತರು ಯಾವುದಾದರೊಂದು ಭಾವದಲ್ಲಿ ಪರಿಣತರಾಗಿ ಅದರಲ್ಲಿಯೇ ಮುಳುಗಿರುತ್ತಾರೆ; ಆದರೆ ಮಹಾತ್ಮರಲ್ಲಿ ಎಲ್ಲ ರೀತಿಯ ಭಕ್ತಿಭಾವಗಳೂ ಇರುವುದುಂಟು.

"ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮ ನಿವೇದನಂ ॥" ಎಂಬಂತೆ **ಭಕ್ತಿಯು ನವವಿಧ** ಆಗಿರುತ್ತದೆಂದು ಅನುಭವಿಗಳ ಅಭಿಮತ.

ವಿಷ್ಣುಪುರಾಣ, ಭಾಗವತ, ರಾಮಾಯಣ, ಮಹಾಭಾರತಗಳ ಮೂಲಕ ಭಗವಂತನ ಲೀಲಾವಿನೋದ ಕಥೆಗಳ **ಶ್ರವಣ**ದಿಂದ ಪ್ರಾಪಂಚಿಕವಾದ ವಿಷಯವಾಸನೆಗಳಿಂದ ಆವೃತವಾದ ಭಕ್ತರ ಹೃದಯಗಳು ಪವಿತ್ರವಾಗಿ ಭಗವಂತನ ಸಾನ್ನಿಧ್ಯವನ್ನು ಪಡೆಯಲು ಸಿದ್ಧಗೊಳ್ಳುತ್ತವೆ.

ಭಗವಂತನ ದಿವ್ಯನಾಮಗಳ ಸ್ವರೂಪ, ಗುಣ, ಲೀಲಾವಿಭೂತಿಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಆಗಾಗ **ಸ್ಮರಣ** ಮಾಡುತ್ತಿದ್ದರೆ ಅದರಿಂದ ಭಗವಂತನ

ವಿಚಾರವೆಲ್ಲ ತಿಳಿದು ಸದ್ಗುಣಗಳ ಗಣಿಯಾದ, ಮನ್ಮಥನಿಗಿಂತ ಮಿಗಿಲಾದ, ಭುವನ ಮನೋಹರನಾದ, ಭಗವಂತನ ದಿವ್ಯ ಮಂಗಳ ಮೂರ್ತಿಯನ್ನು ಏಕಾಗ್ರ ಮನಸ್ಸಿನಿಂದ ಧರಿಸಿ, **ಧ್ಯಾನಿಸಿ** ಮುಕ್ತರಾಗಲು ನೆರವಾಗುತ್ತದೆ.

ಕೃತಯುಗದಲ್ಲಿ ಧ್ಯಾನದಿಂದ, ತ್ರೇತಾಯುಗದಲ್ಲಿ ಯಜ್ಞದಿಂದ, ದ್ವಾಪರ ಯುಗದಲ್ಲಿ ಸೇವೆಯಿಂದ, ಸಾಧಿಸುವುದೆಲ್ಲವೂ ಕಲಿಯುಗದಲ್ಲಿ ಕೇವಲ ವಿಷ್ಣುವಿನ **ನಾಮ ಸಂಕೀರ್ತನ**ದಿಂದ ದೊರೆಯುತ್ತದೆ. ಆದುದರಿಂದ ಭಗವಂತನ ದಿವ್ಯ ಜ್ಞಾನ, ಅಪಾರ ಕರುಣೆ, ಶರಣಾಗತರಲ್ಲಿರುವ ವಾತ್ಸಲ್ಯ, ಅಹೈತುಕ ಕೃಪೆ, ಮುಂತಾದ ಗುಣಗಳಲ್ಲಿ ಆಸಕ್ತರಾಗಿ, ಸೃಷ್ಟಿ ಸ್ಥಿತಿ ಲಯ ಕರ್ತನಾದ ಆತನ ನಾಮಗಳನ್ನು **ಕೀರ್ತನ** ರೂಪದಲ್ಲಿ ಹಾಡುವವರೂ, ಅದನ್ನು ಆಲಿಸುವವರೂ ಜನನ ಮರಣ ಭಯದಿಂದ ದೂರಾಗಬಹುದು.

ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಕೈಕೊಂಡು, ಪವಿತ್ರ ತೀರ್ಥಗಳಲ್ಲಿ ಮಿಂದು, ಅಲ್ಲಿನ ದೇವಾಲಯಗಳಲ್ಲಿರುವ ದಿವ್ಯ ಮಂಗಳ ವಿಗ್ರಹಗಳ ದರ್ಶನಮಾಡಿ, ಆತನ **ಪಾದಸೇವೆ** ಮಾಡಿದರೆ ದೇಹ ಮನಸ್ಸುಗಳು ಶುದ್ಧಿ ಹೊಂದುತ್ತವೆ.

ಭಗವಂತನೇ ತನ್ನ ಸ್ವಾಮಿ, ತಾನು ಅವನ **ದಾಸ** ಎಂದು ತಿಳಿದು, ಪೂರ್ಣ ಪ್ರೇಮದಿಂದ, ಪ್ರತಿಫಲ ರೂಪದಲ್ಲಿ ಅವನಿಂದ ಏನನ್ನೂ ಅಪೇಕ್ಷಿಸದೆ, ಅವನ ಸೇವೆ, ಕೈಂಕರ್ಯ ಮಾಡುವುದು **ದಾಸ್ಯ**ವೆನಿಸುತ್ತದೆ.

ಭಗವಂತನು ಅವನ ಶೇಷರಾದ ನಮ್ಮನ್ನು ಸ್ವೀಕರಿಸುವಂತೆ ಯತ್ನಿಸುವ ಇದು ಒಂದು ರೀತಿಯಲ್ಲಿ ಆಧ್ಯಾತ್ಮಿಕ ಗುಲಾಮಗಿರಿ. ಇದರ ಫಲವಾಗಿ ನೂತನ ಸಂಬಂಧವಾದ **ಸಖ್ಯ** ಏರ್ಪಡುವುದರಲ್ಲಿ ಸಂದೇಹವಿಲ್ಲ.

ಮುಖ್ಯವಾಗಿ ಆತನ ಸೇವೆಯನ್ನು ನಿಸ್ವಾರ್ಥದಿಂದ, ನಿಷ್ಕಳಂಕ ರೀತಿಯಲ್ಲಿ ಮಾಡಿ, ಆತನನ್ನು ಪತ್ರಪುಷ್ಪ ಫಲತೋಯಗಳಿಂದ **ಅರ್ಚಿಸಿ,** ಷೋಡಶೋಪಚಾರಗಳಿಂದ **ವಂದಿಸಿ** ಕೃತಜ್ಞತೆಯನ್ನು ಸಲ್ಲಿಸಿದರೆ, ನಮ್ಮಲ್ಲಿರುವ ನಾನು, ನನ್ನದು ಎನ್ನುವ ಅಹಂಕಾರ, ಮಮಕಾರಗಳೆಲ್ಲ ಅಳಿದು ಹೋಗಿ ಅವನು ನಮ್ಮನ್ನು ಸ್ವೀಕರಿಸಲು ಸಾಧ್ಯವಾಗುತ್ತವೆ.

ಭಗವಂತನು ಪತಿ, ತಾನು ಪತ್ನಿ ಎಂಬ ಮಧುರ ಭಾವದಲ್ಲಿ ಅವನ ವಿರಹವನ್ನು ಸಹಿಸಲಾರದೆ ಅವನಲ್ಲಿ ಐಕ್ಯತೆಗಾಗಿ ಹಗಲಿರುಳೂ ಪ್ರಾರ್ಥಿಸುವುದು **ಕಾಂತತ್ವ.**

"ಕಾಯೇನವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾವಾ ಪ್ರಕೃತೇ ಸ್ವಭಾವಾತ್ ।
ಕರೋಮಿಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥"

ಎಂಬಂತೆ ವಾಣಿ, ಶರೀರ, ಮನಸ್ಸು ಎಲ್ಲವೂ ಭಗವಂತನ ಸಂಪತ್ತೆಂದೇ ತಿಳಿದು, ತನ್ನ ಆಸೆ, ಆಕಾಂಕ್ಷೆ, ಆವಶ್ಯಕತೆಗಳ ಚಿಂತನ ಮಾಡದೆ, ಎಲ್ಲವನ್ನೂ ಯಾವ ಫಲಾಪೇಕ್ಷೆಯೂ ಇಲ್ಲದೆ ಆತನಿಗೆ **ಆತ್ಮ ನಿವೇದನೆ** ಮಾಡಿಕೊಂಡರೆ, ಶಾಂತಿ ಸಮಾಧಾನಗಳು ಸಿಗುವುದರಲ್ಲಿ ಸಂದೇಹವಿಲ್ಲ.

ಮುಖ್ಯವಾಗಿ ಪ್ರೀತಿಯಿಂದ ಸಮರ್ಪಿಸಿದ ಯಾವುದನ್ನಾದರೂ ಭಕ್ತಪರಾಧೀನನಾಗಿರುವ ಭಗವಂತನು ಸ್ವೀಕರಿಸಿ ಅನುಗ್ರಹಿಸುತ್ತಾನೆ. ದ್ರೌಪದಿಯು ಕೊಟ್ಟ ಒಂದು ಎಲೆಯ ತುಂಡು, ಗಜೇಂದ್ರನು ನೀಡಿದ ಒಂದು ಕಮಲದ ಹೂ, ತಾನು ಅಲಂಕರಿಸಿ ನೋಡಿಕೊಂಡು ಆಂಡಾಳ್ ಸಮರ್ಪಿಸಿದ ಹೂಮಾಲೆ, ತಾನು ತಿಂದು ರುಚಿನೋಡಿ ಶಬರಿಯು ಅರ್ಪಿಸಿದ ಹಣ್ಣು, ದಾಸಿಯ ಪುತ್ರನಾದ ವಿದುರನು ಕೊಟ್ಟ ಒಂದು ಲೋಟ ಹಾಲು, ಗುಹನು ಕೊಟ್ಟ ನೀರು, ಕುಬ್ಜೆಯು ನೀಡಿದ ಪರಿಮಳ ಸುಗಂಧ–ಎಲ್ಲವೂ ಆತನಿಗೆ ಗ್ರಾಹ್ಯವೇ.

ಭಗವಂತನಿಗಾಗಿ ಅರ್ಪಿಸಲು ಯಾವ ವಸ್ತುವೂ ಸಿಗದಿದ್ದಾಗ ಮಾನಸಿಕ ಪೂಜೆಯೇ ಅಂದರೆ ಅಹಿಂಸೆ, ಇಂದ್ರಿಯನಿಗ್ರಹ, ಸರ್ವಭೂತದಯೆ, ಕ್ಷಮೆ, ಶಾಂತಿ, ತಪಸ್ಸು, ಧ್ಯಾನ, ಸತ್ಯ ಎಂಬೀ **ಎಂಟು** ವಿಧವಾದ **ಆತ್ಮಗುಣ**ಗಳನ್ನು ಅನುಷ್ಠಿಸುವುದೇ ಪುಷ್ಪಸಮರ್ಪಣವಾಗಿ, ಅವನ ಮೆಚ್ಚುಗೆಯನ್ನು ಗಳಿಸಿಕೊಡಬಲ್ಲುದು.

ಭಕ್ತಿಯೆಂಬ ಸಾಧನದಲ್ಲಿ ಭಾವನಾಶಕ್ತಿಯ ಶುದ್ಧೀಕರಣ, ಸಂಗ್ರಹ, ಪರಮಾತ್ಮನ ಚರಣದಲ್ಲಿ ಅದರ ಅರ್ಪಣ, ಮುಖ್ಯವಾದುವು. ಗುರೂಪದೇಶದಿಂದ ವೇದಶಾಸ್ತ್ರಾದಿಗಳಿಂದ ಹೊಂದಿದ ಸರಿಯಾದ ತತ್ತ್ವಜ್ಞಾನದೊಂದಿಗೆ ವರ್ಣಾಶ್ರಮಗಳ ಅನುಷ್ಠಾನವು ಹೊಂದಿಕೊಳ್ಳುವಂತೆ ಅಭ್ಯಾಸಮಾಡಿದರೆ, ಅದರಿಂದ ಭಗವಂತನ ಬಗ್ಗೆ ಇರುವ ಜ್ಞಾನವಿಶೇಷವು ಪ್ರೀತಿಯ ರೂಪವನ್ನು ತಳೆದು ಪರಿಶುದ್ಧವಾದ ಧ್ಯಾನವು ಏರ್ಪಡುತ್ತದೆ. ಸ್ಥಿರವಾಗಿ ನಿಂತ ಧ್ಯಾನವೇ **ಪರಭಕ್ತಿ.** ಇದರ ಫಲವಾಗಿ ಅಂತಃಶಕ್ತಿಗಳ ಮೇಲೆ ನಮ್ಮ ಹತೋಟಿಯು ಹೆಚ್ಚಾಗಿ, ಸ್ವಾರ್ಥ, ಕಪಟ, ಕ್ರೂರತೆ, ಶೋಷಣೆಗಳೆಲ್ಲ ಮಾಯವಾಗಿ ಶಾಂತಿ, ಪ್ರೇಮ, ಬಂಧುತ್ವ ಬೆಳೆಯುತ್ತದೆ. ಹೀಗೆ ಭಕ್ತಿಯಿಂದ ವ್ಯಕ್ತಿಯ ಉದ್ಧಾರವಷ್ಟೇ ಆಗದೆ, ಸಮಾಜದಲ್ಲಿಯೂ ಸುಖ, ಶಾಂತಿ, ಸಮಾನತೆಗಳು ನೆಲೆಸಲು ಸಹಾಯ ಸಿಗುತ್ತದೆ.

"ಯದಿ ಭವತಿ ಮುಕುಂದೇ ಭಕ್ತಿರಾನಂದ ಸಾಂದ್ರಾ
ವಿಲುಠತಿ ಚರಣಾಬ್ಜೇ ಮೋಕ್ಷಸಾಮ್ರಾಜ್ಯಲಕ್ಷ್ಮೀ ॥"

ಎಂಬಂತೆ ಉತ್ಕಟ ಭಕ್ತನ ಚರಣದ ಅಡಿಗಳಲ್ಲಿ ಭಕ್ತಿಯ ದಾಸಿಯಾದ ಮುಕ್ತಿ ಎಂಬ ವನಿತೆಯು ಉರುಳಾಡುವಳು ಎಂದು ಹೇಳಲ್ಪಟ್ಟಿದೆ.

ನಿರಾಕಾರ, ನಿರ್ಗುಣ ಎಂದು ಕೆಲವರು ಹೇಳುವ ಪರಮಾತ್ಮನು ಸಾಕಾರ, ಸದ್ಗುಣ ಸಂಪನ್ನನೂ ಆಗಿ ಜಡ-ಚೇತನಗಳೆರಡರಲ್ಲಿಯೂ, ಎಲ್ಲ ಕಡೆಗಳಲ್ಲಿಯೂ

ವ್ಯಾಪಿಸಿರುವುದು ನಿಜ. ಅಂತಹ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಕಾಡಿನ ವಾಸ, ಜಪತಪ, ಉಪವಾಸ ಮುಂತಾದುವುಗಳಿಂದ ದೇಹವನ್ನು ದಂಡಿಸಿ ಸವೆಸುವುದಕ್ಕೆ ಬದಲಾಗಿ, ಅವನೇ ದಯಪಾಲಿಸಿದ ಸಾಂಸಾರಿಕ ಜೀವನ ಮತ್ತು ಪ್ರಾಪಂಚಿಕ ಸಾಧನ ಸಾಮಗ್ರಿಗಳ ಉಚಿತ ಉಪಯೋಗವೇ ಉತ್ತಮ, ಸಾಧು ಆದ ಉಪಾಯ.

ಸದ್ವಿಚಾರ, ಸದಾಚಾರಗಳ ಶ್ರೇಷ್ಠವಾದ ಅನನ್ಯ ಭಕ್ತಿಯಿಂದ ಉಂಟಾದ ಆತ್ಮಾನುಭವ, ಅದರಿಂದ ಲಭಿಸಿದ ದಿವ್ಯಜ್ಞಾನ ಹಾಗೂ ವಿಶ್ವಪ್ರೇಮಗಳ ಪ್ರಚಾರ-ಪ್ರಸಾರದಿಂದ, ಜನಸಾಮಾನ್ಯರನ್ನು ವಿಶ್ವಕಲ್ಯಾಣ ಕಾರ್ಯಗಳಲ್ಲಿ ನೆರವು ನೀಡುವಂತಹ ಸನ್ಮಾರ್ಗಿಗಳಾಗಿ ಮಾಡುವುದೇ, ನಿಜವಾದ ಭಕ್ತರ ಅಥವಾ ಭಾಗವತರ ಮುಖ್ಯ ಕಾರ್ಯ.

ಯಾರಲ್ಲಿ ಪ್ರೀತಿರೂಪವಾದ ಜ್ಞಾನ, ಕೈಂಕರ್ಯರೂಪವಾದ ಕ್ರಿಯೆಗಳು ಇರುತ್ತವೆಯೋ ಅವರಿಗೆ ಜಯವು ಕಟ್ಟಿಟ್ಟ ಬುತ್ತಿ ಎಂದು ರಾಮಾನುಜರು ಖಚಿತವಾಗಿ ಹೇಳಿದ್ದಾರೆ.

"ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋಧನುರ್ಧರಃ ।
ತತ್ರ ಶ್ರೀ ವಿಜಯೋಭೂತಿರ್ಧ್ರುವಾನೀತಿರ್ಮತಿರ್ಮಮ ॥"

ಎಂಬಂತೆ ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣ ಪರಮಾತ್ಮನು ಗುರುವಾಗಿ ಇರುವನೋ, ಎಲ್ಲಿ ಅವನ ಉಪದೇಶಗಳನ್ನು ಅನುಷ್ಠಿಸಲು ಸಿದ್ಧನಾಗಿ ಧನುರ್ಧಾರಿಯಾದ ಪಾರ್ಥನಂತಹ ಶರಣಾಗತನಾದ ಶಿಷ್ಯನು ಇರುವನೋ, ಅಲ್ಲಿ ಐಶ್ವರ್ಯ, ವಿಜಯ, ನೀತಿ ನೆಲಸಿರುವುದು ನಿಜ.

"ಅನನ್ಯಾಶ್ಚಿಂತಯಂತೋ ಮಾಂ ಯೇಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ॥"

ಎಂಬಂತೆ "ಮಾನವರು ತಮ್ಮ ಹೃದಯದಲ್ಲಿ ಅಂತರ್ಯಾಮಿಯಾಗಿರುವ, ಸಮಸ್ತ ಜಗತ್ತಿಗೂ ಮತ್ತು ತಮಗೂ ಸ್ವಾಮಿ ಹಾಗೂ ರಕ್ಷಕ ಆಗಿರುವ, ಪರಮಾತ್ಮನನ್ನು ಭಕ್ತಿಯಿಂದ ಧ್ಯಾನಿಸಿ, ತಮ್ಮ ಮನಸ್ಸನ್ನು ಅವನಿಗೆ ಅಧೀನಮಾಡಿ, ಅವನನ್ನು ನಿರಂತರವಾಗಿ ಭಕ್ತಿಯಿಂದ ಸ್ಮರಿಸುತ್ತಾ, ಅವನಿಗೆ ಶರಣರಾಗಿ, ಭಗವದಾರಾಧನ ರೂಪವಾಗಿ ತಮ್ಮ ಅನುದಿನದ ಕರ್ತವ್ಯ ಕರ್ಮಗಳನ್ನು ಮಾಡುತ್ತಿದ್ದರೆ, ಪರಮಾತ್ಮನೇ ಅಂಥವರನ್ನು ಸನ್ಮಾರ್ಗದಲ್ಲಿ ನಡೆಸುತ್ತಾನೆ ಹಾಗೂ ಉತ್ತಮ ಗತಿಯನ್ನು ನೀಡುತ್ತಾನೆ" ಎಂಬುದನ್ನು ಗೀತಾಚಾರ್ಯ ಹಾಗೂ ಭಾಗವತ ಮತದ ಪ್ರಥಮಾಚಾರ್ಯ ಆದ ಶ್ರೀಕೃಷ್ಣನು ಹೇಳಿ ಭರವಸೆ ಕೊಟ್ಟಿದ್ದಾನೆ.

"ಯಾ ಪ್ರೀತಿ ರವಿವೇಕಾನಾಂ ವಿಷಯೇಷ್ವನಪಾಯಿನೀ ।
ತ್ವಾಮನುಸ್ಮರತಃ ಸಾಮೇ ಹೃದಯಾ ನ್ಮಾಪ ಸರ್ಪತು ॥"

ಎಂದು ನಾವೆಲ್ಲಾ ಪ್ರಾರ್ಥಿಸೋಣ.

## 4. ಪ್ರಪತ್ತಿ ಮಾರ್ಗ

ಚೇತನನಿಗೆ ಭಕ್ತಿಯು ಬಾಹ್ಯ ಕವಚವಾದರೆ ಪ್ರಪತ್ತಿಯು ಆಂತರಿಕ ಕವಚ ವಾಗಿದೆ. ಪರಿಮಿತವಾದ ಪುರುಷಶಕ್ತಿಯು ಕುಗ್ಗಿದಾಗ, ಮಾನವನಿಗೆ ತನ್ನ ಶಕ್ತಿ ಸಾಮರ್ಥ್ಯಗಳಿಂದ ಧ್ಯೇಯಸಾಧನೆ ಆಗದಿದ್ದಾಗ, ತನ್ನಲ್ಲಿರುವ ಅಹಂಕಾರ, ಮಮ ಕಾರಗಳನ್ನು ಬಿಟ್ಟು, ಜಗತ್ತಿನ ಮೂಲ ಕಾರಣನಾದ ಪರಮಾತ್ಮನ ಧ್ಯಾನ, ಜಪ, ಪೂಜೆಗಳಲ್ಲಿ ನಿರತರಾಗಿ, ಆತನ ಶಕ್ತಿಗೆ ಶರಣು ಹೋಗುವುದು ಭಕ್ತರ ಕಾರ್ಯಸಿದ್ಧಿಗೆ ಪರಮೋಪಾಯವಾದುದು. ಆದಕಾರಣ ಮುಕ್ತಿಗೆ ಭಕ್ತಿಯೊಂದೇ ಉಪಾಯವಲ್ಲ; ಶ್ರುತಿ ಸ್ಮೃತಿಗಳೇ ಅಲ್ಲದೆ ಆಳ್ವಾರುಗಳ ಪ್ರಬಂಧದಲ್ಲಿ ಎತ್ತಿಹಿಡಿದಿರುವ ಪ್ರಪತ್ತಿಯೂ ಒಂದು ಮುಖ್ಯ ಸಾಧನ. ಇದಕ್ಕೆ ಆತ್ಮಸಮರ್ಪಣ, ಭರನ್ಯಾಸ, ನ್ಯಾಸ, ಶರಣಾಗತಿ, ಪ್ರಪದನ, ನಿಕ್ಷೇಪ ಎಂಬ ವಿವಿಧ ಹೆಸರುಗಳಿವೆ.

ಭಗವಂತನ ಸಾಕ್ಷಾತ್ಕಾರ ಪಡೆಯಬೇಕೆಂಬ ಪರಮ ಪುರುಷಾರ್ಥ ಸಾಧನೆಗೆ ಉಪಾಯ—ಸಾಧನವಾಗಿ ಭಕ್ತಿಯೋಗವನ್ನು ಆರಂಭಿಸಿದ ಸಾಧಕನಿಗೆ ಭಗವಂತನಲ್ಲಿ ಪ್ರೀತಿಯು ಹೆಚ್ಚಾಗುತ್ತ ಬಂದು ಭಕ್ತಿಯೇ ಐದನೆಯ ಪುರುಷಾರ್ಥವಾಗುತ್ತದೆ. ಭಗವಂತನ ಸ್ಮರಣೆ, ಕೀರ್ತನೆ, ಧ್ಯಾನ, ಕೈಂಕರ್ಯಗಳಲ್ಲಿ ಯಾವಾಗಲೂ ನಿರತ ನಾಗುತ್ತಾನೆ. ತನಗೆ ಆಧಾರ, ರಕ್ಷಕ, ಸ್ವಾಮಿ, ಸರ್ವಸ್ವ ಆದವನು ಭಗವಂತನೇ ಎಂಬ ಜ್ಞಾನವನ್ನು ಪಡೆದ ಆತನು, ತನ್ನ ಮತ್ತು ತನಗೆ ಸೇರಿದ ಎಲ್ಲ ಚೇತನ-ಅಚೇತನ ವ್ಯಕ್ತಿ-ವಸ್ತುಗಳ ರಕ್ಷಣೆಯ ಹೊಣೆಯನ್ನು ಸಂಪೂರ್ಣವಾಗಿ ಭಗವಂತನಿಗೆ ವಹಿಸಿ, ಅವನಿಗೆ ಶರಣು ಹೋಗಿ, ಶಾಂತಿ ಸಮಾಧಾನಗಳಿಂದ ಜೀವಿಸುತ್ತಾನೆ. ಇದು ಶರಣಾಗತಿ ಯೋಗ ಅಥವಾ ಪ್ರಪತ್ತಿಯೋಗ ಎನಿಸುತ್ತದೆ. ಕರ್ಮ, ಜ್ಞಾನ, ಭಕ್ತಿಗಳು, ಪ್ರಪತ್ತಿಯೋಗದ ಅಂಗಗಳು. ಈ ಮೂರರಿಂದ ಮನಸ್ಸು ಪರಿಪಕ್ವವಾಗಿ ಶರಣಾಗತಿಗೆ ಅರ್ಹತೆಯುಂಟಾಗುತ್ತದೆ. ಆದಕಾರಣ ಕರ್ಮ, ಜ್ಞಾನ, ಭಕ್ತಿ ಗಳಿಂದ ಕೂಡಿದ ಶರಣಾಗತಿಯೇ ಅತ್ಯಂತ ಶ್ರೇಷ್ಠವಾದ ಯೋಗ ಸಾಧನೆ.

ಶ್ರೀವೈಷ್ಣವ ಮತಕ್ಕೆ ಪ್ರಪತ್ತಿಯೇ ಅಡಿಗಲ್ಲು. ತನ್ನನ್ನು ರಕ್ಷಿಸಿಕೊಳ್ಳ ಲಾರದ ಜೀವನು ತನ್ನ ಅಲ್ಪತ್ವ ಮತ್ತು ಅಶಕ್ತಿಗಳನ್ನು ಮನಗಂಡು, ತನ್ನ ರಕ್ಷ ಣೆಯ ಹೊಣೆಯನ್ನು ಸರ್ವರಕ್ಷಕನಾದ ಭಗವಂತನ ಮೇಲೆ ಹಾಕಿ ನಿಶ್ಚಿಂತನಾಗಿರು ವುದೇ ಪ್ರಪತ್ತಿಯ ಅರ್ಥ. ರಾಮಾನುಜಾಚಾರ್ಯರ ಶ್ರೀವೈಕುಂಠಗದ್ಯದಲ್ಲಿ **ಪ್ರಪತ್ತಿಯ ವಿಷಯವು** ಸುಂದರವಾಗಿ ಬಂದಿದೆ.—

"ಸ್ವಾಧೀನ ತ್ರಿವಿಧ ಚೇತನಾಚೇತನ ಸ್ವರೂಪ ಸ್ಥಿತಿ ಪ್ರವೃತ್ತಿಭೇದಂ, ಕ್ಲೇಶಕರ್ಮಾದ್ಯಶೇಷ ದೋಷಾ ಸಂಸ್ಪೃಷ್ಟಂ, ಸ್ವಾಭಾವಿಕಾನವಧಿಕಾತಿಶಯಜ್ಞಾನ ಬಲೈಶ್ವರ್ಯ ವೀರ್ಯಶಕ್ತಿತೇಜಃ ಪ್ರಭೃತ್ಯಸಂಖ್ಯೇಯ ಕಲ್ಯಾಣಗುಣಗಣೌಘ ಮಹಾರ್ಣವಂ, ಪರಮಪುರುಷಂ ಭಗವಂತಂ ನಾರಾಯಣಂ ಸ್ವಾಮಿತ್ವೇನ ಸುಹೃ

ತ್ವೇನ ಗುರುತ್ವೇನ ಚ ಪರಿಗೃಹ್ಯ, ಏಕಾಂತಿಕಾತ್ಯಂತಿಕ ತತ್ಪಾದಾಂಬುಜದ್ವಯ ಪರಿಚರ್ಯೈಕ ಮನೋರಥಃ, ತತ್ಪ್ರಾಪ್ತಯೇಚ ತತ್ಪಾದಾಂಬುಜದ್ವಯ ಪ್ರಪತ್ತೇರನ್ಯನ್ನ ಮೇ ಕಲ್ಪಕೋಟಿ ಸಹಸ್ರೇಣಾಪಿ ಮನ್ವಾನಃ ತಸ್ಯೈವ ಭಗವತೋ ನಾರಾಯಣಸ್ಯ ಅಖಿಲ ಸತ್ವದಯೈಕ ಸಾಗರಸ್ಯ, ಅನಾಲೋಚಿತ ಗುಣಾಗುಣಾಖಂಡ ಜನಾನುಕೂಲಾ ಮರ್ಯಾದ ಶೀಲವತಃ, ಸ್ವಾಭಾವಿಕಾನವಧಿಕಾತಿಶಯಗುಣವತ್ತಯಾ ದೇವತಿರ್ಯಕ್ ಮನುಷ್ಯಾದ್ಯಖಿಲ ಜನ ಹೃದಯಾನಂದನಸ್ಯ, ಆಶ್ರಿತ ವಾತ್ಸಲ್ಯೈಕ ಜಲಧೇಃ, ಭಕ್ತಜನ ಸಂಶ್ಲೇಷೈಕ ಭೋಗಸ್ಯ, ನಿತ್ಯಜ್ಞಾನಕ್ರಿಯೈಶ್ವರ್ಯಾದಿ ಭೋಗ ಸಾಮಗ್ರಿ ಸಮೃದ್ಧಸ್ಯ ಮಹಾವಿಭೂತೇಃ, ಶ್ರೀಮತಶ್ಚರಣಾರವಿಂದ ಯುಗಲಮನನ್ಯಾತ್ಮಸಂಜೀವನೇನತದ್ಗತ ಸರ್ವಭಾವೇನ ಶರಣಮನುವ್ರಜೇತ್."

**ಪ್ರಪತ್ತಿಯ ಅರ್ಥ**ವನ್ನು ಕೆಳಗಿನ ಶ್ಲೋಕಗಳು ಈ ರೀತಿ ವಿವರಿಸುತ್ತವೆ:—

೧. ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾ ವಿಶ್ವಾಸಪೂರ್ವಕಂ ।
ತದೇಕೋಪಾಯ ತಾಯೋಂಚಾ ಪ್ರವೃತ್ತಿಃ ಶರಣಾಗತಿಃ ॥

ಅಂದರೆ ತನ್ನ ಇಷ್ಟಸಿದ್ಧಿಯು ಬೇರಾವುದರಿಂದಲೂ ಆಗದ ಪಕ್ಷದಲ್ಲಿ, ದೃಢವಿಶ್ವಾಸದಿಂದ ಭಗವಂತನನ್ನೇ ನಂಬಿ ಅವನಲ್ಲಿ ಬೇಡಿಕೆಯನ್ನು ಮಂಡಿಸುವುದೇ ಪ್ರಪತ್ತಿ ಅಥವಾ ಶರಣಾಗತಿ.

೨. ನಿಶ್ಚಿತೇಽನನ್ಯಸಾಧ್ಯತ್ವೇ ಪರಶ್ರೇಷ್ಠಸ್ಯ ಸಾಧನೇ ।
ಅಯಮಾತ್ಮಾಭರನ್ಯಾಸಃ ಪ್ರಪತ್ತಿರಿತಿಗೀಯತೇ ॥

ಅಂದರೆ ಶ್ರೇಷ್ಠವಾದ ಪದವಿ ಎನಿಸಿದ ಮೋಕ್ಷವು ಬೇರಾವುದರಿಂದಲೂ ಸಾಧ್ಯವಾಗದು ಎಂದು ನಿಶ್ಚಯಿಸಿ, ತನ್ನನ್ನು ಪರಮಾತ್ಮನಿಗೆ ಅರ್ಪಿಸಿಕೊಳ್ಳುವುದೇ ಭರನ್ಯಾಸ ಅಥವಾ ಪ್ರಪತ್ತಿ.

೩. ಅಹಮಸ್ಮ್ಯಪರಾಧಾನಾಂ ಆಲಯೋಽಕಿಂಚನೋಽಗತಿಃ ।
ತಮೇವೋಪಾಯ ಭೂತೋಮೇ ಭವತಿ ಪ್ರಾರ್ಥನಾಮತಿಃ ।
ಶರಣಾಗತಿರಿತ್ಯುಕ್ತಾ ಸಾ ದೇವೇಽಸ್ಮಿನ್ ಪ್ರಯುಜ್ಯತಾಂ ।

ಅಂದರೆ "ನಾನು ಸಕಲ ಅಪರಾಧಗಳ ಗಣಿ, ಅಶಕ್ತ ಹಾಗೂ ಬೇರೆ ಗತಿ ಇಲ್ಲದವ, ನೀನೇ ನನಗೆ ಗತಿಯಾಗಬೇಕು" ಎಂದು ನಿಷ್ಕಪಟ ಭಾವನೆಯೊಡನೆ ಪರಮಾತ್ಮನಲ್ಲಿ ಪ್ರಾರ್ಥಿಸುವುದೇ ಶರಣಾಗತಿ.

೪. ತಸ್ಮಾನ್ನ್ಯಾಸಮೇಷಾಂ ತಪಸಾ ಮತಿರಿಕ್ತಮಾಹುಃ ।

ಅಂದರೆ ಎಲ್ಲ ವಿಧವಾದ ತಪಸ್ಸುಗಳಿಗಿಂತಲೂ ಶ್ರೇಷ್ಠವಾದುದು ನ್ಯಾಸ ಎಂದು ಹೇಳಲ್ಪಟ್ಟಿದೆ.

ಶರಣಾಗತಿಯನ್ನು ಸಾರುವ ದಿವ್ಯವಾದ ದ್ವಯ ಮಂತ್ರವನ್ನು ರಾಮಾನುಜರ ಶಿಷ್ಯರು ಯಾವಾಗಲೂ ಜಪಿಸುತ್ತಿದ್ದುದು ಈ ಕಾರಣದಿಂದಲೇ.

ಚೇತನರಿಗೆ ಜ್ಞಾನಮಾರ್ಗವು ಕಷ್ಟ, ಕರ್ಮಮಾರ್ಗವು ಸುಲಭ, ಆದರೆ ಭಕ್ತಿಮಾರ್ಗವು ಅತಿ ಸುಲಭ, ಇವೆಲ್ಲಕ್ಕಿಂತಲೂ ಸುಲಭ, ಸರಳ, ಶ್ರೇಷ್ಠ ಆದುದು ಪ್ರಪತ್ತಿಮಾರ್ಗ.

ಉಪಾಸನೆಮಾಡಲು ಶಾಸ್ತ್ರಾಧಿಕಾರವಿಲ್ಲದವರು, ಶಾಸ್ತ್ರಜ್ಞಾನವಿಲ್ಲದವರು, ಭಕ್ತಿಯೋಗವನ್ನು ಅನುಷ್ಠಿಸಲು ಶಕ್ತಿ ಇಲ್ಲದವರು, ಭಗವಂತನ ಪ್ರಾಪ್ತಿಗೆ ಆಗುವ ವಿಳಂಬವನ್ನು ಸಹಿಸದ ಆತುರುಗಾರರು–ಪ್ರಪತ್ತಿಗೆ ಅಧಿಕಾರ ಪಡೆದವರು.

ಪಾಪದ ನಾಶಕ್ಕೆ, ಸಂಸಾರ ಬಂಧನದಿಂದ ಬಿಡುಗಡೆಗೆ, ಮೋಕ್ಷಸಾಧನೆಗೆ ಅವಶ್ಯಕವಾದ ವೇದೋಪನಿಷತ್ತುಗಳನ್ನು ಓದಲಾರದ ಅವಿದ್ಯಾವಂತರು, ಓದ ಬಾರದು ಎನ್ನುವ ಕೀಳು ಕುಲದವರೆನಿಸಿದವರು, ಶಾಸ್ತ್ರೋಕ್ತವಾದ ಕರ್ಮ ಕರ್ತವ್ಯ ಗಳನ್ನು ಮಾಡಲಾರದ ದುರ್ಬಲರು, ಬಡವರು, ಸ್ತ್ರೀಯರು, ತಾಳ್ಮೆಯಿಂದ ಹೆಚ್ಚು ಕಾಲ ಕಾಯಲಾರದವರು–ಈ ಎಲ್ಲ ರೀತಿಯ ಜನರೂ ಪರಮಾತ್ಮನೇ ಸಾಧನವೆಂದು ಭಾವಿಸಿ ಆತನೆಡೆಗೇ ತಮ್ಮ ಮನಸ್ಸನ್ನು ತಿರುಗಿಸಬೇಕು. ಎಲ್ಲ ವ್ಯಕ್ತಿ ವಸ್ತುಗಳೂ ಭಗವಂತನ ಆಳ್ವಿಕೆಗೊಳಪಟ್ಟು ಅವನ ನಿಯಮಗಳಿಗೆ ಅಧೀನವಾಗಿವೆ ಎಂದು ನಂಬಿ, ಅವನಲ್ಲಿ ಪೂರ್ಣವಾಗಿ ಆತ್ಮಸಮರ್ಪಣೆಮಾಡಿ ಶರಣುಹೋಗಬೇಕು. ಈ ಆತ್ಮಾ ರ್ಪಣೆಯಲ್ಲಿನ ಮೂರು ಅಂಶಗಳಾದ ಪರಭಕ್ತಿ, ಪರಜ್ಞಾನ, ಪರಮ ಭಕ್ತಿಗಳು ಮೊದಲ ಪೊಯಗೈ, ಪೂದತ್ತ, ಪೇಯ್ ಆಳ್ವಾರುಗಳಿಂದ ಪ್ರತಿನಿಧಿತವಾಗಿವೆ ಎಂದು ನಂಬಲಾಗಿದೆ.

ಜೀವಾತ್ಮ–ಪರಮಾತ್ಮರಲ್ಲಿ ಮಧ್ಯಸ್ಥಿಕೆಯನ್ನು ವಹಿಸುವ, ದೇವ-ಮಾನವ ರಲ್ಲಿ ನಿಕಟವಾದ ಸಂಬಂಧವನ್ನು ಕಲ್ಪಿಸುವ, ತಪ್ಪಿತಸ್ಥರಾದ ಜೀವಾತ್ಮರಿಗೆ ಭಗ ವಂತನ ಕ್ಷಮೆಯನ್ನು ಕೊಡಿಸುವ, ದಯಾಮಯಿ–ತಾಯಿ–ಗುರು ಆಗಿರುವ ಶ್ರೀ ಮಹಾಲಕ್ಷ್ಮಿಯ ಬಳಿಗೆ, ತನ್ನನ್ನು ಕರೆದು ಒಯ್ಯುವಂತಹ ಶಕ್ತಿ–ಸಾಮರ್ಥ್ಯ ಗಳನ್ನು ಹೊಂದಿರುವ ಆಚಾರ್ಯನಿಗಾಗಿ ಪ್ರಪನ್ನನು ಹಂಬಲಿಸಬೇಕು ಹಾಗೂ ಮೊರೆ ಯಿಡಬೇಕು. ಇಂತಹ ಸಮಯಕ್ಕಾಗಿಯೇ ಕಾಯುತ್ತಿರುವ ಭಗವಂತನು ಇದರಿಂದ ಸಂತುಷ್ಟನಾಗಿ ಜೀವಿಗೆ ಒಬ್ಬ ಯೋಗ್ಯ ಗುರುವನ್ನು ಕರುಣಿಸಿ, ಅವನ ಪಾಪ ಮತ್ತು ನ್ಯೂನತೆಗಳನ್ನು ಕ್ಷಮಿಸಿ, ಅವನು ಆಶಿಸಿದ ಮೋಕ್ಷವನ್ನು ಕರುಣಿಸುತ್ತಾನೆ.

ಪರಮಾತ್ಮನಿಗೆ ತನ್ನನ್ನು ಪೂರ್ಣವಾಗಿ ಒಪ್ಪಿಸಿಬಿಡುವ ಈ ಪ್ರಪತ್ತಿ ಅಥವಾ ಶರಣಾಗತಿಗೆ ವರ್ಣಾಶ್ರಮದ ಅಧಿಕಾರಗಳ ಅವಶ್ಯಕತೆ ಇರುವುದಿಲ್ಲ. ಪಂಡಿತ ಪಾಮರ, ಬಾಲವೃದ್ಧ, ಉಚ್ಚನೀಚ, ಬಡವ ಬಲ್ಲಿದ, ಸ್ತ್ರೀ ಪುರುಷ–ಎಲ್ಲರಿಗೂ ಸರಿಸಮನಾದ ಮಾರ್ಗವಿದು. ಜೊತೆಗೆ ಕಾಲ ದೇಶ ಅವಸ್ಥಾ ಭೇದಗಳೂ ಇದಕ್ಕೆ ಇರುವುದಿಲ್ಲ. ಕೂದಲೆಳೆಯಷ್ಟಿರುವ ಸೇತುವೆಯ ಮೇಲೆ ಬೆಂಕಿಯ ಗುಡಾಣವನ್ನು ದಾಟುವಂತಿರುವ ಸ್ಥಿತಿಯಾದ ಭಕ್ತಿಯು ಬಹು ಕಷ್ಟಕರವಾದುದು. ಭಕ್ತಿಯಿಂದ

ಮಾಡುವ ಧ್ಯಾನಕ್ಕೆ ವ್ಯಕ್ತಿಯ ಪ್ರಯತ್ನ ಹೆಚ್ಚಾಗಿರಬೇಕು. ಅಲ್ಲದೆ ಅದು ವಿಧಾಯಕ ರೀತಿಯಲ್ಲಿರಬೇಕು. ಭಕ್ತಿಯು ಸರಿಯಾಗಿಲ್ಲದಿದ್ದಾಗ ಅಂತಹ ಭಕ್ತರನ್ನು ಪರಮಾತ್ಮನು ಹತ್ತಿರ ಸೇರಿಸದೆ ದೂರ ತಳ್ಳಿಬಿಡಬಹುದು. ಆದರೆ ಯಾವುದನ್ನೂ ತನ್ನದೆಂದು ಉಳಿಸಿಕೊಳ್ಳದೆ, ಎಲ್ಲವನ್ನೂ ಪರಮಾತ್ಮನ ಪಾದಾರವಿಂದಗಳಲ್ಲಿ ಅರ್ಪಿಸಿ ನಂಬಿದರೆ, ಅಂತಹವರನ್ನು ಅವನು ಎಂದಿಗೂ ಕೈಬಿಡುವುದಿಲ್ಲ ಎಂದು ದೃಢವಾಗಿ ನಂಬಿ, ಮಹಾ ವಿಶ್ವಾಸದಿಂದ ಮಾಡಿದ ಪ್ರಪತ್ತಿಯಲ್ಲಿ ಪರಮಾತ್ಮನು ಯಾರನ್ನೂ ದೂರತಳ್ಳಲಾರ ಎಂಬುದಂತೂ ದಿಟ.

ಶರಣಾಗತರನ್ನು ಕೈಬಿಡದೆ ರಕ್ಷಿಸುವೆನೆಂದು **ಭಗವಂತನು ಪ್ರತಿಜ್ಞೆ** ಮಾಡಿರುವನೆಂಬುದು ಈ ಚರಮ ಶ್ಲೋಕಗಳಿಂದ ತಿಳಿದು ಬರುತ್ತದೆ.

೧. ಸ್ಥಿತೇ ಮನಸಿಸುಸ್ವಸ್ಥೇ ಶರೀರೇ ಸತಿಯೋನರಃ ।
ಧಾತುಸಾಮ್ಯೇ ಸ್ಥಿತೇ ಸ್ಮರ್ತಾವಿಶ್ವರೂಪಂಚಮಾಮಜಂ ॥
ತತಸ್ತಮ್ರಿಯಮಾಣಂತು ಕಾಷ್ಠ ಪಾಷಾಣ ಸನ್ನಿಭಂ ।
ಅಹಂಸ್ಮರಾಮಿಮದ್ಭಕ್ತಂ ನಯಾಮಿ ಪರಮಾಂ ಗತಿಂ ॥

ಎಂದು ವರಾಹಾವತಾರದಲ್ಲಿ ಲಕ್ಷ್ಮಿಗೆ ಹೇಳಿದ್ದಾನೆ.

೨. ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥

ಎಂದು ರಾಮಾವತಾರದಲ್ಲಿ ಸುಗ್ರೀವನಿಗೆ ಹೇಳಿದ್ದಾನೆ.

೩. ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂವ್ರಜ ।
ಅಹಂತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥

ಎಂದು ಕೃಷ್ಣಾವತಾರದಲ್ಲಿ ಅರ್ಜುನನಿಗೆ ಹೇಳಿದ್ದಾನೆ.

ಈ ಕಾರಣದಿಂದ ಭಗವಂತನ ವಾಕ್ಯವು ಸುಳ್ಳಾಗಲಾರದು ಎಂಬ ದೃಢ ವಿಶ್ವಾಸದಿಂದ ಅವನನ್ನು ಶರಣು ಹೋಗುವುದು ಹಿತವಾದುದು.

"ಪಿತರಂ ಮಾತರಂ ದಾರಾನ್ ಪುತ್ರಾನ್ ಬಂಧೂನ್ ಸಖೀನ್ ಗುರೂನ್ ।
ರತ್ನಾನಿ ಧನಧಾನ್ಯಾನಿ ಕ್ಷೇತ್ರಾಣಿ ಚ ಗೃಹಾಣಿ ಚ ॥
ಸರ್ವ ಧರ್ಮಾಂಶ್ಚ ಸಂತ್ಯಜ್ಯ ಸರ್ವಕಾಮಾಂಶ್ಚ ಸಾಕ್ಷರಾನ್ ।
ಲೋಕವಿಕ್ರಾಂತ ಚರಣೌ ಶರಣಂ ತೇ ವ್ರಜಂವಿಭೋ" ॥

ಎಂಬಂತೆ ಶರಣಾಗತಿಯನ್ನು ಮಾಡಲಿಚ್ಛಿಸುವವರು ಎಲ್ಲವನ್ನೂ ತ್ಯಜಿಸಬೇಕಾಗುತ್ತದೆ.

ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಂ ।
ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವೇ ವರಣಂ ತಥಾ ॥
ಆತ್ಮನಿಕ್ಷೇಪಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ
ಸ್ವತಂತ್ರಾತು ಸಮಸ್ತಾರ್ಥಾಂ ಕಾಷ್ಠೋದ್ಯತ್ವಾಪರತಂತ್ರಗಾ ॥"

ಎಂಬಂತೆ ಭಗವಂತನಿಗೆ ತನ್ನನ್ನು ಅರ್ಪಿಸಿಕೊಳ್ಳಲು ಯೋಗ್ಯವಾದ ಒಳ್ಳೆಯ ಗುಣ ಗಳನ್ನು ಸಂಪಾದಿಸಿ ಭಗವದಭಿಪ್ರಾಯಕ್ಕೆ ಅನುಕೂಲನಾಗಿರುವುದು; ಅದಕ್ಕೆ ಪ್ರತಿಕೂಲವಾದ ದುರ್ಗುಣಗಳನ್ನು ತ್ಯಜಿಸಿ ಭಗವದಿಚ್ಛೆಗೆ ವಿರೋಧವಾಗಿ ಹೋಗದಿರು ವುದು; ಶರಣಾಗತರನ್ನು ರಕ್ಷಿಸಿಯೇ ತೀರುತ್ತಾನೆ ಎಂಬ ಪೂರ್ಣ ವಿಶ್ವಾಸವನ್ನು ಹೊಂದಿ, ತಾನು ಭಗವಂತನ ರಕ್ಷಣೆಯನ್ನು ಪಡೆದಿದ್ದೇನೆ ಎಂದು ನಂಬಿರುವುದು; ಸರ್ವಲೋಕ ಶರಣ್ಯನಾದ ಭಗವಂತನೊಬ್ಬನೇ ಗತಿ ಎಂಬ ಮನೋನಿಶ್ಚಯವನ್ನು ಹೊಂದಿ, ತಮ್ಮ ಒಳಭಾವವನ್ನು ಗೋಪಿಕಾಸ್ತ್ರೀಯರಂತೆ ಪರಮಾತ್ಮನ ಮುಂದೆ ವರ್ಣಿ ಸುವುದು; ತನ್ನ ಅಲ್ಪತೆ, ಅಶಕ್ತಿಗಳನ್ನು ಪ್ರಕಟಿಸಿ, ಅಹಂಕಾರವನ್ನು ತೊರೆದು, ತಾನು ಮಾಡಿದ ಅಪರಾಧಗಳೆಲ್ಲವನ್ನೂ ನಿಷ್ಕಾಪಟ್ಯದಿಂದ ಭಗವಂತನಲ್ಲಿ ನಿವೇದಿಸಿ ಕೊಳ್ಳುವುದು; ಭಗವಂತನಲ್ಲಿ ಆತ್ಮವನ್ನು ಸಂಪೂರ್ಣವಾಗಿ ಒಪ್ಪಿಸಿ ನಿಶ್ಚಿಂತ ನಾಗಿರುವದು—ಇವು **ಪ್ರಪತ್ತಿಯ ಆರು** ಮುಖ್ಯ **ಅಂಗಗಳು.** ಇದನ್ನು ಮೊದಲು ಒತ್ತಿ ಹೇಳಿದವರು ಕುಲಶೇಖರಾಳ್ವಾರ್.

**ಪ್ರಪತ್ತಿಯ ಅನುಷ್ಠಾನವು ಮೂರು** ಬಗೆಯಾಗಿದೆ. ಪ್ರಪತ್ತಿಯ ಸ್ವರೂಪ ಹಾಗೂ ಅದನ್ನು ಅನುಷ್ಠಾನಮಾಡುವ ವಿಧಾನಗಳನ್ನು ಚೆನ್ನಾಗಿ ಅರಿತು ತಾನೇ ಶರಣುಹೋಗುವುದು ಸ್ವನಿಷ್ಠೆ; ಭಗವಂತನಲ್ಲಿ ಭಕ್ತಿ–ವಿಶ್ವಾಸಗಳನ್ನು ಹೊಂದಿದ್ದು, ಆಚಾರ್ಯರೊಬ್ಬರ ಉಪದೇಶ ವಾಕ್ಯಗಳ ಮೂಲಕ ಶರಣು ಹೋಗು ವುದು ಉಕ್ತಿನಿಷ್ಠೆ; ತನಗಾಗಿ ಆಚಾರ್ಯನೇ ಶರಣಾಗತಿಮಾಡುವುದು ಆಚಾರ್ಯ ನಿಷ್ಠೆ; ಈ ಮೂರು ಪದ್ಧತಿಗಳಲ್ಲಿ ಯಾವುದನ್ನು ಬೇಕಾದರೂ ಅನುಸರಿಸಬಹುದು.

ಆತ್ಮ ಸ್ವರೂಪ, ರಕ್ಷಣೆಯ ಹೊಣೆ, ರಕ್ಷಣೆಯಿಂದ ಬರುವ ಫಲ ಎಲ್ಲವನ್ನೂ ಪರಮಾತ್ಮನಿಗೇ ಅರ್ಪಿಸುವುದು **ಪ್ರಪತ್ತಿಯ ಮೂರು ಅಂಶ**ಗಳು.

ಉಪದೇಶಿಸಿದ ಅರ್ಥದಂತೆ ಅನುಷ್ಠಾನ ಮಾಡಲಾರದ ಭಾಗ್ಯಹೀನರಿಗೆ, ಉಪ ದೇಶಮಾಡುವ ಆಚಾರ್ಯನ ವಿಷಯದಲ್ಲಿ ನಿಷ್ಠೆ ಇಲ್ಲದವರಿಗೆ, ಗುರು ಶುಶ್ರೂಷೆ ಮಾಡದವರಿಗೆ, ಭಗವಂತನಲ್ಲಿ ಪ್ರೀತಿ ವಿಶ್ವಾಸಗಳು ಇಲ್ಲದವರಿಗೆ–ಪ್ರಪತ್ತಿ ಶಾಸ್ತ್ರದ ರಹಸ್ಯಾರ್ಥಗಳನ್ನು ಹೇಳಬಾರದು ಎಂಬುದು ಅನೂಚಾನವಾಗಿ ಬಂದಿರುವ ಸಂಪ್ರ ದಾಯ. ಏಕೆಂದರೆ ಇವರು **ಪ್ರಪತ್ತಿಗೆ ಅನರ್ಹರು.**

ಹೀಗೆ ಶ್ರುತಿ ಸ್ಮೃತಿ ಪ್ರಬಂಧಗಳು ಉಪದೇಶಿಸಿರುವ ಪ್ರಪತ್ತಿಯ ಅನುಷ್ಠಾನ ವನ್ನು ನಾಥಮುನಿ, ಯಾಮುನಮುನಿ, ರಾಮಾನುಜಮುನಿ ಎಂಬ ಮುನಿತ್ರಯರು ಪ್ರಮುಖವಾದ ಉಪಾಯವೆಂದು ಹೇಳಿದ್ದಾರೆ. ಪ್ರಪತ್ತಿಯ ಸ್ವರೂಪ, ಪರಿಕರ, ಅನುಷ್ಠಾನಕ್ರಮ ಮೊದಲಾದವುಗಳ ಬಗೆಗೆ ಅನೇಕ ಆಚಾರ್ಯರು ವಿಚಾರ ಮಾಡಿ ದ್ದರೂ, ಈ ಉಪಾಯದ ನಿಷ್ಕರ್ಷೆಯನ್ನು ನಿರ್ಧರವಾಗಿಮಾಡಿ, ಸಂದೇಹಕ್ಕೆ ಅವ ಕಾಶವಿಲ್ಲದಂತೆ ಉಪಕರಿಸಿರುವವರು ವೇದಾಂತದೇಶಿಕರು.

ಶರಣಾಗತಿಯನ್ನು ಮಾಡದವನಿಗೆ ಪರಮಾತ್ಮನು ಪರಮ ಪದವನ್ನು ಕೊಡನು. ಶರಣಾಗತನಿಗೆ ಮುಕ್ತಿಯು ನಿಧಾನವಾಗಿ ಬಂದರೆ ಈ ಲೋಕದಲ್ಲೇ ಭಗವದನುಭವದ ಆನಂದವು ಹೆಚ್ಚಾಗಿರುತ್ತದೆ ; ಮೋಕ್ಷಫಲವು ಬೇಗ ದೊರೆತರೆ ಇಲ್ಲಿನ ಜೀವಿತ ಕಾಲದಲ್ಲಿ ಭಗವದನುಭವ ಸುಖವು ಅತ್ಯಲ್ಪವಾಗಿರುತ್ತದೆ. ಸಮಸ್ತ ಮಾನವ ಕೋಟಿಯು ಈ ಮುಕ್ತಿ ಘಂಟಾಪಥವನ್ನು ಆಶ್ರಯಿಸಿ ತಮ್ಮ ಉದ್ಧಾರ ಮಾರ್ಗವನ್ನು ಕಂಡುಕೊಳ್ಳಬಹುದು.

ಮುಖ್ಯವಾಗಿ ಪ್ರಪತ್ತಿಯನ್ನು ಮಾಡಿದ ಪ್ರಪನ್ನನು ನಿಶ್ಚಿಂತನಾಗಿ ಅಲ್ಲಿಂದಾ ಚೆಗೆ ತಾನು ಮಾಡುವ ಕೆಲಸಗಳಲ್ಲಿ ಸ್ವಾರ್ಥ, ಸ್ವಪ್ರಯತ್ನಗಳನ್ನು ಬಿಟ್ಟು, ಎಲ್ಲವೂ ಪರಮಾತ್ಮನದು ಎಂದು ತಿಳಿಯಬೇಕು. ಅಜ್ಞಾನ, ಅಶ್ರದ್ಧೆ, ಸಂದೇಹಗಳಿಗೆ ಆಸ್ಪದ, ಕೊಡದೆ ನಿರ್ಮಲ ಮನಸ್ಸಿನಿಂದ ಸ್ವಾಮಿಯಾದ ಭಗವಂತನನ್ನು ಧ್ಯಾನಿ ಸುತ್ತ, ಕಣ್ಣಿನಿಂದ ನೋಡಿದುದೆಲ್ಲವೂ ಭಗವತ್ಪ್ರಕಾಶವೆಂದು ಭಾವಿಸುತ್ತ, ಕೈಗಳಿಂದ ಮಾಡಬೇಕಾದುದೆಲ್ಲವನ್ನೂ ಭಗವಂತನ ಸೇವೆ, ಕೈಂಕರ್ಯವೆಂದೇ ತಿಳಿದು ನಿಷ್ಕಾಮ ಭಾವನೆಯಿಂದ ಮಾಡುತ್ತ, ಭಗವದನುಗ್ರಹದಿಂದ ಪಡೆದ ಸುಖ ಶಾಂತಿ ಸಮಾಧಾನ ಗಳನ್ನು ಅನುಭವಿಸುತ್ತ, ಮುಕ್ತರಿಗೆ ಸಮನಾಗಿದ್ದು, ಜನ್ಮವನ್ನು ಸಾರ್ಥಕವಡಿಸಿ ಕೊಳ್ಳಬೇಕು.

## 5. ಆಚಾರ್ಯಾಭಿಮಾನ

ದಾರಿತಪ್ಪಿ ಅಡ್ಡಹಾದಿ ಹಿಡಿಯದಂತಾಗಲು, ಪ್ರತಿಯೊಬ್ಬರಿಗೂ ಒಬ್ಬ ಮಾರ್ಗ ದರ್ಶಕನ ಅವಶ್ಯಕತೆ ಇರುತ್ತದೆ. ಅಂಥವರು ದೊರೆತರೆ ಸಂಸಾರ ಬಂಧನದಿಂದ ಬೇಗ ಪಾರಾಗಲು ಅನುಕೂಲವಾಗುತ್ತದೆ. ಆಧ್ಯಾತ್ಮಿಕ ಪರಿಪೂರ್ಣತೆ ಹಾಗೂ ಪರಮಾತ್ಮನ ಅರಿವು ಪಡೆಯಬೇಕು ಎನ್ನುವ ಜೀವಿಯ ಪ್ರಯತ್ನದಲ್ಲಿ ಗುರು ಅಥವಾ ಆಚಾರ್ಯನ ಪಾತ್ರ ಬಹು ಹಿರಿದು. ಸಿದ್ಧಾಂತ ಮತ್ತು ನಂಬಿಕೆಗಳ ಸಂಮಿಲನವಾದ ವಿಶಿಷ್ಟಾ ದ್ವೈತವು ಆಚಾರ್ಯಾಭಿಮಾನವನ್ನು ಹೊಂದಿರಲು ತನ್ನ ಅನುಯಾಯಿಗಳಿಗೆ ಪ್ರೋತ್ಸಾಹನೀಡುತ್ತದೆ.

ಗುರು, ಆಚಾರ್ಯ ಎಂದರೇನು ? ಅವರಿಂದ ಚೇತನರಿಗೆ ಏನು ಉಪಕಾರ ಆಗುತ್ತದೆ ? ಎಂಬುದು ಈ ಶ್ಲೋಕಗಳಿಂದ ತಿಳಿದುಬರುತ್ತದೆ.

ಗು ಶಬ್ದಸ್ತ್ವಂಧಕಾರಸ್ಯಾತ್ ರು ಶಬ್ದ ಸ್ತನ್ನಿರೋಧಕಃ ।
ಅಂಧಕಾರ ನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥ ೧ ॥

ಯಥಾಗುರುಸ್ತಥೈವೇಶೋ ಯಥೈವೇಶಸ್ತಥಾಗುರುಃ ।
ಪೂಜನೀಯೋ ಮಹಾ ಭಕ್ತ್ಯಾ ನ ಭೇದೋ ವಿದ್ಯತೇಽನಯೋಃ ॥ ೨ ॥

ಆಚಾರ್ಯಸ್ಸಹರಿಸ್ಸಾಕ್ಷಾ ಚ್ಚರರೂಪೀ ನ ಸಂಶಯಃ ।
ಮಗ್ನಾನುದ್ಧರತೇ ಲೋಕಾನ್ ಕಾರುಣ್ಯಾ ಚ್ಛಾಸ್ತ್ರವಾಣಿನಾ ॥ ೩ ॥
ಆಚಿನೋತಿಹಿ ಶಾಸ್ತ್ರಾರ್ಥಾನ್ ಆಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ಮಾತ್ತಸ್ಮಾದಾಚಾರ್ಯ ಉಚ್ಯತೇ ॥ ೪ ॥
ಆಚಾರ್ಯೋ ವೇದಸಂಪನ್ನೋ ವಿಷ್ಣುಭಕ್ತೋ ವಿಮತ್ಸರಃ ।
ಮಂತ್ರಜ್ಞೋ ಮಂತ್ರಭಕ್ತಶ್ಚ ಸದಾಮಂತ್ರಾಶ್ರಯಶ್ಶುಚಿಃ ॥
ಗುರುಭಕ್ತಿ ಸಮಾಯುಕ್ತಃ ಪುರಾಣಜ್ಞೋ ವಿಶೇಷತಃ ।
ಏವಂ ಲಕ್ಷಣ ಸಂಪನ್ನೋ ಗುರುರಿತ್ಯಭಿಧೀಯತೇ ॥ ೫ ॥
ಸಿದ್ಧಂ ಸತ್ಸಂಪ್ರದಾಯೇ ಸ್ಥಿರಧಿಯ ಮನಘಂ ಶ್ರೋತ್ರಿಯಂ ಬ್ರಹ್ಮನಿಷ್ಠಂ
ಸತ್ವಸ್ಥಂ ಸತ್ಯವಾಚಂ ಸಮಯನಿಯತಯಾ ಸಾಧುವೃತ್ತ್ಯಾಸಮೇತಂ ॥
ಡಂಭಾಸೂಯಾದಿಮುಕ್ತಂ ಜಿತ ವಿಷಯಗಣಂ ದೀರ್ಘ ಬಂಧುಂ ದಯಾಳುಂ
ಸ್ಖಾಲಿತ್ಯೇಶಾಸಿತಾರಂ ಸ್ವಪರಹಿತಪರಂದೇಶಿಕಂ ಭೂಷ್ಣುರೀಪ್ಸೇತ್ ॥ ೬ ॥
ಯಥಾಜಾತ್ಯಂಧಸ್ಯ ಸ್ವರೂಪಜ್ಞಾನಂ ನ ವಿದ್ಯತೇ ।
ತಥಾ ಗುರೂಪದೇಶೇನವಿನಾ ತತ್ತ್ವ ಜ್ಞಾನಂ ನ ಜಾಯತೇ ॥ ೭ ॥
ದುರ್ಲಭೋ ವಿಷಯತ್ಯಾಗೋ ದುರ್ಲಭಂ ತತ್ತ್ವದರ್ಶನಂ ।
ದುರ್ಲಭಾ ಸಹಜಾವಸ್ಥಾ ಸದ್ಗುರೋಃ ಕರುಣಾಂ ವಿನಾ ॥ ೮ ॥
ದಿವ್ಯಜ್ಞಾನೋಪದೇಷ್ಟಾರಂ ದೇಶಿಕಂ ಪರಮೇಶ್ವರಂ ।
ಪೂಜಯೇತ್ಪರಯಾ ಭಕ್ತ್ಯಾ ತಸ್ಯಜ್ಞಾನ ಫಲಂ ಲಭೇತ್ ॥ ೯ ॥
ಆಪಾದಮೌಳಿ ಪರ್ಯಂತಂ ಗುರೂಣಾ ಮಾಕೃತಿಂ ಸ್ಮರೇತ್ ।
ತೇನವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿಚ ಮನೋರಥಾಃ ॥ ೧೦ ॥

ಭಕ್ತರನ್ನು ದೇವರ ಬಳಿಗೆ ಕರೆದೊಯ್ಯಲು ಸಮರ್ಥನಾಗಿರುವ, ದೈವ ಸಾಕ್ಷಾತ್ಕಾರವನ್ನು ಹೊಂದಿದ, ಮಾನವನು ಗುರು ; ಭಕ್ತನಲ್ಲಿರುವ ಅಜ್ಞಾನದ ಅಂಧಕಾರವನ್ನು ತನ್ನ ಜ್ಞಾನಾನುಷ್ಠಾನವೆಂಬ ಜ್ಯೋತಿಯಿಂದ ಹೋಗಲಾಡಿಸಿ, ಅವನಿಗೆ ದೇವರನ್ನು ತೋರಿಸುವವನು ಗುರು ; ಕರ್ಮನಿಷ್ಠ, ಮತಗ್ರಂಥಗಳನ್ನು ಅನುಸಂಧಾನ ಮಾಡುವವ, ಸತ್ಯವಚನವುಳ್ಳವ, ಸಾತ್ವಿಕ ಗುಣ ಪರಿಪೂರ್ಣ, ಸಾಧುವೃತ್ತಿಯುವ, ಭೂತಹಿತರತ, ವಿಷಯಾಸಕ್ತರಹಿತ, ಪರಮಾತ್ಮನಲ್ಲಿಯೇ ಪರಿಪೂರ್ಣವಾಗಿ ನಟ್ಟ ಮನಸ್ಸುಳ್ಳವ, ಭಗವದಪಚಾರ–ಭಾಗವತಾಪಚಾರಗಳಿಂದ ದೂರವಾಗಿರುವವ, ಆಚಾರ್ಯ.

ಸದಾಚಾರಿ, ಯೋಗ್ಯ, ಅನುಭವಿ, ದೈವಕಾರುಣ್ಯವನ್ನು ಪಡೆದ ಪುನೀತ, ಆಗಿರುವ ಗುರುವು, ಭಕ್ತ ಅಥವಾ ಶಿಷ್ಯನಿಗೆ ನಿಜವಾದ ದಾರಿಯನ್ನು ತೋರಿಸಬಲ್ಲ. ಯಾರು ಸಕಲ ಶಾಸ್ತ್ರಗಳ ಅರ್ಥವನ್ನು ಸರಿಯಾಗಿ ತಿಳಿದುಕೊಂಡು ಸಾರಸಂಗ್ರಹ

ಮಾಡಿ, ತಾವು ಕಲಿತ ವಿದ್ಯೆಯು ಮಾನವ ಸಮುದಾಯದ ಕಲ್ಯಾಣಕ್ಕಾಗಿ ಆಗಲಿ ಎಂಬ ಸದುದ್ದೇಶದಿಂದ, ಶಿಷ್ಯರಿಗೆ ಸುಲಭವಾದ ತಂತ್ರದಿಂದ ಬೋಧಿಸುವರೋ ; ಯಾರು ತನ್ನನ್ನು ಆಶ್ರಯಿಸಿದ ಶಿಷ್ಯರಿಗೆ ಮಾತ್ರ ಬೋಧಿಸುವುದರಿಂದ ತೃಪ್ತರಾಗದೆ, ಲೌಕಿಕರಿಗೂ ಉಪದೇಶಿಸಿ ಅವರನ್ನು ಸರಿಯಾದ ದಾರಿಗೆ ಎಳೆದು ಸದಾಚಾರದಲ್ಲಿ ನೆಲೆಗೊಳಿಸುವರೋ ; ಪರರಿಗೆ ಉಪದೇಶ ಮಾಡುವುದು ಸುಲಭವಾದರೂ ತಾವು ಸ್ವತಃ ಆಚರಿಸಿ ತೋರಿಸುವುದು ಕಷ್ಟವಾದುದರಿಂದ, ಯಾರು ತಮ್ಮ ನಡೆನುಡಿಗಳಲ್ಲಿ ತಾವು ಉಪದೇಶಿಸುವ ತತ್ತ್ವಗಳೆಲ್ಲವೂ ಮೂರ್ತಿಮತ್ತಾಗಿ ಬಂದಂತೆ ಆದರ್ಶ ಜೀವನದ ಮೇಲ್ಪಂಕ್ತಿಯನ್ನು ಹಾಕಿಕೊಡುವರೋ ; ಯಾರು ಜ್ಞಾನ ಭಕ್ತಿ ವೈರಾಗ್ಯ ಅನುಷ್ಠಾನಗಳಿಂದ ಕೂಡಿರುವರೋ, ಅವರೇ ನಿಜವಾದ ಆಚಾರ್ಯರೆಂದು ಕರೆಸಿಕೊಳ್ಳಲು ಅರ್ಹರು ಆಗಿರುತ್ತಾರೆ. ಅಂತಹವರೇ ಮಾತೃದೇವೋ ಭವ, ಪಿತೃದೇವೋ ಭವ ಅನಂತರ, ಆಚಾರ್ಯದೇವೋ ಭವ ಎಂದು ಕರೆಸಿಕೊಳ್ಳಲು ಅರ್ಹರಾಗಿರುತ್ತಾರೆ.

ಶಿಷ್ಯರಲ್ಲಿನ ದುಷ್ಟ ಭಾವನೆಗಳನ್ನು ರುದ್ರನಾಗಿ ನಾಶಮಾಡಿ, ಅವರಲ್ಲಿ ಸದ್ಭಾವನೆಗಳನ್ನು ಬ್ರಹ್ಮನಾಗಿ ಸೃಷ್ಟಿಮಾಡಿ, ಅವುಗಳನ್ನು ವಿಷ್ಣುವಾಗಿ ಸದಾ ಪೋಷಿಸುವುದು ಅಂದರೆ ಭಗವಂತನಾದ ನಾರಾಯಣನಲ್ಲಿರುವ ಜ್ಞಾನ, ಶಕ್ತಿ, ಬಲ, ವೀರ್ಯ, ತೇಜಸ್ಸು, ಐಶ್ವರ್ಯಗಳನ್ನು, ನರ ಎನಿಸುವ ಶಿಷ್ಯನಲ್ಲಿ ಮೂಡಿಸುವುದು ಪರಬ್ರಹ್ಮನೆನಿಸುವ ಗುರುವಿನ ಮುಖ್ಯ ಕರ್ತವ್ಯ. ಮುಖ್ಯವಾಗಿ ಗುರು ಎನಿಸುವವನು ವಿದ್ವಾಂಸ, ವಾಕ್ಚತುರ, ಬುದ್ಧಿವಂತ, ಶಿಸ್ತುಗಾರ, ಸಮಯ ಪರಿಪಾಲಕ, ಸತ್ಯವಂತ, ಶೀಲವಂತ, ಆರೋಗ್ಯವಂತ, ಶ್ರಮಜೀವಿ, ನ್ಯಾಯಪರ, ಕ್ಷೇಮಚಿಂತಕ, ಮಿತ್ರ, ಉದಾರಿ, ಕ್ಷಮಾಶೀಲ ಆಗಿರಬೇಕೆಂದು ಶಿಷ್ಯರು ಆಶಿಸುತ್ತಾರೆ ; ಹಾಗೆಯೇ ಗುರುವು ಪ್ರವಾದಿ, ಕಲಾವಿದ, ಮಿತ್ರ, ರಾಷ್ಟ್ರಕ, ವಿವರಣಕರ್ತ, ನಿರ್ಮಾಪಕ, ಸಂಸ್ಕೃತಿವಾಹಕ, ಯೋಜನಾಚತುರ, ಅಗ್ರಗಾಮಿ, ಸುಧಾರಕ, ಆಶಾವಾದಿ ಆಗಿರಬೇಕೆಂದು ಜನತೆ ಆಶಿಸುತ್ತದೆ.

ಪೂರ್ವಾಚಾರ್ಯರಿಂದ ಹರಿದು ಬಂದಿರುವ ಜ್ಞಾನಾನುಭವಗಳ ಪ್ರವಾಹಕ್ಕೆ ತಮ್ಮ ಜ್ಞಾನಾನುಭವಗಳ ತೊರೆಯನ್ನೂ ಸೇರಿಸಿ, ಅದನ್ನು ಹಿಗ್ಗಿಸಿ ಶಾಖೋಪಶಾಖೆಗಳಾಗಿ ಕವಲೊಡೆಸಿ ಜನಮನವನ್ನು ತಣಿಸುವುದು ಆಚಾರ್ಯರ ಮುಖ್ಯ ಕರ್ತವ್ಯವಾಗಿರುತ್ತದೆ. ಆಚಾರ್ಯರೆನಿಸಿಕೊಂಡವರು ನಿರಹಂಕಾರಿ, ಖ್ಯಾತಿಲಾಭನಿರಪೇಕ್ಷಕ, ಸಮರ್ಥ, ಪರಸಮೃದ್ಧಿಪ್ರಿಯ ಆಗಿರಬೇಕು. ಅವರು ಶಿಷ್ಯನಾಗಿರುವ ಜೀವಿಯ ವಿಷಯದಲ್ಲಿ ಪೂರ್ಣವಾದ ಕರುಣೆಯನ್ನು ಹೊಂದಿದ್ದು, ಅವನಿಗೆ ಈಶಾನುಗ್ರಹ ಅಥವಾ ಭಗವತ್ಕೃಪೆ ಸಿಗುವಂತೆ ಶಿಫಾರಸು ಮಾಡಿ, ಬೇರ್ಪಟ್ಟ ಜೀವಾತ್ಮ–ಪರಮಾತ್ಮರಿಬ್ಬರ ನಡುವಣ ಸೇತುವೆ ತಾವೆಂದು ಭಾವಿಸಿ, ಅವರಿಬ್ಬರನ್ನೂ ಒಂದು

ಗೂಡಿಸುವ ಹೊಣೆಯನ್ನು ತಾವೇ ಹೊತ್ತು, ಜೀವಿಯನ್ನು ಗುರಿಯ ಕಡೆಗೆ ಮುನ್ನಡೆಸಬೇಕು.

ಮೂಲ, ದ್ವಯ, ಚರಮಶ್ಲೋಕ ಈ ಮೂರೂ ಮಂತ್ರಗಳನ್ನು ಆಚಾರ್ಯ ಪರಾಧೀನನಾಗಿ, ಭಗವತ್ಕೈಂಕರ್ಯರೂಪವಾಗಿ, ನಿಸ್ಪೃಹತೆಯಿಂದ ಉಪದೇಶ ಮಾಡುವವರೇ ಶ್ರೇಷ್ಠ ಗುರುಗಳು; ವೇದಾಂತಾರ್ಥ ಪ್ರತಿಪಾದಿತ ಜ್ಞಾನವೆಂಬ ದೀಪವನ್ನು ಆರದಂತೆ ಮಾಡಿ, ಸ್ವಯಂಪ್ರಕಾಶನಾದ ಭಗವತ್ಸ್ವರೂಪವನ್ನು ಉಪ ದೇಶಿಸಿ, ಚೇತನರಲ್ಲಿರುವ ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸು ವವರು ಸದಾಚಾರ್ಯರು; ವೇದ, ಮಂತ್ರ, ತಿರುವಾಯ್ಮೊಳಿಗಳೆಲ್ಲದರ ಅರ್ಥ ವಿಶೇಷವನ್ನು ವಿವರವಾಗಿ ಉಪದೇಶಿಸಿ, ಜೀವಾತ್ಮ–ಪರಮಾತ್ಮ ಸಂಬಂಧವನ್ನು ಬಿಗಿ ಪಡಿಸಿ, ಚೇತನರನ್ನು ಅರ್ಹರನ್ನಾಗಿ ಮಾಡುವವರು ಉಪಕಾರಕ ಆಚಾರ್ಯರು; ಸಮಾಶ್ರಯಣ ಮತ್ತು ಮಂತ್ರೋಪದೇಶಗಳನ್ನು ಮಾಡಿ ಚೇತನರನ್ನು ಉದ್ಧಾರ ಮಾಡುವವರು ಉತ್ತಾರಕ ಆಚಾರ್ಯರು.

ಆಚಾರ್ಯರಾದವರು ಶಿಷ್ಯನನ್ನು ಸರಿಯಾಗಿ ಪರೀಕ್ಷಿಸಿದ ನಂತರ ಉಪದೇಶಿಸ ಬೇಕು. ವೇದವನ್ನು ನಂಬದವನಿಗೆ, ತಪಸ್ಸು ಮಾಡದವನಿಗೆ, ಭಕ್ತಿ ಇಲ್ಲದವನಿಗೆ, ಅಹಂಕಾರಿಗೆ, ಸೋಮಾರಿ, ವಂಚಕ, ವಕ್ರಬುದ್ಧಿಯವ ಆದವನಿಗೆ, ಇತರರನ್ನು ಹಿಂಸಿಸುವವನಿಗೆ–ಉಪದೇಶ ನೀಡಬಾರದು ಆಚಾರ್ಯರು ತಾವು ಮಾಡಿದ ಕಾರ್ಯಕ್ಕೆ ಪ್ರತಿಫಲ ರೂಪದಲ್ಲಿ ಶಿಷ್ಯನಿಂದ ಶುಶ್ರೂಷೆ, ಹಣಗಳನ್ನು ಅಪೇಕ್ಷಿಸ ಬಾರದು. ಶಿಷ್ಯನು ಒಳ್ಳೆಯ ದಾರಿಗೆ ಬರಲಿ ಎಂಬ ದಯಾಬುದ್ಧಿಯಿಂದ ಮಾತ್ರ ಉಪದೇಶಿಸಬೇಕು. ಶಿಷ್ಯನ ಉದ್ಧಾರದೊಂದಿಗೆ ಸತ್ಸಹವಾಸ, ಭಗವಂತನ ಕೈಂಕರ್ಯ, ತನಗೆ ಒದಗಿತು ಎಂದು ಸಂತೋಷಿಸಬೇಕು. ಹಿರಿಯರಾದ ಪೂರ್ವಾ ಚಾರ್ಯರುಗಳ ದಿವ್ಯಾಜ್ಞೆಯನ್ನು ಪ್ರಚಾರಮಾಡುವ ಕರಣಗಳು ತಾವು ಎಂದು ತಿಳಿಯಬೇಕು. ಅಂದರೆ ತನ್ನ ಶಿಷ್ಯರನ್ನು ಅನುಗ್ರಹಿಸುವಾಗ ತನ್ನ ಆಚಾರ್ಯರೇ ತನ್ನ ಮೂಲಕ ಈ ಶಿಷ್ಯರನ್ನು ಅನುಗ್ರಹಿಸುತ್ತಿದ್ದಾರೆ, ತಾನು ಕೇವಲ ನಿಮಿತ್ತ ಮಾತ್ರ, ಶಿಷ್ಯರನ್ನು ರಕ್ಷಿಸುವುದೆಂದರೆ ತನ್ನ ಸ್ವರೂಪವನ್ನು ರಕ್ಷಿಸಿದಂತೆ ಎಂದು ಆಚಾರ್ಯನಾದವನು ತಿಳಿದುಕೊಂಡಿರಬೇಕಾದುದು ಶ್ರೀವೈಷ್ಣವ ಧರ್ಮದ ಪರಮ ಲಕ್ಷಣ.

"ಗುರು ಎಂಬುದು ಶ್ರೇಷ್ಠ ನಿಧಿ, ಪ್ರತಿಯೊಬ್ಬರೂ ಆಶಿಸಿ ಪಡೆಯಬೇಕಾದ ವಸ್ತು, ಅಂತಿಮವಾದ ಗುರಿ, ಭದ್ರವಾದ ರಕ್ಷಾಮಣಿ, ಬ್ರಹ್ಮಜ್ಞಾನದ ಮೂರ್ತ ಸ್ವರೂಪ, ಹಾಗೂ ಪರಬ್ರಹ್ಮನಾದ ನಾರಾಯಣ. ಆದಕಾರಣ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಗುರುವೇ ಮಾರ್ಗದರ್ಶಕ. ಗುರುಸೇವೆಯೇ ಶ್ರೇಷ್ಠ ಕೈಂಕರ್ಯ" ಎಂದು ವರರಂಗರು ರಾಮಾನುಜರಿಗೆ ಉಪದೇಶಿಸಿದರು.

"ಆಚಾರ್ಯರುಗಳು ಭಗವಂತನಿಗೆ ಅತಿಸನ್ನಿಹಿತ ವ್ಯಕ್ತಿಗಳು ಮತ್ತು ಆತನ ಹೃದಯವನ್ನರಿತ ದಿವ್ಯಜ್ಞಾನಿಗಳು. ಭಗವಂತನ ದಯೆಯು ಆಚಾರ್ಯರುಗಳ ಮೂಲಕ ಪ್ರವಹಿಸಿ, ಅವರುಗಳ ಅನುಷ್ಠಾನ ಮತ್ತು ಕೃತಿಗಳ ಮೂಲಕ ಚೇತನರಿಗೆ ಭಗವತ್ತತ್ವಗಳನ್ನು ಬೋಧಿಸಿ, ಅವರನ್ನು ಮೇಲಕ್ಕೆ ಎತ್ತುತ್ತದೆ. ಆಚಾರ್ಯರುಗಳ ಸೂಕ್ತಿಗಳಲ್ಲಿ ಚೇತನರ ಉದ್ಧಾರಕ್ಕೆ ಉಪಯುಕ್ತವಾದ ತತ್ತ್ವಹಿತ ಪುರುಷಾರ್ಥಗಳ ಬೋಧಕ ಗುಣಗಳಿರುತ್ತವೆ. ಆದುದರಿಂದ ಆಚಾರ್ಯರುಗಳಲ್ಲಿ ಭಕ್ತಿಪೂರ್ವಕ ವಾದ ಆಶ್ರಯಣವು ಜ್ಞಾನ ಮತ್ತು ಸದ್ಗುಣಗಳನ್ನು ಉತ್ಪಾದಿಸಿ ಮೋಕ್ಷವನ್ನು ಕೊಡಿಸಬಲ್ಲುದು. ಆಚಾರ್ಯನಿಲ್ಲದೆ ಮೋಕ್ಷವಿಲ್ಲ.

"ಮೂಲ, ದ್ವಯ, ಚರಮಶ್ಲೋಕ ಎಂಬೀ ರಹಸ್ಯತ್ರಯ ಮಂತ್ರದಲ್ಲಿ ಸಕಲ ವೇದಾಂತಾರ್ಥಗಳೂ ಅಡಗಿವೆ. ಸದಾಚಾರ್ಯರಿಂದ ತಿಳಿದು ಇವುಗಳನ್ನು ಅನುಸಂಧಾನ ಮಾಡಿ, ತನ್ನ ಸ್ವರೂಪ-ಹಿತಗಳನ್ನು ಅರಿತು, ನಂಬಿ, ಜೀವಿಸುವುದು ಸಾರ್ಥಕವಾದ ಬಾಳು. ಆಚಾರ್ಯರ ಮೂಲಕ ಭಗವಂತನನ್ನು ಶರಣು ಹೋಗು ವುದು ಅಥವಾ ಭರಸಮರ್ಪಣ ಮಾಡುವುದು ಸರ್ವೋತ್ಕೃಷ್ಟವಾದುದು. ಭಾಗವತ ಭಕ್ತಿಯನ್ನು ಒಳಗೊಂಡ ಭಗವದ್ಭಕ್ತಿಗೆ ಫಲವು ನಿಸ್ಸಂದೇಹವಾಗಿ ಲಭಿಸುತ್ತದೆ. ನಮ್ಮ ರಕ್ಷಣೆಯ ಭಾರವನ್ನು ಆಚಾರ್ಯರಲ್ಲಿ ಸಮರ್ಪಿಸಿ, ಅವರು ನಮಗಾಗಿ, ನಮ್ಮನ್ನು ಭಗವಂತನು ಸ್ವೀಕರಿಸುವಂತೆ ಪ್ರಾರ್ಥಿಸುವ ಹಾಗೆ ಮಾಡಬೇಕು. ಪರಮ ಪದದಲ್ಲಿಯೂ ಆಚಾರ್ಯ ಸಾನ್ನಿಧ್ಯದಲ್ಲಿ ಮಾಡುವ ಕೈಂಕರ್ಯವೇ ಭಗವಂತನಿಗೆ ಅತ್ಯಂತ ಪ್ರೀತಿಕರವಾಗಿರುತ್ತದೆ. ಈ ಎಲ್ಲ ಕಾರಣಗಳಿಂದ ಆಚಾರ್ಯ ರಲ್ಲಿ ಭಕ್ತಿ ಇಟ್ಟು ಅವರನ್ನು ಕೊಂಡಾಡುವುದೇ, ಅವರಿಂದ ನಾವು ಪಡೆದ ಉಪ ಕಾರಕ್ಕೆ ಪ್ರತ್ಯುಪಕಾರವೆಂದು ತಿಳಿದು, ಜೀವನವನ್ನು ಕೃತಾರ್ಥವನ್ನಾಗಿ ಮಾಡಿ ಕೊಳ್ಳಬೇಕು", ಎಂದು ನಿಗಮಾಂತ ಮಹಾದೇಶಿಕರು ಆಚಾರ್ಯರ ಬಗ್ಗೆ ಹೇಳಿ ರುವ ಅಭಿಪ್ರಾಯ.

ಇಷ್ಟೆಲ್ಲ ಗುರುಮಹಿಮೆ ಇದ್ದರೂ ಆಚಾರ್ಯರಾದವರು ಶಿಷ್ಯನಿಗೆ ಬೇಕಾದು ದೆಲ್ಲವನ್ನೂ ಪೂರ್ಣವಾಗಿ ಹೇಳಿಕೊಡಲಾರರು. ಏಕೆಂದರೆ ಕಲಿಯುವಿಕೆಯಲ್ಲಿ ಶಿಷ್ಯನ ಪಾತ್ರವೂ ಮಹತ್ತರವಾದುದೇ. ಶುದ್ಧ, ಅಪ್ರಮತ್ತ, ಅಸೂಯಾರಹಿತ, ನಿಸ್ವಾರ್ಥಿ, ಸಂಯಮಪಾಲಕ ಆದ ವ್ಯಕ್ತಿಯು ಮಾತ್ರ ಅಧ್ಯಯನಕ್ಕೆ ಅರ್ಹ ನಾದವನು.

"ಆಚಾರ್ಯಾತ್ಪಾದಮಾಧತ್ತೇ ಪಾದಂ ಶಿಷ್ಯಸ್ಸಮೇಧಯಾ ।
ಪಾದಂ ಸಬ್ರಹ್ಮಚಾರಿಭ್ಯಃ ಪಾದಂ ಕಾಲಕ್ರಮೇಣತು ॥"

ಎಂಬಂತೆ ಶಿಷ್ಯನು ಗುರುವಿನಿಂದ ಹೇಳಿಸಿಕೊಳ್ಳುವುದರ ಜೊತೆಗೆ ತನ್ನ ಬುದ್ಧಿಯನ್ನು ಉಪಯೋಗಿಸಿ, ಸಮಾಜವನ್ನು ವೀಕ್ಷಿಸಿ, ಗ್ರಂಥಗಳ ವ್ಯಾಸಂಗಮಾಡಿ, ಸತ್ಸಂಗ

ದಲ್ಲಿದ್ದು, ತರ್ಕಮಾಡಿ, ಕಲಿಯಬೇಕಾದುದು ಬಹಳವಿದೆ. ಸರ್ವಧರ್ಮೀಯರೂ ಒಪ್ಪುವ ಕಠೋರ ಸತ್ಯವನ್ನು ಹೇಳಬಲ್ಲವನು ಮಾತ್ರ ಬ್ರಹ್ಮೋಪಾಸನೆಗೆ ಯೋಗ್ಯನಾದ ಶಿಷ್ಯ ಎಂಬುದು ಪ್ರಾಚೀನ ಕಾಲದ ಗುರುಗಳ ಅಭಿಪ್ರಾಯವಾಗಿದ್ದಿತು.

ಆಸ್ತಿಕೋ ಧರ್ಮಶೀಲಶ್ಚ ಶೀಲವಾನ್ ವೈಷ್ಣವಶ್ಶುಚಿಃ ।
ಗಂಭೀರಶ್ಚತುರೊಧೀರಃ ಶಿಷ್ಯ ಇತ್ಯಭಿಧೀಯತೇ ॥

ಎಂಬಂತೆ ಈ ಗುಣಗಳೆಲ್ಲಾ ಇರುವವನೇ ಉಪದೇಶ ಪಡೆಯಲು ಸರಿಯಾದ ಶಿಷ್ಯನೆನಿಸುತ್ತಾನೆ. ಗುರುವಿನ ಅನುಗ್ರಹವನ್ನು ಪಡೆಯುವಂತಹ ಯೋಗ್ಯತೆ ಭಕ್ತನಲ್ಲಿರಬೇಕು. ಪರಿಶುದ್ಧ ಜೀವನವನ್ನು ನಡೆಸಿ, ಗುರುಸೇವೆಗೈದು, ಕಠಿಣಪರೀಕ್ಷೆಗಳಿಗೊಳಗಾಗಿ, ಶ್ರದ್ಧಾಭಕ್ತಿ ಆಸಕ್ತಿಗಳಿಂದ, ನಿರಹಂಕಾರಿಯಾದ ಶಿಷ್ಯನು ಪ್ರಶ್ನೆಗಳನ್ನು ಕೇಳಿದಾಗ ಮಾತ್ರ ಗುರುವಿನ ಮನಸ್ಸಿನಲ್ಲಿ ಹೊಸಹೊಸ ಭಾವನೆಗಳು ಹಾಗೂ ಅರ್ಥ ವಿಶೇಷಗಳು ಸ್ಫುರಿಸಬಲ್ಲವು.

ಗುರುಶಿಷ್ಯರು ತಂದೆ ಮಕ್ಕಳಂತಿದ್ದು ಕಲಿವು ನಡೆಯಬೇಕು. ತಮ್ಮ ತಮ್ಮ ಸ್ವರೂಪಗಳನ್ನು ಬಹಳ ಎಚ್ಚರಿಕೆಯಿಂದ ರಕ್ಷಿಸಿಕೊಂಡು, ಪರಸ್ಪರ ಹಿತರಕ್ಷಣೆಯಲ್ಲೂ ನಿರತರಾಗಿರಬೇಕು—ಇದು ಉಪನಿಷತ್ತುಗಳಲ್ಲಿ ಕಾಣಬರುವ ಗುರುಶಿಷ್ಯ ಸಂಬಂಧ. ಅಂಥಹ ವಾತಾವರಣವಿದ್ದಾಗಲೇ ಶಿಷ್ಯನೂ ಉದ್ಧಾರವಾಗಬಲ್ಲ, ಆಚಾರ್ಯ ಸ್ವರೂಪವೂ ಸಿದ್ಧಿಸಬಲ್ಲುದು. ಗುರುಶುಶ್ರೂಷಯಾ ವಿದ್ಯಾ-ಎನ್ನುವಂತೆ ಶಿಷ್ಯನು ತನ್ನ ಸೇವಾಕಾರ್ಯಗಳಿಂದ ಆಚಾರ್ಯನನ್ನು ಸಂತೋಷಪಡಿಸಿ ಜ್ಞಾನವನ್ನು ಗಳಿಸಬೇಕು. ಆಚಾರ್ಯ ಸಂಬಂಧ ಹೊಂದಿರುವವರಲ್ಲಿಯೂ ಗೌರವ ತೋರಿಸಬೇಕು. ಆಚಾರ ಶೀಲನಾಗಿದ್ದು ಉಪದೇಶದಂತೆ ನಡೆದುಕೊಳ್ಳಲು ಯತ್ನಿಸಬೇಕು. ಉಪದೇಶವನ್ನು ಜೀವಿಕೆಗಾಗಿ ಮಾರಿಕೊಳ್ಳಬಾರದು. ಭಗವಂತನ ಬಗ್ಗೆ ಅಂಗೈಯ ನೆಲ್ಲಿಕಾಯಿನಂತೆ ತಿಳಿಸಿಕೊಟ್ಟ ಆಚಾರ್ಯರಲ್ಲಿಯೂ, ಅಂತಹ ಯೋಗ್ಯ ಆಚಾರ್ಯರನ್ನು ಒದಗಿಸಿ ಕೊಟ್ಟ ಭಗವಂತನಲ್ಲಿಯೂ, ಉಪಕಾರಸ್ಮೃತಿ ಅಥವಾ ಕೃತಜ್ಞತೆ ಹೊಂದಿರಬೇಕು. ಮುಖ್ಯವಾಗಿ

"ಶರೀರಂ ವಸು ವಿಜ್ಞಾನಂ ವಾಸಃ ಕರ್ಮಗುಣಾನಸೂನ್ ।
ಗುರ್ವರ್ಥಂ ಧಾರಯೇದ್ಯಸ್ತು ಸಶಿಷ್ಯೋನೇತರಃ ಸ್ಮೃತಃ ॥ "

ಎಂಬಂತೆ ಎಲ್ಲವನ್ನೂ ಗುರುಸೇವೆಗಾಗಿ ಉಪಯೋಗಿಸುವುದೇ ನಿಜವಾದ ಶಿಷ್ಯನ ಲಕ್ಷಣ ಮತ್ತು ಕರ್ತವ್ಯ.

"ಸಹನಾವವತು । ಸಹನೌಭುನಕ್ತು । ಸಹವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು । ಮಾವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ॥"
ಎಂಬಂತೆ ಗುರುಶಿಷ್ಯರಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ, ಜೊತೆಯಲ್ಲಿ ಪೋಷಿಸಲಿ, ಜೊತೆಯಲ್ಲಿ ಸಾಮರ್ಥ್ಯವನ್ನುಂಟುಮಾಡಲಿ, ಅಧ್ಯಯನವು ವಿಕಾಸಗೊಳ್ಳಲಿ,

ದ್ವೇಷವಿಲ್ಲದಂತಾಗಲಿ, ಶಾಂತಿ ಇರಲಿ—ಇದೇ ಪ್ರಾಚೀನ ಗುರುಕುಲದ ಅಧ್ಯಯನ-ಅಧ್ಯಾಪನ ಕಾಲದಲ್ಲಿ ಗುರುಶಿಷ್ಯರ ಪ್ರಾರ್ಥನೆ ಆಗಿದ್ದಿತು.

ಭಗವಂತನು ತಾನೇ ಸೃಷ್ಟಿಸಿದ ಚತುರ್ಮುಖ ಬ್ರಹ್ಮನಿಗೆ ವೇದಗಳನ್ನು ಉಪದೇಶಿಸಿ, ಆ ವೇದಗಳನ್ನು ಮಧುಕೈಟಭರೆಂಬ ರಾಕ್ಷಸರಿಂದ ರಕ್ಷಿಸಿ, ನಾರದ, ಪರಾಶರ, ಶುಕ, ಶೌನಕರ ಮೂಲಕ ಸಂಪ್ರದಾಯವನ್ನು ಕಲಿಸಿದನು; ವ್ಯಾಸ, ವಾಲ್ಮೀಕಿಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿ ಅವರು ಬ್ರಹ್ಮಸೂತ್ರ, ಮಹಾಭಾರತ, ಭಾಗವತ, ರಾಮಾಯಣ ಮುಂತಾದ ಉತ್ತಮ ಧಾರ್ಮಿಕ ಗ್ರಂಥಗಳನ್ನು ರಚಿಸುವಂತೆ ಮಾಡಿದನು; ಹಂಸ, ಹಯಗ್ರೀವ, ಮತ್ಸ್ಯ, ನಾರಾಯಣ ಎಂಬೀ ಅವತಾರಕಾಲಗಳಲ್ಲಿ ತತ್ತ್ವಹಿತ ಪುರುಷಾರ್ಥಗಳನ್ನು ಕುರಿತು ಉಪದೇಶ ನೀಡಿದ್ದಾನೆ; ವರಾಹ, ಶ್ರೀರಾಮ, ಶ್ರೀಕೃಷ್ಣ ಅವತಾರ ಕಾಲಗಳಲ್ಲಿ ಚರಮ ಶ್ಲೋಕಗಳನ್ನು ಉಪದೇಶಿಸಿ, ಆಮೂಲಕ ಪ್ರಪತ್ತಿ ಮಾರ್ಗವನ್ನು ತೋರಿಸಿ, ರಕ್ಷಿಸಿದ್ದಾನೆ; ಆಳ್ವಾರುಗಳ ರೂಪದಲ್ಲಿ ಅಭಿನವ ದಶಾವತಾರವನ್ನು ಮಾಡಿ, ದಿವ್ಯ ಪ್ರಬಂಧವನ್ನು ಅನುಗ್ರಹಿಸಿ, ಪ್ರಪತ್ತಿ ಮಾರ್ಗವನ್ನು ಎತ್ತಿಹಿಡಿದು, ಜನಸಾಮಾನ್ಯರನ್ನು ಉದ್ಧರಿಸಿದ್ದಾನೆ; ಇಂತಹ ನಾರಾಯಣನು ನಮಗೆ ಆದಿಪುರುಷ ಹಾಗೂ ಪ್ರಥಮ ಆಚಾರ್ಯ, ಪರತತ್ತ್ವ, ಪರಮಹಿತ, ಪರಮಪುರುಷಾರ್ಥ ಎಲ್ಲ ಆಗಿದ್ದಾನೆಂಬುದು ಶ್ರೀವೈಷ್ಣವ ಧರ್ಮದ ದೃಢನಂಬಿಕೆಯಾಗಿದೆ.

ಶ್ರೀಮನ್ನಾರಾಯಣನಿಂದ ವಿಶಿಷ್ಟಾದ್ವೈತ ತತ್ತ್ವವೆಂಬ ಆತ್ಮವಿದ್ಯೆಯ ರಹಸ್ಯವನ್ನು ಪಡೆದ ವಿಷ್ಣುಪತ್ನಿಯಾದ ಮಹಾಲಕ್ಷ್ಮಿಯೇ ನಮ್ಮ ಆಚಾರ್ಯ ಪರಂಪರೆಯಲ್ಲಿ ಎರಡನೆಯವಳು. ಮಹಾಲಕ್ಷ್ಮಿಯಿಂದ ವಿಷ್ವಕ್ಸೇನರಿಗೆ, ವಿಷ್ವಕ್ಸೇನರಿಂದ ನಮ್ಮಾಳ್ವಾರರಿಗೆ, ನಮ್ಮಾಳ್ವಾರರಿಂದ ಯೋಗದೆಸೆಯಲ್ಲಿ ನಾಥಮುನಿಗಳಿಗೆ, ನಾಥಮುನಿಗಳಿಂದ ಉಯ್ಯಕ್ಕೊಂಡಾರ್ ಮತ್ತು ಮಣಕ್ಕಾಲ್‌ನಂಬಿಗಳ ಮೂಲಕ ಆಳವಂದಾರರಿಗೆ, ಆಳವಂದಾರರಿಂದ ಪೆರಿಯನಂಬಿಗಳ ಮೂಲಕ ರಾಮಾನುಜರಿಗೆ ಉಪದೇಶಿಸಲ್ಪಟ್ಟ ಈ ತತ್ತ್ವವು ಅವರನಂತರ ಗುರುಶಿಷ್ಯ ಪರಂಪರೆಯಾಗಿ ಪ್ರವರ್ತಿಸಲ್ಪಟ್ಟು ಬರುತ್ತಿದೆ. ಹೀಗೆ ಪ್ರಾಚೀನ ಶ್ರೀವೈಷ್ಣವ ಆಚಾರ್ಯರೆಲ್ಲರೂ ಭೂಮಿಯ ಮೇಲೆ ದೇವರ ರಾಜ್ಯವನ್ನು ಸ್ಥಾಪಿಸಲು ಬಂದ ವಿಷ್ಣುವಿನ ಅವತಾರಗಳೇ ಆಗಿದ್ದಾರೆಂಬುದು ಶ್ರೀವೈಷ್ಣವರ ನಂಬಿಕೆ.

ಶ್ರೀ ವೈಷ್ಣವರ ಗುರುಪರಂಪರೆಯನ್ನು ಅವರೋಹಣ ಕ್ರಮದಲ್ಲಿ

"ಲಕ್ಷ್ಮೀನಾಥ ಸಮಾರಂಭಾಂ ನಾಥಯಾಮುನ ಮಧ್ಯಮಾಂ ।
ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರು ಪರಂಪರಾಂ ॥"

ಎಂದು ದೇವರಿಂದ ಹಿಡಿದು ತಮ್ಮ ಗುರುಗಳವರೆಗೆ ಹೇಳಬಹುದು. ಅಥವಾ

"ಅಸ್ಮದ್ಗುರು ಸಮಾರಂಭಾಂ ಯತಿಶೇಖರ ಮಧ್ಯಮಾಂ ।
ಲಕ್ಷ್ಮೀವಲ್ಲಭ ಪರ್ಯಂತಾಂ ವಂದೇ ಗುರು ಪರಂಪರಾಂ ॥"

ಎಂದು ಅದನ್ನು ಆರೋಹಣ ಕ್ರಮದಲ್ಲಿ ತಮ್ಮ ಗುರುವಿನಿಂದ ಹಿಡಿದು ಭಗವಂತನ ವರೆಗೆ ಅನುಸಂಧಾನ ಮಾಡಬಹುದು.

ಸಾಮಾನ್ಯವಾಗಿ ಶ್ರೀವೈಷ್ಣವರೆಲ್ಲರೂ ಪ್ರತಿನಿತ್ಯವೂ ಅನುಸಂಧಾನಮಾಡುವ ಗುರುಸ್ಮರಣೆ ಈ ರೀತಿ ಇರುತ್ತದೆ.

(ಸಂಸ್ಕೃತದಲ್ಲಿ)

ಅಸ್ಮದ್ದೇಶಿಕಮಸ್ಮದೀಯ ಪರಮಾಚಾರ್ಯಾನಶೇಷಾನ್ಗುರೂನ್
ಶ್ರೀಮಲ್ಲಕ್ಷ್ಮಣಯೋಗಿಪುಂಗವ ಮಹಾಪೂರ್ಣೌ ಮುನಿಂ ಯಾಮುನಂ ॥
ರಾಮಂ ಪದ್ಮವಿಲೋಚನಂ ಮುನಿವರಂ ನಾಥಂ ಶಠದ್ವೇಷಿಣಂ
ಸೇನೇಶಂ ಶ್ರಿಯಮಿಂದಿರಾಸಹಚರಂ ನಾರಾಯಣಂ ಸಂಶ್ರಯೇ ॥

(ತಮಿಳಿನಲ್ಲಿ)

ಎನ್ನುಯಿರ್ ತಂದಳಿತ್ತವರೈಚ್ಚರಣಂ ಪುಕ್ಕು
ಯಾನಡೈವೇಯವರ್ ಕುರುಕ್ಕಳ್ ಣಿರೈವಣಂಗಿ
ಪಿನ್ನರುಳಾಲ್ ಪೆರಂಬೂದೂರ್ ವಂದವಳ್ಳಲ್
ಪೆರಿಯನಂಬಿ ಆಳವಂದಾರ್ ಮಣಕ್ಕಾಲ್‌ನಂಬಿ
ನನ್ನೆರಿಯೈಯವರ್ಕ್ಕುರೈತ್ತ ಉಯ್ಯಕೊಂಡಾರ್
ನಾಥಮುನಿ ಶಠಗೋಪನ್ ಸೇನೈನಾಥನ್
ಇನ್ನಮುದಲ್ ತಿರುಮಗಳೆನ್ನಿವರೈ ಮುನ್ನಿಟ್ಟು
ಎಂಬೆರುಮಾನ್ ತಿರುವಡಿಗಳಡೈಗಿನ್ರೇನೇ ॥

ಹಿಂದೆ ಹೇಳಿದಂತೆ ಚೇತನರನ್ನು ಮುಕ್ತಿ ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವ ಕಾರ್ಯದಲ್ಲಿ ಆಚಾರ್ಯನ ಪಾತ್ರವು ಅತ್ಯಂತ ಮಹತ್ವವುಳ್ಳದ್ದಾಗಿರುವುದರಿಂದ, ಮೋಕ್ಷವನ್ನು ಅಪೇಕ್ಷಿಸುವ ಜೀವಾತ್ಮರು ಆಚಾರ್ಯರನ್ನು ಆಶ್ರಯಿಸಲೇಬೇಕು. ಆಚಾರ್ಯರಲ್ಲಿ ಶ್ರದ್ಧಾಭಕ್ತಿಗಳಿದ್ದರೆ ಮಾತ್ರ ಜೀವಾತ್ಮನಿಗೆ ಆಚಾರ್ಯರ ಉಪದೇಶದ ಅರ್ಥವು ಸ್ಪಷ್ಟವಾಗುತ್ತದೆ. ಶಿಷ್ಯರು ತಮ್ಮ ಆಚಾರ್ಯ ಪರಂಪರೆಯನ್ನು ಸ್ಮರಿಸಿ ಕೊಂಡಾಡುವುದು ಪ್ರಾಚೀನ ಕಾಲದಿಂದಲೂ ಬಂದಿರುವ ಸಂಪ್ರದಾಯ. ಇದರಿಂದ ಶಿಷ್ಯರಿಗೆ ಶ್ರೇಯಸ್ಸು ಉಂಟಾಗಿ ಅದು ಮುಕ್ತಿಗೆ ಕಾರಣವಾಗುತ್ತದೆ. ರಾಮಾನುಜರ ಪಾದಗಳನ್ನು ಆಶ್ರಯಿಸಿದ ಆಚಾರ್ಯರನ್ನು, ತಮ್ಮ ತಮ್ಮ ಸಂಪ್ರದಾಯಗಳಿಗೆ ಅನುಗುಣವಾಗಿ ತಿಳಿದುಕೊಂಡು, ಆಚಾರ್ಯ ಪರಂಪರೆಯನ್ನು ಅನು

ಸಂಧಾನ ಮಾಡಬೇಕು. ಜೊತೆಗೆ ನಾಥಮುನಿ, ಯಾಮುನಮುನಿ, ರಾಮಾನುಜ ಮುನಿ ಎಂಬ ಮುನಿತ್ರಯರು, ವಿಶಿಷ್ಟಾದ್ವೈತ ವೇದಾಂತ ಹಾಗೂ ಶ್ರೀವೈಷ್ಣವಮತ ಗಳನ್ನು ವಿಕಾಸಗೊಳಿಸಲು ತುಂಬಾ ಶ್ರಮಿಸಿ ನಮಗೆ ಮಹೋಪಕಾರಮಾಡಿರುವುದ ರಿಂದ, ಈ ಮೂವರ ವಿಷಯದಲ್ಲಿ ಅತ್ಯಧಿಕವಾದ ಭಕ್ತಿ, ಗೌರವಗಳನ್ನು ಹೊಂದಿರ ಬೇಕಾದುದು ಅತ್ಯಾವಶ್ಯಕವಾದುದು.

---

# ಭಾಗ ಎರಡು

# ಸಿದ್ಧಾಂತವನ್ನು ರೂಪಿಸಿ ಬೆಳೆಸಿದ ಆಚಾರ್ಯರು

## ಅಧ್ಯಾಯ ೫

## ರಾಮಾನುಜರಿಗೆ ಸ್ಫೂರ್ತಿ ನೀಡಿದವರು

### 1. ನಾರದ

ಭಗವಂತನಾದ ನಾರಾಯಣನನ್ನು ಕುರಿತು ತಪಸ್ಸುಮಾಡಿದ ಶ್ರೇಷ್ಠ ಭಕ್ತರಿವರು. ವೇದ, ಪುರಾಣ, ಇತಿಹಾಸ, ವ್ಯಾಕರಣ, ನೀತಿ, ಸಂಗೀತ, ಶಾಸ್ತ್ರಗಳನ್ನೆಲ್ಲಾ ಅರಿತ ಮಹಾಜ್ಞಾನಿ. ಜನತೆಯ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನವನ್ನು ನೀಡುವ ಮಹಾವ್ಯಕ್ತಿ.

ಬ್ರಹ್ಮನ ಮಾನಸಪುತ್ರರೆನಿಸಿದ ಇವರು ತಮ್ಮ ವೀಣೆಯೊಂದಿಗೆ ಭಗವಂತನ ಗುಣಗಾನಮಾಡುತ್ತ ಸುತ್ತಾಡುವಂಥವರು. ಅನೇಕರಿಗೆ ಉಪದೇಶ ನೀಡಿ, ಅವರು ಭಗವದ್ಭಕ್ತರಾಗುವಂತೆ ಮಾಡಿದ್ದಾರೆ. ಪಾರ್ವತಿ, ಪ್ರಹ್ಲಾದ, ಧ್ರುವ, ವಾಲ್ಮೀಕಿ, ವ್ಯಾಸ, ನಿಂಬಾರ್ಕ ಇವರೆಲ್ಲ ಉದ್ಧಾರವಾಗಿ ತಮ್ಮ ಗುರಿಯನ್ನು ಸಾಧಿಸಿದುದು ನಾರದರ ಉಪದೇಶದಿಂದಲೇ.

ಭೋಗ ವಿಲಾಸಗಳಲ್ಲಿ ನಿರತರಾದ ದೇವತೆಗಳಿಗೆ ಇಂದ್ರಿಯಗಳ **ದಮನ** ಮಾಡಲು, ಲೋಭಿತನಕ್ಕೆ ಹೆಸರಾಂತ ಮಾನವರಿಗೆ **ದಾನ**ಮಾಡಲು, ಕ್ರೂರತನಕ್ಕೆ ಪ್ರಸಿದ್ಧಿಯಾದ ದಾನವರಿಗೆ **ದಯೆ** ತೋರಿಸಲು ಉಪದೇಶಿಸಿ, ಪರಮಾತ್ಮನ ಉಪದೇಶವಾದ **'ದದದ'** ಮಂತ್ರಕ್ಕೆ ಹೊಸ ಅರ್ಥವನ್ನು ಕಲ್ಪಿಸಿ ಲೋಕವನ್ನು ಉದ್ಧರಿಸ ಲೆತ್ನಿಸಿದ್ದಾರೆ. ಇವರು ಬರೆದ "ನಾರದೀಯ ಭಕ್ತಿ ಸೂತ್ರಗಳು", ಭಕ್ತಿಯ ವಿವರಗಳನ್ನು ತಿಳಿಸುವ ಅಪೂರ್ವ ಗ್ರಂಥವಾಗಿದೆ.

ಇವರ ಸಲಹೆಯಂತೆ ರಚಿಸಲ್ಪಟ್ಟ ವಾಲ್ಮೀಕಿಯ ರಾಮಾಯಣದಲ್ಲಿ ಬರುವ ಶ್ರೀರಾಮ, ವ್ಯಾಸರ ಭಾಗವತದಲ್ಲಿ ಬರುವ ಶ್ರೀಕೃಷ್ಣ ಇಬ್ಬರ ಚರಿತ್ರೆಯು ಭಾರತೀಯ ಆಧ್ಯಾತ್ಮಿಕ ಜೀವನಕ್ಕೆ ಮಾರ್ಗದರ್ಶಕವಾಗಿದೆ. ವಿಷ್ಣುಭಕ್ತಿಯ ಎರಡು ಶಾಖೆಗಳಾದ ರಾಮಭಕ್ತಿ ಮತ್ತು ಕೃಷ್ಣಭಕ್ತಿಯ ಮೇಲೆ ಸೃಷ್ಟಿ ಆಗಿರುವ ಹಾಗೂ

ಆಗುತ್ತಿರುವ ಸಾಹಿತ್ಯವು ಭಾರತೀಯ ಸಾಹಿತ್ಯದಲ್ಲಿ ಅರ್ಧಕ್ಕಿಂತ ಹೆಚ್ಚಾಗಿದೆ ಎಂದರೆ ಆಶ್ಚರ್ಯವಾಗದಿರದು.

## 2. ವಾಲ್ಮೀಕಿ

ರಾಮ ತ್ವನ್ನಾಮ ಮಹಿಮಾ ವರ್ಣ್ಯತೇಕೇನವಾಕಥಂ ।
ಯತ್ಪ್ರಭಾವಾದಹಂರಾಮ ಮಹರ್ಷಿತ್ವಮವಾಪ್ತವಾನ್ ॥

ಎಂಬಂತೆ ಭಗವಂತನ ನಾಮಸ್ಮರಣೆಯೊಂದರಿಂದಲೇ ಪಾಪಿಯು ಧರ್ಮಾತ್ಮ, ದಡ್ಡನು ವಿದ್ವಾಂಸ, ಮೂಗನು ವಾಚಾಳಿ, ದರಿದ್ರನು ಧನಿಕ, ಆಗಬಲ್ಲನು ಎಂಬುದಕ್ಕೆ ಇವರು ಉತ್ತಮ ಉದಾಹರಣೆಯಾಗಿದ್ದಾರೆ. ಬ್ರಾಹ್ಮಣನಾಗಿದ್ದರೂ ದುಷ್ಟಸಂಗದಿಂದ ಕಳವು, ಕೊಲೆ, ಲೂಟಿಗಳನ್ನು ಮಾಡುವ ಕೆಳದರ್ಜೆಯ ಸ್ಥಿತಿಯಲ್ಲಿದ್ದ ಇವರು, ನಾರದರ ಉಪದೇಶವನ್ನನುಸರಿಸಿ, ರಾಮನಾಮದ ಬಲ-ಮಹಿಮೆಗಳಿಂದ ಉನ್ನತಿ ಹೊಂದಿ ಬ್ರಹ್ಮರ್ಷಿಯಾದರು. ಭವಸಾಗರವನ್ನು ದಾಟಲು ರಾಮನಾಮವೆಂಬ ನಾವೆಗಿಂತ ಉತ್ತಮ, ಸರಳ, ಆದ ಸಾಧನ ಬೇರೊಂದಿಲ್ಲ ಎಂದು ತೋರಿಸಿ ಕೊಟ್ಟರು.

ಭಾರತದ ಪ್ರಾಚೀನ ಇತಿಹಾಸದಲ್ಲಿ ಶ್ರೇಷ್ಠ ನಾಯಕನಾಗಿ ಉನ್ನತ ಸ್ಥಾನವನ್ನು ಪಡೆದುಕೊಂಡಿರುವ ಶ್ರೀ ರಾಮಚಂದ್ರ ಪ್ರಭುವಿನ-ಜೀವನದ ವಿಚಾರವಾಗಿ, ಬಹು ದೊಡ್ಡ - ಜವಾಬ್ದಾರಿಯ ಕೆಲಸವನ್ನು ಕೈಕೊಂಡು, ಪ್ರಪಂಚದ ಕಲ್ಯಾಣಕ್ಕಾಗಿ, ಸುಂದರ ಹಾಗೂ ಅಪೂರ್ವ ಆದ ರಾಮಾಯಣವನ್ನು ಸಂಸ್ಕೃತದಲ್ಲಿ ಬರೆದಿದ್ದಾರೆ. ಇದರ ಮೂಲಕ ಭಾರತದ ಕಾವ್ಯ ಸಾಹಿತ್ಯದ ಬೀಜವನ್ನು ನೆಟ್ಟ ಆದಿಕವಿ ಎನಿಸಿಕೊಂಡರು. ಇವರು ಬರೆದ ರಾಮಾಯಣವು ಆ ಕಾಲದ ಭಾರತದ ಸಾಮಾಜಿಕ ಸ್ಥಿತಿಗತಿಗಳ ಮೇಲೆ ತುಂಬಾ ಬೆಳಕು ಚಲ್ಲುವ ವಿಷಯಗಳ ಗಣಿಯಾಗಿದೆ. ವಾಲ್ಮೀಕಿ ರಾಮಾಯಣವು ಎಲ್ಲ ಭಾರತೀಯ ಭಾಷೆಗಳಲ್ಲೂ ಅನುವಾದಿಸಲ್ಪಟ್ಟಿದೆ.

ಅಗಸನ ಮಾತಿನಿಂದ ಬೇಸರಗೊಂಡ ಶ್ರೀರಾಮನು ಗರ್ಭಿಣಿಯಾಗಿದ್ದ ಸೀತಾಮಾತೆಯನ್ನು ಕಾಡಿಗೆ ಕಳುಹಿಸಿದಾಗ, ಆಕೆಯನ್ನು ತಮ್ಮ ಆಶ್ರಮದಲ್ಲಿ ಇಟ್ಟುಕೊಂಡು ರಕ್ಷಿಸಿದವರು ಇವರೇ. ಸೀತೆಯ ಗರ್ಭದಲ್ಲಿ ಜನಿಸಿದ ಲವಕುಶರಿಗೆ ಉತ್ತಮ ವಿದ್ಯಾಭ್ಯಾಸವನ್ನು ಮಾಡಿಸಿ, ಅವರು ತಂದೆಯಾದ ಹಾಗೂ ಲೋಕೈಕ ವೀರನಾದ ಶ್ರೀರಾಮನ-ವಿರುದ್ಧ ಹೋರಾಡಿ ಗೆಲ್ಲುವಂತೆಯೂ, ತಮ್ಮ ಗಾನದಿಂದ ಶ್ರೀರಾಮನನ್ನು ಆಕರ್ಷಿಸುವಂತೆಯೂ ತಯಾರಿಕೆ ಕೊಟ್ಟಿದ್ದರು. ತಮ್ಮ ಈ ಎಲ್ಲ ಕೆಲಸಗಳಿಂದ

ವಾಲ್ಮೀಕೇರ್ಮುನಿಸಿಂಹಸ್ಯ ಕವಿತಾವನಚಾರಿಣಃ ।
ಶೃಣ್ವನ್ ರಾಮಕಥಾನಾದಂ ಕೋನಯಾಂತಿ ಪರಾಂಗತಿಂ ॥
ಎಂದು ಎಲ್ಲರಿಂದ ಹೊಗಳಿಸಿಕೊಂಡರು.

## 3. ಪರಾಶರ

ತತ್ತ್ವೇನಯಶ್ಚಿದಚಿದೀಶ್ವರ ತತ್ಸ್ವಭಾವ
ಭೋಗಾಪವರ್ಗ ತದುಪಾಯ ಗತೀರುದಾರಃ ॥
ಸಂದರ್ಶಯನ್ನಿರಮಿಮಾತ ಪುರಾಣರತ್ನಂ
ತಸ್ಮೈ ನಮೋ ಮುನಿವರಾಯ ಪರಾಶರಾಯ ॥

ಇವರು ಪರಮ ಭಾಗವತರಲ್ಲಿ ಒಬ್ಬರು. ವಿಶ್ವಾಮಿತ್ರರು ಮೆಚ್ಚಿಕೊಂಡ ಹಾಗೂ ಶ್ರೀರಾಮನ ಕುಲಗುರುವಾದ ವಸಿಷ್ಠ ಬ್ರಹ್ಮರ್ಷಿಗಳು ಇವರ ತಾತ, ಪ್ರಸೂತಿ ಇವರ ಅಜ್ಜಿ. ತಂದೆಯಾದ ಶಕ್ತ್ರಿಯು ಅತಿ ಬುದ್ಧಿವಂತ. ತಾಯಿ ಅದೃಶ್ಯಂತಿಯು ರೂಪ ಗುಣ ಸಂಪನ್ನೆ. ಕೋಪಿಷ್ಠರಾದ ಶಕ್ತ್ರಿಯ ಶಾಪಕ್ಕೆ ಗುರಿಯಾದ ರಾಜನೊಬ್ಬನು ರಾಕ್ಷಸನಾಗಿ ಶಕ್ತ್ರಿಯನ್ನು ಭಕ್ಷಿಸಿಬಿಟ್ಟನು. ತಂದೆ ಸತ್ತ ಮೇಲೆ ಜನಿಸಿ, ಕವಿದಿದ್ದ ನಿರಾಸೆಯನ್ನು ಹೋಗಲಾಡಿಸಿ, ಆಶಾಭಾವನೆಯನ್ನುಂಟುಮಾಡಿದ ಈ ಮಗುವಿಗೆ, ತಾತ ವಸಿಷ್ಠರು ಪರಾಶರ ಎಂದು ಹೆಸರಿಟ್ಟರು.

ತಾತನಿಂದಲೇ ಎಲ್ಲ ವಿದ್ಯೆಯನ್ನೂ ಕಲಿತು ಅತಿ ದೊಡ್ಡ ವಿದ್ವಾಂಸ ಹಾಗೂ ಬ್ರಹ್ಮಜ್ಞಾನಿ ಎನಿಸಿದರು. ತಂದೆಯ ಉದಾಹರಣೆಯಿಂದ ಋಷಿಗಳಾದವರಿಗೆ ಕೋಪ, ಮತ್ಸರಗಳಿರಬಾರದೆಂಬ ಅನುಭವ ಬಂದಿತು. ಹಿಮಾಲಯದಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ಅಲ್ಲಿ ನೂರಾರು ಶಿಷ್ಯರಿಗೆ ಕಲಿಸುತ್ತಿದ್ದರು. ಆಸೇತು ಹಿಮಾಚಲ ಪರ್ಯಂತ ಪಾದಯಾತ್ರೆ ಮಾಡಿಬಂದರು.

ಮೇಲುಕೋಟೆಯಲ್ಲಿ ಕೆಲಕಾಲ ಇದ್ದಾಗ ತಮ್ಮ ಪ್ರಿಯ ಶಿಷ್ಯನಾದ ಮೈತ್ರೇಯಿಯ ಪ್ರಶ್ನೆಗಳಿಗೆಲ್ಲ ವಿವರವಾದ ಉತ್ತರಗಳನ್ನು ನೀಡಿದರು. ಪರಾಶರ-ಮೈತ್ರೇಯಿಗಳಲ್ಲಿ ನಡೆದ ಪ್ರಶ್ನೋತ್ತರವೇ ವಿಷ್ಣುಪುರಾಣವೆಂದು ಖ್ಯಾತಿ ಪಡೆದ ಕೃತಿಯಾಯಿತು. ಇದು ಎಲ್ಲ ಪುರಾಣಗಳ ವಿಷಯಗಳ ತಾತ್ಪರ್ಯವನ್ನು ಹೊಂದಿದೆ ಎಂದು ಬಲ್ಲವರು ಹೇಳುತ್ತಾರೆ.

"ಸಕಲ ಭೂತಗಳ ಉತ್ಪತ್ತಿ, ಸಮರಸವರ್ತನೆ, ವ್ಯವಸ್ಥಿತ ಪರಿವರ್ತನೆ, ವೃದ್ಧಿ, ಕ್ಷಯ ಮುಂತಾದ ವಾಸ್ತವಿಕ ಜಗತ್ತಿನ ವ್ಯವಸ್ಥೆಗೆಲ್ಲ ವಿಷ್ಣುವೇ ಮೂಲ. ಈ ಜಗತ್ತಿನ ವ್ಯವಸ್ಥೆಯಲ್ಲಿ ಪ್ರಾಕೃತಿಕ, ನೈತಿಕ ನಿಯಮಗಳಿಗಿಂತ ಪ್ರೇಮ ಅಥವಾ ಕರುಣಾನಿಯಮವೇ ಶ್ರೇಷ್ಠವಾದುದು. ಭಗವಂತನ ಅನೇಕ ಅವತಾರಗಳಲ್ಲಿ

ಶ್ರೀಕೃಷ್ಣಾವತಾರವೇ ಮಾನವ ರೂಪದಲ್ಲಿ ಪರಮಾತ್ಮನ ಪರಿಪೂರ್ಣವಾದ ಸ್ವಭಾವದ ಆವಿಷ್ಕರಣವನ್ನು ಸೂಚಿಸುತ್ತದೆ.

"ಏಕ, ಅನಂತ, ನಿರ್ವಿಕಾರ, ಪೂರ್ಣ, ಸರ್ವವ್ಯಾಪಿ, ಸರ್ವಾತೀತ, ಪರಮಾತ್ಮ ಆದ ವಿಷ್ಣುವೇ ಹಿರಣ್ಯಗರ್ಭ, ಹರಿ, ಶಂಕರ, ವಾಸುದೇವ, ಅಚ್ಯುತ, ಪುರುಷೋತ್ತಮ, ನಾರಾಯಣ, ಬ್ರಹ್ಮನ್, ಶಿವ ಮುಂತಾದ ಎಲ್ಲ ಗುಣಧಾಮಗಳಾದ ನಾಮಾವಳಿಯಲ್ಲಿಯೂ ಪರಿಕೀರ್ತಿತನಾಗಿದ್ದಾನೆ. ಆದುದರಿಂದ ಪ್ರತ್ಯೇಕತೆ, ಪಂಥಗಳ ಅಂಧ ಅಭಿಮಾನ, ಸಂಕೀರ್ಣಮನೋಭಾವ, ಇವುಗಳೆಲ್ಲ ಬುದ್ಧಿಮಾಂದ್ಯದ ಫಲ." ಇದು ಸಂಭಾಷಣೆಯ ರೂಪದಲ್ಲಿರುವ ವಿಷ್ಣು ಪುರಾಣದ ಸಾರಾಂಶ. ಇದಕ್ಕೆ ವೈದಿಕ ಸಾಹಿತ್ಯದಲ್ಲಿ ತುಂಬಾ ಹಿರಿಮೆ ಇದ್ದು ವೇದಾಂತದ ಪ್ರಮಾಣ ಗ್ರಂಥವಾಗಿದೆ. ಪರಾಶರಗೀತೆ ಇವರ ಇನ್ನೊಂದು ಕೃತಿ.

ಇವರು ಇಳಿವಯಸ್ಸಿನಲ್ಲಿ ವಿವಾಹವಾದ ಸತ್ಯವತಿಗೆ ಹುಟ್ಟಿದ ಮಗುವೇ ಪ್ರಸಿದ್ಧರಾದ ವ್ಯಾಸರು. ಪರಾಶರರ ಹೆಸರನ್ನು ಶಾಶ್ವತವಾಗಿ ಉಳಿಸಬೇಕೆಂಬ ಯಾಮುನರ ಇಚ್ಛೆಯನ್ನು ಪೂರೈಸಲು, ರಾಮಾನುಜರು ಕೂರೇಶರ ಹಿರಿಯ ಮಗನಿಗೆ ಪರಾಶರಭಟ್ಟ ಎಂದು ಹೆಸರಿಟ್ಟರು.

## 4. ವ್ಯಾಸ

ವ್ಯಾಸಂ ವಸಿಷ್ಠನಪ್ತಾರಂ ಶಕ್ತೇಃ ಪೌತ್ರಮಕಲ್ಮಷಂ ।
ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಂ ॥
ಅಚತುರ್ವದನೋ ಬ್ರಹ್ಮಾ ದ್ವಿಬಾಹುರಪರೋಹರಿಃ ।
ಅಫಾಲಲೋಚನಶ್ಶಂಭುಃ ಭಗವಾನ್ ಬಾದರಾಯಣಃ ॥

ಕೀಳು ಎನ್ನುವ ಕುಲದಲ್ಲಿ ಜನಿಸಿದ ತಾಯಿ ಸತ್ಯವತಿಯಿಂದ ಜನಿಸಿದರೂ, ಮೇಲು ಎನ್ನುವ ಕುಲದ ತಂದೆ ಪರಾಶರ ಮಹರ್ಷಿಯ ಪ್ರತಿಭೆಯಿಂದ ಇವರು ಬ್ರಹ್ಮರ್ಷಿಯಾದರು. ದೀರ್ಘ ಕಾಲ ತಪಸ್ಸುಮಾಡಿ, ಅಪಾರ ಜ್ಞಾನವನ್ನು ಸಂಪಾದಿಸಿ, ನಂತರ ಲೋಕ ಕಲ್ಯಾಣದ ಸಲುವಾಗಿ ಭಾರತೀಯ ಸಾಹಿತ್ಯ ಭಂಡಾರವನ್ನು ತುಂಬಿದರು. ವೇದದ ಮಂತ್ರಗಳೆಲ್ಲವನ್ನೂ ಸೇರಿಸಿ, ಅವುಗಳನ್ನು ಋಕ್, ಯಜುರ್, ಸಾಮ, ಅಥರ್ವ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಟ್ಟು ವೇದವ್ಯಾಸ ಎನಿಸಿಕೊಂಡರು.

ಬಹಳ ಕಠಿಣವಾಗಿದ್ದು, ಸಾಮಾನ್ಯ ಜನರಿಗೆ ಅರ್ಥವಾಗದಿದ್ದ, ವೇದಮಂತ್ರಗಳ ಸರಿಯಾದ ಅರ್ಥವನ್ನು ತಿಳಿದುಕೊಳ್ಳಲು ಅನುಕೂಲಿಸುವಂತೆ ಬ್ರಹ್ಮಸೂತ್ರ ಅಥವಾ ವೇದಾಂತಸೂತ್ರಗಳನ್ನು ರಚಿಸಿಕೊಟ್ಟರು. ಇದು ಆಚಾರ್ಯತ್ರಯರಿಗೂ ಪ್ರಮಾಣ ಗ್ರಂಥವಾಗಿದ್ದು, ಇದರ ಮೇಲೆ ಮೂವರೂ ಭಾಷ್ಯ ರಚಿಸಿದ್ದಾರೆ.

ಅಷ್ಟಾದಶ ಪುರಾಣಗಳನ್ನೂ, ಮಹಾಭಾರತವನ್ನೂ ಕಥಾರೂಪದಲ್ಲಿ ಬರೆದು, ಸಾಮಾನ್ಯ ಜನರಲ್ಲಿ ವೈದಿಕ ಧರ್ಮವು ಪ್ರಚಾರವಾಗಲು ಅಗಾಧ ನೆರವು ನೀಡಿದ್ದಾರೆ. ಇದರ ಮೂಲಕ ಜನರಲ್ಲಿ ಹೆಚ್ಚು ತಿಳುವಳಿಕೆ ಬರುವಂತೆ ಮಾಡಿ ಅಮೋಘವಾದ ಉಪಕಾರವೆಸಗಿದ್ದಾರೆ.

ವ್ಯಾಸರು ಬರೆದಿರುವ ಮಹಾಭಾರತದ ಭಾಷೆಯು ಗಂಭೀರ, ಸರಳ, ಪ್ರಭಾವಶಾಲಿ ಆಗಿದ್ದು, ಅದು ಹಿಂದೂ ಸಂಸ್ಕೃತಿಯ ವಿಶ್ವಕೋಶವೆನಿಸಿಕೊಂಡಿದೆ. ಇದರ ಭಾಗವಾದ ಭಗವದ್ಗೀತೆಯು ಅತ್ಯಂತ ಶ್ರೇಷ್ಠವಾದ ಗೌರವವನ್ನು ಪಡೆದಿರುವ, ಜ್ಞಾನಸಂಗ್ರಹವೆನಿಸಿದ, ಉಪನಿಷತ್ತುಗಳ ಸಾರ. ಇದೂ ಆಚಾರ್ಯತ್ರಯರಿಗೆ ಪ್ರಮಾಣಗ್ರಂಥವಾಗಿದ್ದು, ಇದರ ಮೇಲೂ ಭಾಷ್ಯ ಬರೆದಿದ್ದಾರೆ. ಗೀತೆಯು ಲೋಕಜೀವನದ ವಿಷಯದಲ್ಲಿ ಗೌರವ ಬುದ್ಧಿಯನ್ನೂ, ಕರ್ತವ್ಯಾಚರಣೆಯಲ್ಲಿ ಉತ್ಸಾಹವನ್ನೂ, ಆಪತ್ಕಾಲದಲ್ಲಿ ಧೈರ್ಯವನ್ನೂ, ಸಂಶಯಗ್ರಸ್ತರಾದಾಗ ಮನಸ್ಸಿಗೆ ನೆಮ್ಮದಿಯನ್ನೂ ನೀಡುತ್ತದೆ. ಪ್ರಪಂಚದ ನಾನಾ ಭಾಷೆಗಳಲ್ಲಿ ಗೀತೆಯು ಅನುವಾದಿಸಲ್ಪಟ್ಟು ಜನಪ್ರಿಯ ಗ್ರಂಥವಾಗಿದೆ.

ಇಷ್ಟೆಲ್ಲ ಸಾಹಿತ್ಯ ಸೃಷ್ಟಿಮಾಡಿಯೂ ಮನಸ್ಸಿಗೆ ಶಾಂತಿ, ತೃಪ್ತಿ ಸಿಗದಿದ್ದಾಗ, ವ್ಯಾಸರು ನಾರದರ ಸಲಹೆಯಂತೆ ಭಾಗವತದ ಮೂಲಕ ಶ್ರೀಕೃಷ್ಣನ ಚರಿತ್ರೆಯನ್ನು ಬರೆದು, ಅದರಲ್ಲಿ ಹಿಂದೂಧರ್ಮದ ಸಾರವನ್ನೆಲ್ಲ ಅಡಗಿಸಿದ್ದಾರೆ.

ಮಗನ ಭಾಗವತದ ಆಧ್ಯಾತ್ಮಿಕ ದೃಷ್ಟಿಯೂ ತಂದೆಯ ವಿಷ್ಣು ಪುರಾಣದಂತೆಯೇ ಇದೆ.

"ಈ ವಿಶ್ವ ವ್ಯವಸ್ಥೆಯಲ್ಲಿ ವ್ಯಕ್ತವಾಗುವ ಓರಣೆ, ಹೊಂದಿಕೆ ಹಾಗೂ ವೈವಿಧ್ಯಗಳಲ್ಲಿ ಭಗವಂತನ ಅಚಿಂತ್ಯಾದ್ಭುತವಾದ ಜ್ಞಾನಕ್ರಿಯಾದಿ ಶಕ್ತಿಗಳು ಎಲ್ಲರಿಗೂ ತೋರುತ್ತವೆ. ಆತನ ಪ್ರೇಮ, ಕಾರುಣ್ಯ, ಸೌಂದರ್ಯ, ಮಾಧುರ್ಯ ಮುಂತಾದ ಶ್ರೇಷ್ಠತರ ಕಲ್ಯಾಣ ಗುಣಗಳು, ಆತನಿಂದಲೇ ಸೃಷ್ಟಿಸಲ್ಪಟ್ಟಿರುವ ಜೀವಾತ್ಮರುಗಳಲ್ಲಿ ಉಚ್ಚ ಶ್ರೇಣಿಗೆ ಸೇರಿದವರಿಗೆ ಮಾತ್ರ ಗೋಚರವಾಗುತ್ತವೆ. ಆದರೆ ಆತನ ಅತ್ಯಂತ ಶ್ರೇಷ್ಠ ಕಲ್ಯಾಣ ಗುಣದ ಭೋಗಯೋಗ ದೊರಕುವುದು ಅತ್ಯಂತ ಶ್ರೇಷ್ಠ ಭಕ್ತರಿಗೆ ಮಾತ್ರ.

"ಈ ಸಮಸ್ತ ವಿಶ್ವವೂ ಸತ್ಯಜ್ಞಾನ, ಶಿವಸುಂದರ, ಸ್ವತಂತ್ರ, ಆದ ಪರಮಾತ್ಮನ ಅಪ್ರೇರಿತ, ಲೀಲಾತ್ಮಕ ಸ್ವಾಭಿವ್ಯಂಜನೆಯೇ ಆಗಿದೆ. ಮಾನವ ಸಮಾಜದಲ್ಲಿ ಕಾಣಬರುವ ಅಜ್ಞಾನ, ಅಸಮಗ್ರಜ್ಞಾನ, ದುಷ್ಟವೆನಿಸುವ ಪ್ರವೃತ್ತಿಗಳು, ದ್ವೇಷ, ಸ್ಪರ್ಧೆ, ಹೋರಾಟ ಇವೆಲ್ಲವೂ ಪರಮಾತ್ಮನ ಲೀಲೆಯ ಅಭಿವ್ಯಂಜನೆಗಳು. ಆದುದರಿಂದ ಈ ವಾಸ್ತವ ಸ್ಥಿತಿಯನ್ನು ಕುರಿತು ಜುಗುಪ್ಸೆ ಪಡಬಾರದು,

ಅದರಿಂದ ತಪ್ಪಿಸಿಕೊಂಡು ಹಾರಿಹೋಗಲು ಬಯಸಬಾರದು. ಪರಮಾತ್ಮನ ಅಖಂಡ ಸ್ವರೂಪದಲ್ಲಿ ತನ್ನನ್ನು ಲೀನವನ್ನಾಗಿ ಮಾಡುವ ಮುಕ್ತಿಗೂ ಕಾತರಿಸಬಾರದು.

"ಪ್ರಪಂಚದಲ್ಲಿ ಅಂದರೆ ತನ್ನಲ್ಲಿ, ಲೋಕದ ಸ್ತ್ರೀ ಪುರುಷರಲ್ಲಿ, ಜೀವಿ–ವಸ್ತುಗಳಲ್ಲಿ, ಶಕ್ತಿಗಳಲ್ಲಿ ಎಲ್ಲೆಲ್ಲೂ ಪರಮಾತ್ಮನು ಇರುವುದರಿಂದ ಅವನ ಈ ಲೀಲಾ ಚೇಷ್ಟಿತಗಳನ್ನು ಪ್ರೇಮಭಾವದಿಂದ ಕಂಡು ಆಲಂಗಿಸಿಕೊಂಡು, ಅಸಹ್ಯವಾದುದನ್ನು ಕಂಡು ದೂರ ಹೋಗದೆ ಸೇವೆ ಮಾಡಬೇಕು. ಹೀಗೆ ವಿವಿಧ ಪ್ರಕಾರದ ಜೀವಿಗಳೆಲ್ಲ ಪರಮ ಪುರುಷನಾದ ನಾರಾಯಣನ ಅವತಾರಗಳಾದ ಕಾರಣ ಸೃಷ್ಟಿಯ ಎಲ್ಲ ಪ್ರಕಾರಗಳಲ್ಲೂ ಅವನ ಇರುವಿಕೆಯನ್ನು ಕಂಡು ಗೌರವಿಸಬೇಕು.

"ಅವತಾರಗಳಲ್ಲೆಲ್ಲ ಪೂರ್ಣ, ಶ್ರೇಷ್ಠತಮ, ಪರಬ್ರಹ್ಮ ಸ್ವರೂಪ ಆದುದು ಶ್ರೀಕೃಷ್ಣ. ಆ ಭಗವಂತನೊಡನೆ ಪರಮೈಕಾಂತ ಭಕ್ತಿಯೇ ಮನುಷ್ಯ ಜೀವಿತದ ಪರಮ ಪುರುಷಾರ್ಥ. ಶರೀರದ ಸರ್ವಾಂಗಗಳೂ, ಸರ್ವೇಂದ್ರಿಯಗಳೂ, ಈ ದೈವೀ ಪ್ರಣಯದಿಂದ ಸೇಚನಗೊಂಡು, ಆತನ ಸೌಂದರ್ಯ ಮತ್ತು ಆನಂದಾನುಭೂತಿಗಳಿಂದ ಜೀವವು ತುಂಬಿ ತುಳುಕಾಡಬೇಕು." ಇದು ಭಾಗವತದ ಸಾರ.

ಇವೆಲ್ಲದರ ಫಲವಾಗಿ ವ್ಯಾಸರು ಭಗವಾನ್ ಬಾದರಾಯಣ ಎನಿಸಿಕೊಂಡುದಲ್ಲದೆ, "ವ್ಯಾಸಾಯ ವಿಷ್ಣು ರೂಪಾಯ, ವ್ಯಾಸರೂಪಾಯ ವಿಷ್ಣವೇ" ಎಂದು ಹೊಗಳಿಸಿಕೊಂಡರು. ಇವರ ಶಿಷ್ಯರಾದ ಬೋಧಾಯನ ಋಷಿಗಳೇ ವಿಶಿಷ್ಟಾದ್ವೈತದ ಮೊದಲ ಪ್ರತಿಪಾದಕರು.

## 5. ಶಂಕರ (788–820)

ಶ್ರುತಿಸ್ಮೃತಿ ಪುರಾಣಾನಾಮಾಲಯಂ ಕರುಣಾಲಯಂ ।
ನಮಾಮಿ ಭಗವತ್ಪಾದಂ ಶಂಕರಂ ಲೋಕ ಶಂಕರಂ ॥

ತಾಯಿ ಆರ್ಯಾಂಬ, ತಂದೆ ಶಿವಗುರು ಇಬ್ಬರೂ ಸಂಪ್ರದಾಯಸ್ಥ ನಂಬೂದ್ರಿ ಬ್ರಾಹ್ಮಣರು. ಶ್ರೀಮಂತರಾದರೂ ಸರಳ ಜೀವಿಗಳು, ಸಜ್ಜನರು, ಶಿವಭಕ್ತರು, ವಿದ್ಯಾಸಂಪನ್ನರು. ವೃಷಾಚಲೇಶ್ವರನ ಅನುಗ್ರಹದಿಂದ ಹುಟ್ಟಿದ ಮಗುವಿಗೆ ಶಂಕರನೆಂಬ ಹೆಸರನ್ನು ಇಟ್ಟರು.

ಮಲಬಾರ್‌ನ ಚೂರ್ಣಾ ಅಥವಾ ಆಳ್ವಾಯಿ ನದಿಯ ದಡದಲ್ಲಿರುವ ಕಾಲಟಿ ಎಂಬ ಹಳ್ಳಿ ಶಂಕರರ ಜನ್ಮಸ್ಥಳ. ಎಂಟನೆಯ ವರ್ಷದ ವೇಳೆಗೆ ವೇದಗಳಲ್ಲಿ ಪೂರ್ಣ ಜ್ಞಾನವಿದ್ದಿತು. ತಾಯಿಗಾಗಿ ಮಾಡಿದ ಇವರ ಪ್ರಾರ್ಥನೆಯಂತೆ ಚೂರ್ಣಾ ನದಿಯು ಇವರ ಮನೆಯ ಪಕ್ಕದಲ್ಲಿ ಹರಿಯಿತು. ತಂದೆ ಸತ್ತನಂತರ ತಾಯಿಯ ಅಪ್ಪಣೆ ಪಡೆದು ಸಂನ್ಯಾಸಿಯಾದರು.

ಆಚಾರ್ಯ ಗೌಡಪಾದರ ಶಿಷ್ಯರಾದ ಗೋವಿಂದ ಭಗವತ್ಪಾದ ಯತಿಗಳ ಶಿಷ್ಯರಾಗಿ ನರ್ಮದಾ ನದಿಯ ದಡದಲ್ಲಿ ವಿದ್ಯಾಭ್ಯಾಸ ಮಾಡಿದರು. ಗುರುಗಳ ಸಲಹೆಯಂತೆ ತಪಸ್ಸು, ಸಾಧನೆಯಲ್ಲಿ ಮಗ್ನರಾಗಿ 12ನೇ ವರ್ಷದ ವೇಳೆಗೆ ಯೋಗಿಯಾಗಿ ಸಿದ್ಧಿಪಡೆದರು. ಕಾಶಿಗೆ ಹೋಗಿ ಅನ್ನಪೂರ್ಣೆಯಲ್ಲಿ ಜ್ಞಾನ ವೈರಾಗ್ಯಗಳ ಭಿಕ್ಷೆಯನ್ನು ಬೇಡಿದರು. ಅಲ್ಲಿ ಪ್ರಬೋಧಪೂರ್ಣ ವೇದಾಂತ ಪ್ರವಚನ ಹಾಗೂ ಭಕ್ತಿರಸಪ್ರಧಾನಗೀತೆಗಳಿಂದ ಜನರ ಮನವನ್ನು ಸೂರೆಗೊಂಡರು. ಪ್ರಸಿದ್ಧ ಜೈನ, ಬೌದ್ಧ ಪಂಡಿತರನ್ನು ಸೋಲಿಸಿ, ಮೃತಪ್ರಾಯವಾಗಿದ್ದ ಹಿಂದೂಧರ್ಮವನ್ನು ಪುನರುಜ್ಜೀವನಗೊಳಿಸಿದರು.

ಮಲೆಯಾಳಿ, ಪ್ರಾಕೃತ, ಮಾಗಧಿ, ಸಂಸ್ಕೃತ ಭಾಷೆಗಳಲ್ಲಿ ಪಾರಂಗತರಾಗಿ ಗ್ರಂಥರಚನೆಮಾಡಲು ಆರಂಭಿಸಿದರು. ಪ್ರಸ್ಥಾನತ್ರಯಗಳ ಭಾಷ್ಯ, ವಿವೇಕ ಚೂಡಾಮಣಿ, ಉಪದೇಶ ಸಾಹಸ್ರಿ, ಆತ್ಮಬೋಧ ಇವರ ಶ್ರೇಷ್ಠ ಕೃತಿಗಳು.

ಉಪನಿಷತ್ತುಗಳು ಪ್ರತಿಪಾದಿಸುವ ಅತಿ ಪ್ರಾಚೀನವಾದ ಅದ್ವೈತ ಸಿದ್ಧಾಂತ ಮತ್ತು ಸ್ಮಾರ್ತ ಪಂಥವನ್ನು ಸ್ಥಾಪಿಸಿದರು. ಸತ್ಯವನ್ನು ಅರಿತು ಭಗವಂತನ ನಾಮಸ್ಮರಣೆ ಹಾಗೂ ಸತ್ಪುರುಷರ ಸಹವಾಸದಲ್ಲಿ ಕಾಲ ಕಳೆದ ಮಾನವರು ಯಾವ ಜಾತಿ, ಮತ, ಪಂಥ, ಲಿಂಗಗಳಿಗೆ ಸೇರಿದ್ದರೂ ಮೋಕ್ಷಕ್ಕೆ ಅರ್ಹರು. ಮನುಷ್ಯರಲ್ಲಿ ಮೇಲು ಕೀಳು ಇರಬಾರದು. ಪರಮಾತ್ಮನನ್ನು ಎಲ್ಲರಲ್ಲಿಯೂ, ಎಲ್ಲೆಲ್ಲಿಯೂ ಕಾಣುವ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕು. ಪ್ರಪಂಚವೆಲ್ಲ ತಮ್ಮದು. ಎಲ್ಲರೂ ಸೋದರ ಸೋದರಿಯರು—ಎಂಬುದು ಶಂಕರರ ಜ್ಞಾನಮಾರ್ಗದ ಸಾರ.

ತಾಯಿಂದ ಬಾಲ್ಯದಲ್ಲಿ ಪುರಾಣ, ಪುಣ್ಯಕಥೆಗಳನ್ನು ಕೇಳಿದುದರ ಫಲವಾಗಿ ಶಂಕರರಲ್ಲಿ ಭಕ್ತಿ ಹುಟ್ಟಿತು. ಮನೆಯಲ್ಲಿ ಶ್ರೀಕೃಷ್ಣನ ವಿಗ್ರಹವನ್ನು ಸ್ಥಾಪಿಸಿದರು. ತಾಯಿಯ ಆಸೆಯಂತೆ ಆಕೆಗೆ ಕೃಷ್ಣನ ದರ್ಶನವನ್ನು ಮಾಡಿಸಿದರು.

'ಮೋಕ್ಷಸಾಧನ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ'

ಎಂದು ಸಾರಿ ಭಕ್ತರಾಗಿ, ಕೃಷ್ಣ, ವಿಷ್ಣು, ಲಕ್ಷ್ಮಿ, ನರಸಿಂಹ, ಶಿವ, ಶಕ್ತಿ, ಕುಮಾರ, ಗಣಪತಿ, ಸೂರ್ಯ ಈ ದೇವತೆಗಳ ಧ್ಯಾನ, ಪೂಜೆ, ಸಂಕೀರ್ತನೆಗಳ ನಲುವಾಗಿ ನೂರಾರು ಸ್ತೋತ್ರ ಗೀತೆಗಳನ್ನು ರಚಿಸಿ, ಆ ಮೂಲಕ ಪರಮಾತ್ಮನ ಕರುಣೆಗೆ ಅವಶ್ಯವಾದ ಭಕ್ತಿಮಾರ್ಗವನ್ನೂ ಉಪದೇಶಿಸಿದ್ದಾರೆ. 'ಭಜಗೋವಿಂದಂ' ಇವರ ಜನಪ್ರಿಯವಾದ ಕವಿತೆ.

ಸ್ವಾರ್ಥವನ್ನು ಬಿಟ್ಟು ಜೀವಿಗಳ ಕಲ್ಯಾಣವನ್ನು ಸಾಧಿಸುವುದೇ ಸಂನ್ಯಾಸಿಗಳ ಧ್ಯೇಯವಾಗಿರಬೇಕೆಂದು ಹೇಳಿ, ಗೃಹಸ್ಥರಾಗವೆ ದುಡಿದ ಈ ಪ್ರಚಂಡ ಪ್ರತಿಭೆಯ ಮಹಾಜ್ಞಾನಿ, ಕೇರಳದವರಾರೂ, ಸೇತುವಿನಿಂದ ಹಿಮಾಚಲದವರೆಗೆ ಪ್ರವಾಸಮಾಡಿ ತಮ್ಮ ದಿವ್ಯ ಸಂದೇಶವನ್ನು ಜನರಿಗೆ ತಲಪಿಸಿದರು.

ಚತುರತೆ ಹಾಗೂ ದಕ್ಷತೆಗಳಿಂದ ಸನಾತನ ಹಿಂದೂಧರ್ಮದ ಸಂಘಟನೆ, ಅನುಷ್ಠಾನ ಮತ್ತು ಪ್ರಸಾರ ಆಗಲೆಂದು ಭಾರತದ ನಾಲ್ಕೂ ಕಡೆಗಳಲ್ಲಿ ಅಂದರೆ ಬದರಿ, ದ್ವಾರಕೆ, ಜಗನ್ನಾಥ, ಶೃಂಗೇರಿಗಳಲ್ಲಿ ಆಮ್ನಾಯ ಮಠಗಳನ್ನು ಸ್ಥಾಪಿಸಿದರು. ದೇಶದಲ್ಲಿ ಐಕ್ಯತೆಯನ್ನುಂಟುಮಾಡಿದರು.

ಇವರು ಬದುಕಿದ್ದ 32 ವರ್ಷಗಳ ಅತ್ಯಲ್ಪ ಕಾಲದಲ್ಲಿ ಎಣೆಯಿಲ್ಲದ ಸಾಧನೆಯನ್ನು ಕೈಗೂಡಿಸಿಕೊಂಡು, ನೂರಾರು ವರ್ಷ ಇದ್ದವರು ಮಾಡುವುದಕ್ಕಿಂತಲೂ ಹೆಚ್ಚು ಘನವಾದ ಕೆಲಸವನ್ನು ಮಾಡಿ, ಭಾರತದ ಪ್ರಾಚೀನ ಜ್ಞಾನವನ್ನು ಮನವರಿಕೆ ಮಾಡಿಕೊಡಲು ಜನಿಸಿದ ಅತಿ ಶ್ರೇಷ್ಠ ವ್ಯಕ್ತಿಗಳಲ್ಲಿ ಒಬ್ಬರೆನಿಸಿದರು.

ವೇದಾಂತಿ, ವಿದ್ವಾಂಸ, ಕವಿ, ಸಂತ, ಭಕ್ತ, ಧರ್ಮಸುಧಾರಕ, ಸಾಮಾಜಿಕ ಮತ್ತು ನೈತಿಕ ವ್ಯವಸ್ಥಾಪಕ, ಎನಿಸಿಕೊಂಡ ಶಂಕರ ಭಗವತ್ಪಾದರ ಕಾಲದಲ್ಲಿ ಸನಾತನ ಧರ್ಮಕ್ಕೆ ನವಚೇತನ ಹಾಗೂ ಮಾರ್ಗದರ್ಶನ ದೊರಕಿ, ಆ ಕಾಲವು ಭಾರತೀಯ ಆಧ್ಯಾತ್ಮಿಕ ಚರಿತ್ರೆಯಲ್ಲಿ ಸುವರ್ಣಯುಗವೆನಿಸಿದೆ.

ಈ ಪರಂಪರೆಯಲ್ಲಿ ಬಂದ ಯಾದವ ಪ್ರಕಾಶರು ಮೊದಲು ರಾಮಾನುಜರ ಗುರುಗಳಾಗಿದ್ದು ಆಮೇಲೆ ಅವರ ಶಿಷ್ಯರಾದರು.

# ಅಧ್ಯಾಯ ೬

## ರಾಮಾನುಜರ ಗುರುಪರಂಪರೆ—ಆಳ್ವಾರುಗಳು

[ರಾಮಾನುಜರ ಗುರುಪರಂಪರೆಯು ಎರಡರಿಂದ ಎಂಟನೆ ಶತಮಾನದ ವರೆಗಿದ್ದ ಆಳ್ವಾರುಗಳನ್ನೂ, ಒಂಬತ್ತು–ಹತ್ತನೆ ಶತಮಾನಗಳಲ್ಲಿದ್ದ ಆಚಾರ್ಯರನ್ನು ಒಳಗೊಂಡಿದೆ. ಅವರ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ]

### 1. ಪೊಯ್‌ಗೈ ಆಳ್ವಾರ್

ತುಲಾಯಾಂ ಶ್ರಾವಣೇ ಜಾತಂ ಕಾಂಚ್ಯಾ ಕಾಂಚನ ವಾರಿಜಾತ್ ।
ದ್ವಾಪರೇ ಪಾಂಚಜನ್ಯಾಂಶಂ ಸರೋಯೋಗಿನಮಾಶ್ರಯೇ ॥ ೧ ॥
ಕಾಂಚ್ಯಾಂ ಸರಸಿ ಹೇಮಾಬ್ಜೇ ಜಾತಾಂಕಾಸಾರಯೋಗಿನಂ ॥
ಕಲಯೇ ಯಃ ಶ್ರಿಯಃ ಪತ್ಯೇರವಿಂದೀಪಮಕಲ್ಪಯತ್ ॥ ೨ ॥

ಪಲ್ಲವ ರಾಜ್ಯದ ಕಂಚಿಯುಲ್ಲಿ ಯಥೋಕ್ತಕಾರಿ ಸನ್ನಿಧಿಯ ಬಳಿಯ ಸರೋವರದ ಕಮಲಪರಾಗದಲ್ಲಿ ಹುಟ್ಟಿದ, ವಿಷ್ಣುವಿನ ಪಾಂಚಜನ್ಯ ಶಂಖದ ಅವತಾರವಾದ, ಇವರಿಗೆ ಕಾಸಾರಯೋಗಿ, ಸರೋಯೋಗಿ ಎಂದೂ ಹೆಸರು.

ವಿಷ್ಣುವು ಪಂಚಜನನೆಂಬ ರಾಕ್ಷಸನನ್ನು ಸಂಹರಿಸಿ, ಅವನ ಮೂಳೆಯಿಂದ ಮಾಡಿಕೊಂಡ ಪಾಂಚಜನ್ಯವನ್ನು ಊದಿದಾಗ ಶತ್ರುಗಳು ಅಂಜಿಕೆಯಿಂದ ಪಲಾಯನ ಮಾಡುವರು ಹಾಗೂ ಜನರ ಅಜ್ಞಾನವು ಕಳೆದು ಹೋಗುವುದು.

"ನೆಲವೇ ಹಣತೆ, ಸಮುದ್ರವೇ ಎಣ್ಣೆ, ಸೂರ್ಯನೇ ಬತ್ತಿ, ತೊಡಕಿನ ಸಮುದ್ರವಾದ ಸಂಸಾರದಿಂದ ಕಾಯಿಸಲು ದೇವರು ಜ್ಯೋತಿಯ ಚಕ್ರ ಹಿಡಿದಿದ್ದಾನೆ. ಇಂಥ ದೇವರ ಪಾದಕ್ಕೆ ನನ್ನ ಕವಿತೆಯ ಹೂಮಾಲೆಯ ಅರ್ಪಣೆ."— ಇದು ಇವರು ರಚಿಸಿ, ಹಾಡಿ ಭಕ್ತಿರಸ ಸ್ತೋತ್ರವನ್ನು ಹರಿಸಿರುವ **ಮೊದಲ ತಿರು ಪಂದಾದಿ** ಎಂಬ ನೂರು ಪದ್ಯಗಳ ಸಾರ.

### 2. ಪೂದತ್ತಾಳ್ವಾರ್

ತುಲಾಶ್ರವಿಷ್ಠಾ ಸಂಭೂತಂ ಭೂತಂ ಕಲ್ಲೋಲ ಮಾಲಿನಃ ।
ತೀರೇ ಫುಲ್ಲೋತ್ಪಲಾನ್ಮಲ್ಲಾಪುರ್ಯಾ ಮೀಡೇ ಗದಾಂಶಕಂ ॥ ೧ ॥

ಮಲ್ಲಾಪುರವರಾಧೀಶಂ ಮಾಧವೀ ಕುಸುಮೋದ್ಭವಂ ।
ಭೂತಂ ನಮಾಮಿಯೋವಿಷ್ಣೋಃ ಜ್ಞಾನದೀಪಮಕಲ್ಪಯತ್ ॥ ೨ ॥

ಪಲ್ಲವ ರಾಜ್ಯದ ಮಹಾಬಲಿಪುರದಲ್ಲಿ ಮಾಧವೀ ಕುಸುಮದಲ್ಲಿ ಹುಟ್ಟಿದ, ವಿಷ್ಣುವಿನ ಕೌಮೋದಕಿ ಗದೆಯ ಅವತಾರವಾದ, ಇವರಿಗೆ ಭೂತಮುನಿ ಎಂದೂ ಹೆಸರು.

ಇವರು ದೇವರ ಆತ್ಮ ಅಥವಾ ಭೂತ. ನಿರೀಶ್ವರವಾದಿಗಳನ್ನು ಇವರು ತಮ್ಮ ಭಕ್ತಿಯ ಕೆಚ್ಚಿನಿಂದ ಪರಾಜಯಗೊಳಿಸಿ ಅವರು ನೆಲವನ್ನಪ್ಪುವಂತೆ ಮಾಡು ತ್ತಿದ್ದರು.

"ಭಕ್ತಿಯೇ ಹಣತೆ. ಮನಸ್ಸಿನ ಆಸೆಯೇ ಎಣ್ಣೆ. ಜ್ಞಾನವೇ ಈ ಆಸೆಯ ಎಣ್ಣೆಯನ್ನು ಹೀರುವ ಜ್ಯೋತಿ".—ಇದು ಇವರು ರಚಿಸಿ ಹಾಡಿರುವ **ಎರಡನೆಯ ತಿರುವಂದಾದಿ** ಎಂಬ ನೂರು ಪದ್ಯಗಳ ಸಾರ.

## 3. ಪೇಯಾಳ್ವಾರ್

ತುಲಾಶತಭಿಷಗ್ಜಾತಂ ಮಯೂರಪುರ ಕೈರವಾತ್ ।
ಮಹಾಂತಂ ಮಹದಾಖ್ಯಾತಂ ವಂದೇ ಶ್ರೀನಂದಕಾಂಶಕಂ ॥ ೧ ॥
ದೃಷ್ಟ್ವಾ ತುಷ್ಟಾವಯೋವಿಷ್ಣುಂ ರಮಯಾ ಮಯಿಲಾಧಿಪಂ ।
ಕೂಪೇ ರಕ್ತೋತ್ಪಲೇ ಜಾತಂ ಮಹದಾಹ್ವಯ ಮಾಶ್ರಯೇ ॥ ೨ ॥

ಪಲ್ಲವ ರಾಜ್ಯದಲ್ಲಿ ಮಯೂರಪುರ, ಮೈಲಾಪುರ ಎನಿಸಿದ್ದ, ಈಗಿನ ಮದರಾಸು ನಗರದ ತಿರುವಳ್ಳಿಕ್ಕೇಣಿ ವಿಸ್ತರಣಗಲ್ಲಿನ ಬಾವಿಯ ಕನ್ನೈದಿಲೆ ಅಥವಾ ಕೆಂದಾವರೆ ಹೂವಿನಲ್ಲಿ, ವಿಷ್ಣುವಿನ ನಂದಕ ಖಡ್ಗದ ಅವತಾರವಾಗಿ ಹುಟ್ಟಿದವರು.

ಭಗವಂತನಲ್ಲಿನ ಅಪ್ರತಿಮ ಭಕ್ತಿಯಿಂದ ಅತ್ತು, ಹಾಡಿ, ನಕ್ಕು, ನಲಿಯು ತ್ತಿದ್ದ ಇವರಿಗೆ ಮಹದಾಹ್ವಯ, ಭ್ರಾಂತಯೋಗಿ ಎಂದೂ ಹೆಸರು. ಇವರು ಜನ ರಲ್ಲಿದ್ದ ಭ್ರಾಂತಿಯನ್ನು, ಕತ್ತಿಯಿಂದ ಕತ್ತರಿಸುವಂತೆ, ತುಂಡರಿಸುತ್ತಿದ್ದುದರಿಂದ ಇವರಿಗೆ ದೇವರ ಹುಚ್ಚು ಹತ್ತಿದ್ದಿತೆಂದು ಹೇಳುತ್ತಿದ್ದರು.

"ಸಿರಿಯನ್ನು, ಚಿನ್ನದ ಒಡಲನ್ನು, ಹೊಳೆಯುವ ಸೂರ್ಯನ ಚಲುವಾದ ಪ್ರಭೆಯನ್ನು, ಸಮುದ್ರವರ್ಣದ ಹರಿಯನ್ನು ಕಂಡೆ".—ಇದು ಇವರು ರಚಿಸಿ ಹಾಡಿದ **ಮೂರನೆಯ ತಿರುವಂದಾದಿ** ಎಂಬ ನೂರು ಪದ್ಯಗಳ ಸಾರ.

## 4. ತಿರುಮಳಿಶೈ ಆಳ್ವಾರ್

ಮಖಾಯಾಂ ಮಕರೇ ಮಾಸೇ ಚಕ್ರಾಂಶಂ ಭಾರ್ಗವೋದ್ಭವಂ ।
ಮಹೀಸಾರ ಪುರಾಧೀಶಂ ಭಕ್ತಿಸಾರಮಹಂಭಜೇ ॥ ೧ ॥

ಶಕ್ತಿ ಪಂಚಮಯ ವಿಗ್ರಹಾತ್ಮನೇ ।
ಶುಕ್ತಿಹಾರಜಿತ ಚಿತ್ತಹಾರಿಣೇ ॥
ಮುಕ್ತಿದಾಯಕ ಮುರಾರಿ ಪಾದಯೋ ।
ರ್ಭಕ್ತಿಸಾರಮುನಯೇ ನಮೋನಮಃ ॥ ೨ ॥

ಪಲ್ಲವ ರಾಜ್ಯದ ಮದರಾಸು ನಗರದ ಬಳಿಯ ಪೂನ್ನಮಲ್ಲೈ ಹತ್ತಿರದ ಮಹೀಸಾರಪುರವೆಂಬ ಕ್ಷೇತ್ರ ಅಥವಾ ತಿರುಮಳಿಶೈ ಎಂಬಲ್ಲಿ, ಭೃಗು ಮಹರ್ಷಿಯ ಪುತ್ರ ಭಾರ್ಗವ ಋಷಿಯು ತಪಸ್ಸು ಮಾಡಿದ ಸ್ಥಳದಲ್ಲಿ, ಸುದರ್ಶನ ಚಕ್ರದ ಅವತಾರವಾಗಿ ಜನಿಸಿದರು.

ಭಾರ್ಗವ ಋಷಿಯು ತಂದೆ, ಕನಕಾಂಗಿ ಎಂಬ ಅಪ್ಸರ ಸ್ತ್ರೀಯು ತಾಯಿ. ಬಿದಿರು ಕತ್ತರಿಸುವ ಬೇಡ ತಿರುವಾಳರ್ ಎಂಬುವನು ಸಾಕು ತಂದೆ, ಅವನ ಪತ್ನಿ ಪಂಗಯಚ್ಚೆಲ್ವಿಯಾರ್ ಸಾಕು ತಾಯಿ. ಇವರಿಗೆ ಭಕ್ತಿಸಾರಮುನಿ ಎಂದೂ ಹೆಸರು.

ಕುಂಭಕೋಣದ ಸಾರಂಗಪಾಣಿಯ ದೇವಾಲಯದಲ್ಲಿ ಕೆಲಕಾಲ ಇದ್ದ ಇವರು ತುಂಬಾ ವಿನಯಶೀಲರು. ಮೊದಲು ನಿಷ್ಠಾವಂತ ಶಿವಭಕ್ತ, ಸಿದ್ಧ, ಆಗಿದ್ದು ಶಿವವಾಕ್ಯರ್ ಎಂಬ ಹೆಸರನ್ನು ಹೊಂದಿದ್ದರು. ಪೇಯಾಳ್ವಾರರ ಪ್ರಭಾವಕ್ಕೆ ಸಿಲುಕಿ ವಿಷ್ಣುಭಕ್ತರಾದರು. ವಿವಿಧ ದಿವ್ಯಕ್ಷೇತ್ರಗಳಿಗೆ ಹೋಗಿಬಂದು ವಿಷ್ಣುಮೂರ್ತಿಗಳ ದರ್ಶನ ಮಾಡಿದರು.

ಹಿಂದಣ ಮೊದಲಾಳ್ವಾರುಗಳಂತೆ ಕೇವಲ ಭಕ್ತಿಯೇ ಅಲ್ಲದೆ ತತ್ವಾರ್ಥ ಚಿಂತನೆಯಲ್ಲಿಯೂ ತೊಡಗಿದರು. ಹಲವು ದೇವತೆಗಳನ್ನು ಪೂಜಿಸುವ ಪದ್ಧತಿಯನ್ನು ಅಲ್ಲಗಳೆದು ಏಕದೇವೋಪಾಸನೆಯನ್ನು ಎತ್ತಿಹಿಡಿದರು.

**ನಾನ್ಮುಗಂ ತಿರುವಂದಾದಿ, ತಿರುಚ್ಚಂದವಿರುತ್ತಂ** ಎಂಬ ಗೀತೆಗಳನ್ನು ರಚಿಸಿ ಹಾಡಿದ್ದಾರೆ. ಇವರ ಶೈಲಿ ಕಠಿಣ, ಕಾವ್ಯಮಯ, ಪ್ರತಿಭಾನ್ವಿತ ಆದುದು. ಇವರ ತಿರುಚ್ಚಂದವಿರುತ್ತಂ ಎಂಬುದು ವೇದಾಂತ ಗ್ರಂಥ. ಇವರ ಕೃತಿಗಳಲ್ಲಿ ವೇದಗಳ ಸಾರವೂ, ಆಗಮಗಳ ತಿರುಳೂ ಇದೆ.

"ಈ ಜಗತ್ತೆಲ್ಲ ಭಗವಂತನಲ್ಲಿ ಹುಟ್ಟಿ ಅಳಿಯುತ್ತದೆ. ಈ ಜಗತ್ತನ್ನು ಸೃಷ್ಟಿಸಿ, ಅದರಲ್ಲಿ ಅವತರಿಸಿದ ಶ್ರೀಮನ್ನಾರಾಯಣನು ಯಾವ ಒಂದು ತಾವಿಗೂ ಅಂಟಿಕೊಳ್ಳದ ಸೂಕ್ಷ್ಮ ವಸ್ತು. ಜಗತ್ತು ಅವನ ಶರೀರ, ಅವನು ಜಗತ್ತಿನ ಆತ್ಮ, ಜೀವಿಗೂ ಭಗವಂತನಿಗೂ ಎಡಬಿಡದ, ಅಳಿಸಲಾರದ ಸಂಬಂಧವಿದೆ.

"ದೇವರು ಸ್ವಾಮಿ, ಜೀವನು ದಾಸ; ದೇವರು ನಿಯಂತ್ರಕ, ಜೀವನು ನಿಯಂತ್ರಿತ. ದೇವರನ್ನು ಹೊಂದಲು ತಪಸ್ಸು, ಕರ್ಮಗಳಿಂದ ಸಾಧ್ಯವಿಲ್ಲ. ಅದಕ್ಕೆ ನವವಿಧ ಭಕ್ತಿಯೊಂದೇ ಸಹಾಯಕವಾದ ಮಾರ್ಗ.

"ದೇವರನ್ನು ಬಿಟ್ಟು ನಾವು, ನಮ್ಮನ್ನು ಬಿಟ್ಟು ದೇವರು, ಇರಲಾರ. ನಾರಾಯಣನ ಕೃಪೆಗೆ ನಾವು ಎಂದೆಂದಿಗೂ ಪಾತ್ರರು. ಶ್ರೀಹರಿಯ ಪಾದ ಕಮಲಗಳೇ ನಮಗೆ ಗತಿ" ಎಂಬುದು ಇವರ ಪದ್ಯಗಳಲ್ಲಿನ ಸಾರ. ಇವರ ಭಾವನೆ ಗಳು ಆಚಾರ್ಯ ಯಾಮುನರ ಪುರುಷ ನಿರ್ಣಯವೆಂಬ ಗ್ರಂಥದಲ್ಲಿ ಕಾಣಬರುತ್ತವೆ.

## 5. ಕುಲಶೇಖರಾಳ್ವಾರ್

ಕುಂಭೇ ಪುನರ್ವಸೂಜಾತಂ ಕೇರಳೇ ಚೋಳ ಪಟ್ಟಣೇ ।
ಕೌಸ್ತುಭಾಂಶಂ ಧರಾಧೀಶಂ ಕುಲಶೇಖರಮಾಶ್ರಯೇ ॥ ೧ ॥
ಪುಷ್ಯತೇ ಯತ್ರ ನಗರೇ ರಂಗಯಾತ್ರಾ ದಿನೇ ದಿನೇ ।
ತಮಹಂ ಶಿರಸಾವಂದೇ ರಾಜಾನಂ ಕುಲಶೇಖರಂ ॥ ೨ ॥

ಕೌಸ್ತುಭ ಮಣಿಯ ಅವತಾರವಾದ ಇವರು ಚೇರ ರಾಜ್ಯದಲ್ಲಿ ಇಕ್ಷ್ವಾಕು ವಂಶದ ಶಿಬಿ ಚಕ್ರವರ್ತಿಯ ಮಗ ದೃಢವ್ರತ ರಾಜನ ಮಗನಾಗಿ ಕೊಲ್ಲಿ ನಗರ ಅಥವಾ ತಿರುವಂಜಿಕ್ಕಳಂ ಎಂಬಲ್ಲಿ ಹುಟ್ಟಿದರು. ಇವರಿಗೆ ಕೊಲ್ಲಿಕಾವಲನ್ ಎಂದೂ ಹೆಸರು.

ಅತಿ ಶೀಘ್ರದಲ್ಲಿಯೇ ಆಡಳಿತ, ಯುದ್ಧ, ವಿಜ್ಞಾನ, ಕಲೆ, ಶಾಸ್ತ್ರ, ಧರ್ಮ ಮುಂತಾದುವುಗಳಲ್ಲಿ ಪಾರಂಗತರಾದರು. ತಮಿಳು, ಸಂಸ್ಕೃತ ಎರಡರಲ್ಲಿಯೂ ವಿದ್ವಾಂಸರಾದರು. ಧೀರಯೋಧರಾಗಿದ್ದು ಪಲ್ಲವ, ಪಾಂಡ್ಯರಾಜರನ್ನು ಸೋಲಿಸಿ ತಮ್ಮ ರಾಜ್ಯವನ್ನು ವಿಸ್ತರಿಸಿದರು.

ಸಮರ್ಥ ರಾಜನಾಗಿದ್ದರೂ ಯಾವಾಗಲೂ ಪಾರಮಾರ್ಥಿಕ ಚಿಂತನೆಯಲ್ಲಿ, ಮತಗ್ರಂಥಗಳ ಕಾಲಕ್ಷೇಪದಲ್ಲಿ, ಶ್ರೀವೈಷ್ಣವರ ಸತ್ಸಂಗದಲ್ಲಿ ಇರುತ್ತಿದ್ದು ಭಕ್ತಿ ವೈರಾಗ್ಯ ಜ್ಞಾನಸಂಪನ್ನರೆನಿಸಿಕೊಂಡಿದ್ದರು. ಸತತವಾದ, ಆವೇಶಪೂರಿತ, ಆತ್ಮ ನಿವೇದಕ ಭಕ್ತಿ, ಅದಕ್ಕೆ ಪೋಷಕವಾದ ಜ್ಞಾನ, ಜ್ಞಾನದ ಫಲದ ವೈರಾಗ್ಯ ಇವರಲ್ಲಿದ್ದಿತು.

"ನೀನು ದುಃಖ ಕೊಟ್ಟರೆ ನೀನೇ ಅದನ್ನು ಪರಿಹರಿಸುವೆ. ಆದುದರಿಂದ ನೀನು ನನ್ನನ್ನು ಬಿಟ್ಟರೂ ನಾನು ನಿನ್ನನ್ನು ಬಿಡಲೊಲ್ಲೆ. ನಿನ್ನಲ್ಲಿ ನಂಬಿಕೆ ಇಟ್ಟು, ನಿನ್ನ ದಾಸನಾಗಿ, ನಿನ್ನ ಸೇವೆಗಾಗಿ ಕಾದು, ನಿನ್ನ ಕೃಪೆಯನ್ನೇ ಬಯಸುತ್ತಿರುತ್ತೇನೆ. ಕೊನೆಗೆ ನೀನೇ ನನಗೆ ಶರಣು" ಎನ್ನುವ ಪ್ರಪತ್ತಿ ಮಾರ್ಗ ಇವರದು.

ದಿವ್ಯ ದೇಶಗಳ ಯಾತ್ರೆ ಮಾಡಿ ಅಲ್ಲಿನ ಅರ್ಚಾ ಮೂರ್ತಿಗಳನ್ನು ಸಂದರ್ಶಿಸಿ, ಆ ಭಗವದನುಭವಜನಿತವಾದ ಆನಂದಪರವಶತೆಯು ಇವರು ರಚಿಸಿರುವ **ಪೆರು ಮಾಳ್ ತಿರುಮೊಳಿ**ಯಲ್ಲಿ ಕಾಣಬರುತ್ತದೆ. ಚಿತ್ರಕೂಟದ ಶ್ರೀರಾಮ, ತಿರುಪತಿಯ ಶ್ರೀನಿವಾಸ, ಶ್ರೀರಂಗದ ರಂಗನಾಥ, ಮನ್ನಾರ್ ಕೋಯಿಲಿನ ರಾಜ

ಮನ್ನಾರ್ — ಈ ದೇವರುಗಳನ್ನು ಕುರಿತು ಹಾಡಿದ್ದಾರೆ. ಶ್ರೀವೈಷ್ಣವ ವಿರೋಧಿಯಾದ ಚೋಳ ರಾಜನೇ ಇವರ ಕೃತಿಯನ್ನು ಶ್ರೀರಂಗದ ರಂಗನಾಥಸ್ವಾಮಿಯ ಎದುರಿಗೆ ಹಾಡುವ ವ್ಯವಸ್ಥೆಯನ್ನು ಮಾಡಿದ್ದನೆಂದರೆ ಇದರ ಮಹತ್ವದ ಅರಿವಾಗುತ್ತದೆ. ಸಂಸ್ಕೃತ ಭಾಷೆಯಲ್ಲಿ **ಮುಕುಂದ ಮಾಲೆ** ಎಂಬ ಪದ್ಯಗಳ ಮೂಲಕ ಭಗವಂತನನ್ನು ಸ್ತುತಿಗೈದ ಆಳ್ವಾರ್ ಇವರೊಬ್ಬರೇ. ತನ್ನ ಮಗಳಾದ ಮಲಯಾಳ ನಾಚ್ಚಿಯಾರ್ ಅಥವಾ ನೀಳಾದೇವಿಯನ್ನು ರಂಗನಾಥ ಸ್ವಾಮಿಗೇ ವಿವಾಹ ಮಾಡಿಕೊಟ್ಟ ಭಾಗ್ಯಶಾಲಿ ಮಾವ.

## 6. ಪೆರಿಯಾಳ್ವಾರ್

ಜ್ಯೇಷ್ಠೇ ಸ್ವಾತೀಭವಂ ವಿಷ್ಣು ರಥಾಂಶಂ ಧನ್ವಿನಃ ಪುರೇ |
ಪ್ರಪದ್ಯೇಶ್ವಶುರಂ ವಿಷ್ಣೋರ್ವಿಷ್ಣುಚಿತ್ತಂ ಪುರಶ್ಶಿಖಂ || ೧ ||
ಗುರುಮುಖಮನಧೀತ್ಯ ಪ್ರಾಹವೇದಾನಶೇಷಾನ್
ನರಪತಿ ಪರಿಕ್ಲಿಪ್ತಂ ಶುಲ್ಕಮಾದಾತು ಕಾಮಃ ||
ಶ್ವಶುರಮಮರ ವಂದ್ಯಂ ರಂಗನಾಥಸ್ಯ ಸಾಕ್ಷಾತ್
ದ್ವಿಜಕುಲತಿಲಕಂ ತಂ ವಿಷ್ಣುಚಿತ್ತಂ ನಮಾಮಿ || ೨ ||

ಪಾಂಡ್ಯ ರಾಜ್ಯದಲ್ಲಿ ಗರುಡನ ಅವತಾರವಾದ ಇವರು ಶ್ರೀ ವಿಲ್ಲಿಪಿತ್ತೂರಿನಲ್ಲಿ ಬ್ರಾಹ್ಮಣ ವಂಶದಲ್ಲಿ ಜನಿಸಿದರು. ಮುಕುಂದಾಚಾರ್ಯರು ತಂದೆ, ಪದ್ಮಾದೇವಿ ತಾಯಿ. ಇವರಿಗೆ ವಿಷ್ಣುಚಿತ್ತ, ಭಟ್ಟನಾಥ, ಪಟ್ಟರ್ ಪಿರಾನ್ ಎಂದೂ ಹೆಸರು.

ದೊಡ್ಡ ಜ್ಞಾನಿಯಾದರೂ ಕರ್ಮಯೋಗಿಯಾಗಿ ತುಲಸಿ, ಹೂಗಳ ತೋಟವನ್ನು ಬೆಳೆಸಿ, ಶ್ರೀ ವಿಲ್ಲಿಪಿತ್ತೂರಿನ ದೇವಾಲಯದಲ್ಲಿ ಆಲದೆಲೆಯ ಮೇಲೆ ಶಿಶುರೂಪದಲ್ಲಿ ಮಲಗಿರುವ ಜಗದೀಶ್ವರ ಅಥವಾ ವಟಪತ್ರಶಾಯಿಗೆ ಮಾಲೆಯನ್ನು ಕಟ್ಟುವ ಕೈಂಕರ್ಯ ಮಾಡುತ್ತಿದ್ದರು. ತಿರುಕ್ಕೋಟ್ಟಿಯೂರ್ ಅಥವಾ ಗೋಷ್ಠೀಪುರ ಎಂಬ ಊರಿನ ನಾಯಕನಾದ ಶೆಲ್ವ ಎಂಬುವನ ಆಶ್ರಯದಲ್ಲಿ ಬೆಳೆದ ಇವರು ಅವನಲ್ಲಿ ತುಂಬಾ ಅಭಿಮಾನ ಹೊಂದಿದ್ದರು.

ತಿರುಮೊಳಿ, ತಿರುಪ್ಪಲ್ಲಾಂಡು ಎಂಬ ಇವರು ಹಾಡಿ ರಚಿಸಿದ ಪದ್ಯಗಳು ವಾತ್ಸಲ್ಯಭಕ್ತಿಯ ಪ್ರತೀಕ. ಕಾವ್ಯದ ಸ್ಫೂರ್ತಿ, ಭವ್ಯ ಕಲ್ಪನೆ, ಭಕ್ತಿಯ ಆವೇಶ, ಸೌಂದರ್ಯಲಹರಿ, ಸಂಗೀತದ ಝರಿ ಎಲ್ಲ ಇವರ ಪದ್ಯಗಳಲ್ಲಿದೆ. ಭಗವಂತನಲ್ಲಿ ದಾಸ್ಯ, ಭಗವಂತನಿಗೆ ಕೈಂಕರ್ಯ ಇವೆರಡೇ ಮುಕ್ತಿಗೆ ದಾರಿ ಎಂಬ ಭಾವನೆಯು ಇವರ ಕೃತಿಯಲ್ಲಿದೆ.

ಪಾಂಡ್ಯರಾಜನ ಆಸ್ಥಾನದಲ್ಲಿ, ತಮ್ಮ ಅದ್ಭುತವಾದ ವಾಕ್ಯಾರ್ಥದಿಂದ, ಶ್ರೀಮನ್ನಾರಾಯಣನೇ ಪರತತ್ತ್ವ ಎಂಬ ವಿಷ್ಣು ಪಾರಮ್ಯವನ್ನು ಸ್ಥಾಪಿಸಿ, ಅದಕ್ಕಾಗಿ ಇಟ್ಟಿದ್ದ ಬಹುಮಾನ ನಿಧಿಯನ್ನು ಪಡೆದರು. ಪಂಡಿತರಲ್ಲಿ ಹಿರಿಯರು ಎಂಬ ಬಿರುದೂ ಬಂದಿತು. ಬಂದ ಹಣವನ್ನೆಲ್ಲ ವಟಪತ್ರಶಾಯಿಯ ದೇವಾಲಯದ ಜೀರ್ಣೋದ್ಧಾರಕ್ಕಾಗಿ ಅರ್ಪಿಸಿದರು.

ಭೂದೇವಿಯು ಕೊಟ್ಟ ವರವೆನಿಸಿದ ಗೋದೆ ಅಥವಾ ಆಂಡಾಳ್ ಎಂಬ ಮಗುವನ್ನು ಸಾಕಿ ದೊಡ್ಡ ಭಕ್ತೆಯಾಗಿ ಮಾಡಿ, ಅವಳನ್ನು ಶ್ರೀರಂಗದ ರಂಗನಾಥಸ್ವಾಮಿಗೆ ವಿವಾಹಮಾಡಿಕೊಟ್ಟ ಭಾಗ್ಯಶಾಲಿ ಮಾವ.

## 7. ಆಂಡಾಳ್ ಆಳ್ವಾರ್

ಆಷಾಢೇ ಪೂರ್ವ ಫಲ್ಗುನ್ಯಾಂ ತುಲಸೀ ಕಾನನೋದ್ಭವಾಂ ।
ಪಾಂಡ್ಯೇ ವಿಶ್ವಂಭರಾಂ ಗೋದಾಂ ವಂದೇ ಶ್ರೀರಂಗನಾಯಕೀಂ ॥ ೧ ॥
ನೀಳಾತುಂಗಸ್ತನಗಿರಿತಟೀ ಸುಪ್ತ ಮುದ್ಬೋಧ್ಯ ಕೃಷ್ಣಂ ।
ಪಾರಾರ್ಥ್ಯಂಸ್ವಂ ಶ್ರುತಿಶತಶಿರಸ್ಸಿದ್ಧ ಮಧ್ಯಾಪಯಂತೀಂ ॥
ಸ್ವೋಚ್ಛಿಷ್ಟಾಯಾಂ ಸ್ರಜಿನಿಗಳಿತಂ ಯಾ ಬಲಾತ್ಕೃತ್ಯ ಭುಂಕ್ತೇ
ಗೋದಾತಸ್ಯೈ ನಮ ಇದಮಿದಂ ಭೂಯ ಏವಾಸ್ತು ಭೂಯಃ ॥ ೨ ॥

ನೀಳಾ ಅಥವಾ ಭೂದೇವಿಯ ಅವತಾರವಾದ ಗೋದೆ ಅಥವಾ ಆಂಡಾಳ್, ಪಾಂಡ್ಯರಾಜ್ಯದಲ್ಲಿ ಪೆರಿಯಾಳ್ವಾರರ ತುಲಸೀತೋಟದಲ್ಲಿ ದೊರೆತ ಶಿಶು. ತಂದೆಯ ಮುದ್ದು ಕುವರಿಯಾಗಿ ಭಕ್ತಿಯ ವಾತಾವರಣದಲ್ಲಿ ಬೆಳೆದಳು. ತಂದೆಯಿಂದ ಭಗವಂತನ ರೂಪ, ಗುಣ, ಸೌಂದರ್ಯ, ಲೀಲೆಗಳನ್ನು ಕೇಳಿ ಅವನಲ್ಲೇ ಪ್ರೇಮ ಬೆಳೆಸಿಕೊಂಡಳು.

ದಿನವೂ ದೇವರಿಗೆ ಹಾರ ಕಟ್ಟುವ ಕೆಲಸದಲ್ಲಿ ತಂದೆಗೆ ನೆರವಾಗುತ್ತಿದ್ದಳು. ಕಟ್ಟಿಟ್ಟಿದ್ದ ಹಾರವನ್ನು ತಂದೆಗೆ ಗೊತ್ತಿಲ್ಲದಂತೆ ತಾನು ಮುಡಿದುಕೊಂಡು, ಕನ್ನಡಿಯಲ್ಲಿ ನೋಡಿ, ತನಗೆ ಸೊಗಯಿಸುವ ಹಾರವು ಭಗವಂತನಿಗೂ ಒಪ್ಪಿಗೆಯಾಗುತ್ತದೆಂದು ಭರವಸೆ ಹೊಂದಿದ್ದ ಭಕ್ತೆ. ಭಕ್ತಿ–ಪ್ರೇಮಗಳ ಕಂಪು ಇರುವ, ಆಂಡಾಳ್ ಮುಡಿದ ಹೂಗಳೇ ಸುವಾಸನೆಯುಳ್ಳದ್ದು ಹಾಗೂ ತನಗೆ ಪ್ರಿಯವಾದುದು ಎಂದು ಭಗವಂತನು ಹೇಳಿದುದರಿಂದ, ಇವಳಿಗೆ ಶೂಡಿಕ್ಕೊಡುತ್ತ ನಾಚ್ಚಿಯಾರ್ ಎಂಬ ಹೆಸರು ಬಂದಿತು.

ಜೀವವೆಂಬುದು ಹೆಣ್ಣು, ಪರಮಾತ್ಮನೊಬ್ಬನೇ ಗಂಡು, ಅವನಿಗೆ ಎಲ್ಲ ಮೀಸಲು, ಎಂಬ ಕಷ್ಟದ ಕಾಂತಭಾವಮಾರ್ಗವನ್ನು ಅನುಸರಿಸಿ, ಭಕ್ತಿ ಜ್ಞಾನ

ವೈರಾಗ್ಯಗಳಿಂದ ಹಾಗೂ ಭಗವತ್ ಪ್ರೇಮದಿಂದ ತುಂಬಿದ ಈ ನಾರೀ ಹೃದಯವು **ತಿರುಪ್ಪಾವೈ, ನಾಚ್ಚಿಯಾರ್ ತಿರುಮೊಳಿ, ವಾರಣಮಾಯಿರಂ** ಎಂಬ ಭಕ್ತಿ ಗೀತೆಗಳನ್ನು ರಚಿಸಿ ಹಾಡಿ ಆಂಡಾಳ್ ಎನಿಸಿಕೊಂಡಿತು. ಕೊನೆಯಲ್ಲಿ ಶ್ರೀರಂಗದ ರಂಗನಾಥಸ್ವಾಮಿಯಲ್ಲಿ ಐಕ್ಯಳಾಗಿ ರಂಗನಾಯಕಿ, ರಂಗಧಾಮೇಶ್ವರಿ, ಆಳ್ವಾರ್ ಎನಿಸಿಕೊಂಡಳು.

## 8. ತೊಂಡರಡಿಪ್ಪೊಡಿಯಾಳ್ವಾರ್

ಕೋದಂಡೇ ಜ್ಯೇಷ್ಠ ನಕ್ಷತ್ರೇ ಮಂಡಂಗುಡಿ ಪುರೋದ್ಭವಂ ।
ಚೋಳೋರ್ವ್ಯಾಂ ವನಮಾಲಾಂಶಂ ಭಕ್ತಾಂಘ್ರಿರೇಣುಮಾಶ್ರಯೇ ॥ ೧ ॥
ತಮೇವಮತ್ವಾಪರವಾಸುದೇವಂ ।
ರಂಗೇಶಯಂ ರಾಜವದರ್ಹಣೀಯಂ ।
ಪ್ರಾಬೋಧಕೀಂಯೋಕೃತ ಸೂಕ್ತಿಮಾಲಾಂ ।
ಭಕ್ತಾಂಘ್ರಿರೇಣುಂ ಭಗವಂತಮೀಡೇ ॥ ೨ ॥

ಚೋಳ ರಾಜ್ಯದಲ್ಲಿ ವನಮಾಲೆಯ ಅವತಾರವಾದ ಇವರೂ ಶ್ರೀ ರಂಗನಾಥನಿಗೆ ಮಾಲಾಕಾರನಾಗಿ, ಪುಷ್ಪಮಾಲೆಯ ಕೈಂಕರ್ಯವನ್ನು ಮಾಡುತ್ತ ಜೀವ ಸವೆಸಿದ ಶ್ರೇಷ್ಠ ಭಕ್ತರು. ವಿಪ್ರನಾರಾಯಣ, ಭಕ್ತಾಂಘ್ರಿ ರೇಣು ಎಂದೂ ಇವರಿಗೆ ಹೆಸರು. ಕುಂಭಕೋಣದ ಬಳಿಯ ಮಂಡಂಗುಡಿ ಎಂಬ ಊರಿನಲ್ಲಿ ಯಜ್ವನಾಥರ ಮಗನಾಗಿ ಜನಿಸಿದ ಶ್ರೇಷ್ಠ ಬ್ರಾಹ್ಮಣ ಪಂಡಿತರು.

ಜ್ಞಾನಭಕ್ತಿ ವೈರಾಗ್ಯ ಶಿರೋಮಣಿಯಾಗಿ, ಬ್ರಹ್ಮಚಾರಿಯಾಗಿಯೇ ಉಳಿದಿದ್ದ ಇವರು, ಪ್ರಾರಬ್ಧ ಕರ್ಮದಿಂದ ದೇವ ದೇವಿಯೆಂಬ ನರ್ತಕಿಯ ಪ್ರೇಮದ ಕುಣಿಕಿಗೆ ಸಿಲುಕಿ, ಅಪವಾದ–ನಿಂದೆಗಳಿಗೆ ಗುರಿಯಾಗಿ ಮನನೊಂದಾಗ, ಪಶ್ಚಾತ್ತಾಪದಿಂದ ಬೆಂದು ಮತ್ತೆ ಭಗವದ್ಭಕ್ತರಾದರು. ಅಲ್ಲದೆ ಆ ನರ್ತಕಿಯನ್ನೂ ಭಕ್ತಳಾಗಿ ಪರಿವರ್ತಿಸಿದರು.

ತಮ್ಮ ಭಗವದನುಭವ ಜನಿತವಾದ ಪ್ರೀತ್ಯತಿಶಯಗಳನ್ನು ತಮ್ಮ ಶ್ರೇಷ್ಠ ಕೃತಿಗಳಾದ **ತಿರುಪ್ಪಳ್ಳಿಯೆಳುಚ್ಚಿ, ತಿರುಮಾಲೈ**ಗಳಲ್ಲಿ ಹಾಡಿದ್ದಾರೆ.

## 9. ತಿರುಪ್ಪಾಣಾಳ್ವಾರ್

ಕಾರ್ತಿಕೇರೋಹಿಣೀಜಾತಂ ಶ್ರೀ ಪಾಣಂ ನಿಚುಳಾಪುರೇ ॥
ಶ್ರೀವತ್ಸಾಂಶಂ ಗಾಯಕೇಂದ್ರಂ ಮುನಿವಾಹನಮಾಶ್ರಯೇ ॥ ೧ ॥

ಆಪಾದ ಚೂಡ ಮನುಭೂಯ ಹರಿಂ ಶಯಾನಂ
ಮಧ್ಯೇಕವೇರ ದುಹಿತು ರ್ಮುದಿತಾಂತರಾತ್ಮಾ ||
ಅದ್ರಷ್ಟತಾಂ ನಯನಯೋರ್ವಿಷಯಾಂತರಾಣಾಂ
ಯೋ ನಿಶ್ಚಿಕಾಯ ಮುನವೈರ್ಮುನಿವಾಹನಂ ತಂ || ೨ ||

ಚೋಳ ರಾಜ್ಯದಲ್ಲಿ ಶ್ರೀರಂಗದ ಬಳಿಯ ನಿಚುಳಾಪುರ ಅಥವಾ ಉರೈಯೂರ್ ಎಂಬಲ್ಲಿ ಶ್ರೀವತ್ಸದ ಅವತಾರವಾದ ಇವರು, ಅಂತ್ಯ ಕುಲದಲ್ಲಿ ಹುಟ್ಟಿದ್ದರೂ ವೈಷ್ಣವ ಸಂತರೆನಿಸಿಕೊಂಡು ಬಾಳಿದರು. ಇವರಿಗೆ ಪಾಣ್ ಪೆರುಮಾಳ್, ಮುನಿವಾಹನ ಎಂಬ ಹೆಸರು ಇದ್ದುವು. ಭಗವದ್ಧ್ಯಾನ ವಿದ್ಯಾಸಾರ್ವಭೌಮನೆಂಬ ಬಿರುದೂ ಇದ್ದಿತು. ತಮ್ಮ ಶಾಂತ ಸ್ವಭಾವ, ನಿರ್ಮಲ ಭಕ್ತಿ, ಮಧುರ ಗಾನಗಳಿಂದ ಎಲ್ಲರ ಪ್ರಶಂಸೆಗೂ ಪಾತ್ರರಾಗಿದ್ದರು.

ಒಳಗೆ ಬರಲು ಅವಕಾಶವಿಲ್ಲದೆ, ಶ್ರೀರಂಗದ ರಂಗನಾಥನ ದೇವಾಲಯದ ಬಾಗಿಲಿಗೆ ಎದುರಾಗಿ ನದಿಯ ದಡದಲ್ಲಿ ಕುಳಿತು, ತಾನು ರಚಿಸಿದ ಭಕ್ತಿ ಗೀತೆಗಳನ್ನು, ಸಾಕುತಂದೆಯಾದ ಪಾಣನಿಂದ ಕಲಿತ ವೀಣೆಯೊಂದಿಗೆ ಮೈಮರೆತು ಹಾಡುತ್ತಿದ್ದರು.

ಉಚ್ಚಕುಲದ ಅಹಂಭಾವದಿಂದ ದೂರ ಹೋಗೆಂದು ಇವರನ್ನು ದೂಷಿಸಿದ ಪ್ರಧಾನ ಅರ್ಚಕರಾದ ಲೋಕ ಸಾರಂಗ ಮುನಿಗಳು, ಜ್ಞಾನೋದಯವಾದನಂತರ ಪಶ್ಚಾತ್ತಾಪಪಟ್ಟು, ರಂಗನಾಥಸ್ವಾಮಿಯ ಆಣತಿಯಂತೆ ಈ ಹರಿಜನೋತ್ತಮನನ್ನು ತಮ್ಮ ಹೆಗಲಮೇಲೆ ಕುಳ್ಳಿರಿಸಿಕೊಂಡು, ಏಳು ಪ್ರಾಕಾರಗಳ ಮೂಲಕ ದೇವಾಲಯದೊಳಕ್ಕೆ ಕರೆತಂದು ದೇವಮೂರ್ತಿಯ ದರ್ಶನ ಮಾಡಿಸಿದರು. ಜ್ಞಾನದ ವಾಹನವನ್ನೇರಿ ಭಕ್ತಿಯ ಹಾದಿಯಲ್ಲಿ ನಡೆದರು ಇವರು.

ದೇವಮೂರ್ತಿಯ ದರ್ಶನದ ಅನುಭವದಿಂದ ಹುಟ್ಟಿದ ಪ್ರೀತ್ಯತಿಶಯದಿಂದ ಇವರಲ್ಲಿ ಹೊರಹೊಮ್ಮಿದ ಗೀತೆ **ಅಮಲನಾದಿಪಿರಾನ್.** ಇದರಲ್ಲಿ ದೇವರನ್ನು ಕಾಲಿನಿಂದ ತಲೆಯವರೆಗೆ ದರ್ಶಿಸಿ ವರ್ಣಿಸಿದ್ದಾರೆ. ದಾಸ್ಯ, ಶೇಷತ್ವ ಭಾವವನ್ನು ತಳೆದು ಸಿದ್ಧಿ ಪಡೆದರು.

## 10. ತಿರುಮಂಗೈ ಆಳ್ವಾರ್

**ಕಾರ್ತಿಕೇ ಕೃತ್ತಿಕಾಜಾತಂ ಚತುಷ್ಕವಿ ಶಿಖಾಮಣಿಂ ।**
ಷಟ್ಪ್ರಬಂಧಕೃತಂ ಶಾರ್ಙ್ಗಮೂರ್ತಿಂ ಕಲಿಯಮಾಶ್ರಯೇ || ೧ ||
ಕಲಿಯಾಮಿ ಕಲಿಧ್ವಂಸಂ ಕವಿಂ ಲೋಕ ದಿವಾಕರಂ ।
ಯಸ್ಯ ಗೋಭಿಃ ಪ್ರಕಾಶಾಭಿರಾವಿದ್ಯಂ ನಿಹಿತಂ ತಮಃ || ೨ ||

ಚೋಳ ರಾಜ್ಯದ ತಿರುಕ್ಕುರಿಯಲೂರಿನಲ್ಲಿ ಶಾರ್ಙ್ಗ ಅವತಾರವಾಗಿ ಬೇಡರ ಕುಲದಲ್ಲಿ ಹುಟ್ಟಿ ನೀಲ ಎಂಬ ಹೆಸರಿದ್ದಿತು. ಕಲಿಯನ್, ಪರಕಾಲ, ತಿರುಮಂಗೈ

ಮನ್ನನ್, ನಾಲ್‌ಕವಿ ಪೆರುಮಾಳ್ ಎಂಬ ಹೆಸರುಗಳೂ ಇದ್ದುವು. ಇವರ ತಂದೆ ಅವಿನದುದಯರ್ ಎಂಬುವನು ಕಳ್ಳರ ಮುಖ್ಯಸ್ಥನಾಗಿದ್ದು ಚೋಳ ರಾಜನಿಗೆ ಕಪ್ಪ ಕೊಡುತ್ತಿದ್ದನು. ನೀಲನು ತಂದೆಯಂತೆಯೇ ಧೈರ್ಯ–ಪರಾಕ್ರಮಗಳಿಂದ ಯುದ್ಧ ಗಳಲ್ಲಿ ಕಾದಿ, ಗೆದ್ದು, ಚೋಳರಾಜನಿಂದ ಸನ್ಮಾನವನ್ನು ಪಡೆದು ತಿರುವಾಳಿ ನಾಡಿನ ಪಾಳೆಯಗಾರರಾದರು.

ಅನರ್ಥಕ್ಕೆ ಕಾರಣವಾದ ಯೌವನ, ಧನಸಂಪತ್ತು, ಆಕರ್ಷಕ ರೂಪ, ಪ್ರಭುತ್ವ, ಅವಿವೇಕ ಎಲ್ಲವನ್ನೂ ಹೊಂದಿದ್ದ ಇವರು ನೃತ್ಯ, ನಾಟಕ, ಸಂಗೀತ, ಕಾವ್ಯಗಳಲ್ಲಿ ಕುಶಲ, ಚತುರ, ರಸಿಕ ಆಗಿದ್ದು, ಹೆಣ್ಣುಗಳ ಬೇಟೆಯಲ್ಲಿ ಹಾಗೂ ಇಂದ್ರಿಯ ಸುಖದಲ್ಲಿ ಬಹುಕಾಲ ಆಸಕ್ತರಾಗಿದ್ದರು.

ವಿಷ್ಣುಭಕ್ತನಲ್ಲದವನನ್ನು ಮದುವೆಯಾಗೆನು ಎಂದು ಹೇಳಿದ ಅಪೂರ್ವ ಸುಂದರಿ ಮತ್ತು ಲಾವಣ್ಯವತಿಯಾದ ಕುಮುದವಲ್ಲಿ ಎಂಬುವಳನ್ನು ಮದುವೆಮಾಡಿ ಕೊಳ್ಳಬೇಕೆಂಬ ಹಠದಿಂದ, ಅವಳ ಅಪೇಕ್ಷೆಯಂತೆ, ಪಂಚ ಸಂಸ್ಕಾರ ಪಡೆದು ವೈಷ್ಣವನಾಗಿ, ಸಾವಿರದೆಂಟು ಜನರಿಗೆ ಒಂದು ವರ್ಷ ಕಾಲ ಭಾಗವತ ಸಂತರ್ಪಣೆ ಮಾಡುವ ಕೈಂಕರ್ಯದಲ್ಲಿ ತೊಡಗಿದರು. ಹಸಿದ ಹಾಗೂ ದರಿದ್ರ ಜನರಿಗೆ ಅನ್ನ ದಾನ ಮಾಡಿದುದರ ಫಲವಾಗಿ ಬೊಕ್ಕಸ ಬರಿದಾದಾಗ, ರಾಜನ ಕೋಪಕ್ಕೆ ಸಿಕ್ಕಿ ಕೆಲಸವನ್ನು ಕಳೆದುಕೊಂಡರು.

10153

ಮಾಮನಾದೃತ್ಯತು ಕೃತಂ ಪುಣ್ಯಂ ಪಾಪಾಯ ಕಲ್ಪತೇ ।
ಮನ್ನಿಮಿತ್ತಂ ಕೃತಂ ಪಾಪಮಪಿ ಪುಣ್ಯಾಯ ಕಲ್ಪತೇ ॥

ಎಂಬಂತೆ ಭಗವಂತನನ್ನು ಕಡೆಗಾಣಿಸಿ ಮಾಡಿದ ಪುಣ್ಯ ಕಾರ್ಯವೂ ಪಾಪವೇ, ಆದರೆ ಅವನಿಗಾಗಿ ಮಾಡಿದ ಪಾಪಕಾರ್ಯವೂ ಪುಣ್ಯಕಾರ್ಯವಾಗುತ್ತದೆ, ಎಂಬುದು ಇವರಿಗೆ ಧೈರ್ಯಕೊಟ್ಟುದರಿಂದ, ದಾರಿದ್ರ್ಯ ಬಂದಾಗ ತನ್ನ ಮೊದಲಿನ ಕಳವು, ಕೊಲೆ, ಸುಲಿಗೆಗಳಲ್ಲಿ ನಿರತರಾದರು.

ಒಮ್ಮೆ ಇವರ ಕೈಗೆ ಸಿಕ್ಕಿದ್ದ ದೇವ ದಂಪತಿಗಳಿಂದ ಮಂತ್ರೋಪದೇಶ ಪಡೆದುದ ರಿಂದ ಜ್ಞಾನೋದಯವಾಗಿ, ಅನೀತಿ ಜೀವನವನ್ನು ತ್ಯಜಿಸಿ, ಪರಮಾತ್ಮನ ಸೇವೆ ಯಲ್ಲಿ ನಿರತರಾಗಿ ಪದ್ಯಗಳನ್ನು ರಚಿಸಿ ಹಾಡಿದರು.

ರಾಮೇಶ್ವರದಿಂದ ಬದರಿಯವರೆಗೆ ಇರುವ ನೂರೆಂಟು ದಿವ್ಯ ದೇಶಗಳನ್ನೆಲ್ಲಾ ಸಂದರ್ಶಿಸಿ ಅಲ್ಲಿನ ಮೂರ್ತಿಗಳನ್ನು ಕುರಿತು ಹಾಡಿದ್ದಾರೆ. ನಮ್ಮಾಳ್ವಾರರು ದ್ರಾವಿಡವೇದ ಚತುಷ್ಟಯವನ್ನು ಕೊಟ್ಟಂತೆ, ಇವರು ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಆರು ವೇದಾಂಗಗಳಂತಿರುವ **ಪೆರಿಯ ತಿರುಮೊಳಿ, ತಿರುಕ್ಕುರುಂದಾಂಡಕಂ, ತಿರುನೆಡುಂದಾಂಡಕಂ, ತಿರುವೆಳಿಕ್ಕು ತ್ತಿರುಕ್ಕೈ, ಶಿರಿಯತಿರುಮಡಲ್, ಪೆರಿಯ ತಿರುಮಡಲ್** ಎಂಬ ಆರು

ಗೀತಾತ್ಮಕ ಕೃತಿಗಳನ್ನು, ಆಶು, ಮಧುರ, ಚಿತ್ರ, ವಿಸ್ತಾರ ಎಂಬ ನಾಲ್ಕು ರೀತಿಯಲ್ಲಿ ರಚಿಸಿ ಹಾಡಿದ್ದಾರೆ. ಶ್ರೀರಂಗದ ದೇವಾಲಯವನ್ನು ಜೀರ್ಣೋದ್ಧಾರಮಾಡಿ, ಪ್ರಾಕಾರ ಕಟ್ಟಿಸಿ, ಅಲ್ಲಿ ಅಧ್ಯಯನೋತ್ಸವವನ್ನು ಆರಂಭಿಸಿದರು. ನಮ್ಮಾಳ್ವಾರರ ಪ್ರತಿಮೆಯನ್ನೂ ಸ್ಥಾಪಿಸಿ, ತಿರುವಾಯ್ಮೊಳಿಯ ವಾಚನವಾಗುವಂತೆ ವ್ಯವಸ್ಥೆ ಮಾಡಿದರು.

## 11. ಮಧುರಕವಿ ಆಳ್ವಾರ್

ಚೈತ್ರೇ ಚಿತ್ರಾಸಮುದ್ಭೂತಂ ಪಾಂಡ್ಯದೇಶೇ ಖಗಾಂಶಕಂ ।
ಶ್ರೀ ಪರಾಂಕುಶ ಸದ್ಭಕ್ತಂ ಮಧುರಂ ಕವಿಮಾಶ್ರಯೇ ॥ ೧ ॥
ಹಸ್ತಸ್ಥತಾಳ ದ್ವಿತಯಃ ಪ್ರಪದ್ಯೇ ।
ಶಠಾರಿವಾಗ್ವ್ಯಾಸ ಮುದಾರ ಕೀರ್ತಿಂ ॥
ಮಾಧುರ್ಯ ಸಂಶ್ಲಿಷ್ಟ ಕವಿತ್ವಯುಕ್ತಂ ।
ಮಹತ್ವ ಸಂಭಾವಿತ ಬುದ್ಧಿ ತತ್ತ್ವಂ ॥ ೨ ॥

ಪಾಂಡ್ಯ ರಾಜ್ಯದ ತಾಮ್ರಪರ್ಣಿ ನದಿಯ ದಡದಲ್ಲಿನ ಆಳ್ವಾರ್ ತಿರುನಗರಿ ಬಳಿಯ ತಿರುಕ್ಕೋಯಿಲೂರಿನಲ್ಲಿ, ಗರುಡನ ಅವತಾರವಾದ ಇವರು ನಾರಾಯಣ ದೀಕ್ಷಿತರೆಂಬ ನಿಷ್ಠಾವಂತ ಬ್ರಾಹ್ಮಣನಾಗಿ ಜನಿಸಿದರು. ವೇದಶಾಸ್ತ್ರಾದಿಗಳಲ್ಲಿ ಪಾರಂಗತರಾಗಿದ್ದರು. ಮಧುರವಾದ ಕವಿತೆಗಳನ್ನು ರಚಿಸಿ ಮಧುರವಾಗಿ ಹಾಡುತ್ತಿದ್ದುದರಿಂದ ಇವರ ಹೆಸರು ಮಧುರಕವಿ ಎಂದೇ ಆಯಿತು.

ತಮಿಳುನಾಡಿನಲ್ಲಿ ದೇವರ ಮಹಿಮೆ, ನಮ್ಮಾಳ್ವಾರರ ಹಿರಿಮೆ ಮತ್ತು ತಿರುವಾಯ್ಮೊಳಿಯ ಪ್ರಭಾವ ಹರಡಲು ಇವರೇ ಕಾರಣರು. ತಿರುವಾಯ್ಮೊಳಿಯನ್ನು ರಾಗಬದ್ಧವಾಗಿ ಹಾಡಿಕೊಂಡು ಊರೂರು ಅಲೆದು ಹರಡಿದರು.

ದಿವ್ಯದೇಶಗಳನ್ನು ಸಂದರ್ಶಿಸಿ ಅಲ್ಲಿನ ಅರ್ಚಾಮೂರ್ತಿಗಳನ್ನು ಸೇವಿಸಿ ಹಿಂದಿರುವಾಗ, ಆಳ್ವಾರ್ ತಿರುನಗರಿಯ ಬಳಿ ಯೋಗನಿದ್ರೆಯಲ್ಲಿದ್ದ, ತೇಜಸ್ವಿಯಾದ, ನಮ್ಮಾಳ್ವಾರರನ್ನು ಸಂದರ್ಶಿಸಿ, ಅವರನ್ನೇ ಗುರುವೆಂದು ಒಪ್ಪಿ, ಅವರಿಂದ ತತ್ತ್ವ, ಹಿತ, ಪುರುಷಾರ್ಥಗಳೆನ್ನೆಲ್ಲಾ ತಿಳಿದುಕೊಂಡರು. ದೇವರನ್ನು ಸ್ತುತಿಸದೆ ಕೇವಲ ಗುರುವನ್ನೇ ಕುರಿತು ಸ್ತುತಿಸಿದ **ಕಣ್ಣಿನುಣ್ ಶಿರುತ್ತಾಂಬು** ಇವರ ಶ್ರೇಷ್ಠ ಕೃತಿ.

ಆಳ್ವಾರುಗಳ ಹಾಗೂ ಆಚಾರ್ಯರುಗಳ ಮಧ್ಯದ ಕೊಂಡಿಯಂತಿರುವ ಇವರು, ದೇವಭಕ್ತಿಗಿಂತ ಗುರುಭಕ್ತಿಗೇ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ. ವೆಳ್ಳಾಳ ಜಾತಿಯ ಚಿಕ್ಕ ವಯಸ್ಸಿನ ನಮ್ಮಾಳ್ವಾರರನ್ನು, ಬ್ರಾಹ್ಮಣ ಜಾತಿಯ ಹೆಚ್ಚು ವಯಸ್ಸಿನ ಮಧುರಕವಿ ಆಳ್ವಾರರು ತಮ್ಮ ಗುರುವಾಗಿ ಅಂಗೀಕರಿಸಿ, ಕುಲಕ್ಕಿಂತ

ಗುಣಕ್ಕೆ, ವಯಸ್ಸಿಗಿಂತ ಜ್ಞಾನಭಕ್ತಿಗಳಿಗೆ, ಪ್ರಾಧಾನ್ಯತೆ ನೀಡಬೇಕೆಂದು ಹೇಳಿ, ಮಾಡಿ ತೋರಿಸಿದರು. ಇದು ಶ್ರೀವೈಷ್ಣವ ಮತದ ಉದಾತ್ತ ಭಾವನೆಯ ಪ್ರತೀಕ ಎನ್ನಬಹುದು.

ಇವರು ತಮ್ಮ ಗುರುಗಳಿಗಾಗಿ ದೇವಾಲಯ, ಪ್ರತಿಮೆ ನಿರ್ಮಾಣ ಮಾಡಿಸಿ, ಪೂಜಾ ವ್ಯವಸ್ಥೆಯನ್ನು ಏರ್ಪಡಿಸಿದರು.

## 12. ನಮ್ಮಾಳ್ವಾರ್

ವೈಶಾಖೇತು ವಿಶಾಖಾಯಾಂ ಕುರುಕಾಪುರಿಕಾರಿಜಂ ।
ಪಾಂಡ್ಯದೇಶೇ ಕಲೇರಾದೌ ಶಠಾರಿಂ ಸೈನ್ಯಪಂಭಜೇ ॥ ೧ ॥
ವಕುಳಾಭರಣಂವಂದೇ ಜಗದಾಭರಣಂ ಮುನಿಂ ।
ಯಃಶ್ರುತೇರುತ್ತರಂ ಭಾಗಂ ಚಕ್ರೇ ದ್ರಾವಿಡ ಭಾಷಯಾ ॥ ೨ ॥

ಮಾತಾಪಿತಾ ಯುವತಯ ಸ್ತನಯಾ ವಿಭೂತಿ
ಸ್ಸರ್ವಂ ಯ ದೇವ ನಿಯಮೇನ ವದನ್ವಯಾನಾಂ॥
ಆದ್ಯಸ್ಯನಃ ಕುಲಪತೇರ್ವಕುಳಾಭಿರಾಮಂ
ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿಮೂರ್ಧ್ನಾ ॥ ೩ ॥

ಆಳ್ವಾರ್ ಗೋಷ್ಠಿಯಲ್ಲಿ ಇವರಿಗೆ ಮೊದಲ ಸ್ಥಾನವಿದೆ. ಪಾಂಡ್ಯ ರಾಜ್ಯದ ತಾಮ್ರಪರ್ಣಿಯ ದಡದಲ್ಲಿರುವ ತಿರುಕ್ಕುರುಹೂರ್ ಅಥವಾ ಆಳ್ವಾರ್‌ತಿರುನಗರಿಯಲ್ಲಿ ವಿಷ್ವಕ್ಸೇನರ ಅಂಶಸಂಭೂತರಾಗಿ, ಶೂದ್ರ ದಂಪತಿಗಳ ಮಗನಾಗಿ ಜನಿಸಿದರು. ತಂದೆ ಕಾರಿಮಾರನ್ ಒಬ್ಬ ಸಾಮಂತ ರಾಜ. ತಾಯಿ ರಾಣಿ ಉಡೈಯನಂಗೈ.

ಇವರು ಹುಟ್ಟಿದಾಗ ಅಳಲಿಲ್ಲ, ನಿದ್ರಿಸಲಿಲ್ಲ, ಆಹಾರ ಸೇವಿಸಲಿಲ್ಲ. ಆದಿನಾಥ ದೇವಾಲಯದ ಬಳಿಯ ಹುಣಿಸೆ ಮರದ ಪೊಟರೆಯಲ್ಲಿ ಯೋಗಿಯಾಗಿ ತಪಸ್ಸು ಮಾಡುತ್ತ ಸಮಾಧಿಸ್ಥರಾಗಿದ್ದರು. ಆಗ ಪರಮಾತ್ಮನ ಸಾಕ್ಷಾತ್ಕಾರವಾಯಿತು. ಶಠಾರಿ, ಶಠಗೋಪ, ಮಾರನ್, ಕುರುಹೂರ್‌ನಂಬಿ, ವಕುಳಾಭರಣ, ಪರಾಂಕುಶ ಎಂಬ ಹೆಸರುಗಳಿದ್ದುವು.

ಶಿಷ್ಯನಾದ ಮಧುರಕವಿ ಆಳ್ವಾರರು ಇವರನ್ನು ದರ್ಶಿಸಿದ ನಂತರ ಇವರು ಭಕ್ತರಾಗಿ ಅವರೊಂದಿಗೆ ದಿವ್ಯದೇಶಯಾತ್ರೆ ಮಾಡಿದರು. ಭಕ್ತಿ, ಪ್ರಪತ್ತಿಗಳನ್ನು ಪ್ರಕಟಿಸಿದ ಇವರು ಪ್ರಪನ್ನ ಜನಕೂಟಸ್ಥರೆನಿಸಿದರು. ಶ್ರೀವೈಷ್ಣವ ಸಿದ್ಧಾಂತದ ಪ್ರಧಾನ ಪ್ರತಿತಂತ್ರವಾದ ಶರೀರ-ಶರೀರಿ ಭಾವವನ್ನು ಮೊದಲ ಬಾರಿಗೆ ತಮಿಳು ಪ್ರಬಂಧದಲ್ಲಿ ಪ್ರತಿಪಾದಿಸಿದರು. "ಜಾತಿ, ಜ್ಞಾನಗಳಿಗಿಂತ ಭಕ್ತಿಯೇ ಮೇಲು. ಕವಿತಾ

ಸಾಮರ್ಥ್ಯವು ಪರಮಾತ್ಮನ ಸ್ತುತಿಗಾಗಿ ಮಾತ್ರ ಮುಡುಪಾಗಿರಬೇಕು" ಎಂದ ಇವರಲ್ಲಿ ಭಕ್ತಿ-ಜ್ಞಾನಗಳ ಸಮನ್ವಯವಿದ್ದಿತು.

ಇವರು ರಚಿಸಿದ **ತಿರುವಿರುತ್ತಂ, ತಿರುವಾಶಿರಿಯಂ, ಪೆರಿಯ ತಿರುವಂದಾದಿ, ತಿರುವಾಯ್ಮೊಳಿ** ಎಂಬ ತಮಿಳು ಪದ್ಯ ಸಂಗ್ರಹಗಳಲ್ಲಿ ವೇದೋಪನಿಷತ್ತುಗಳಲ್ಲಿ ಅಡಗಿರುವ ತತ್ತ್ವವು ಮೂಡಿಬಂದು, ಇವು ದ್ರಾವಿಡ ವೇದ ಚತುಷ್ಟಯವೆನಿಸಿವೆ. ತಿರುವಾಯ್ಮೊಳಿಯು ಶ್ರೀವೈಷ್ಣವ ಧರ್ಮ ಸಾಹಿತ್ಯದ ಹಾಗೂ ವಿಶಿಷ್ಟಾದ್ವೈತದ ಸಾರವಾಗಿದೆ. ಇವುಗಳಲ್ಲಿ ಭಗವಂತನಿಗೂ ತಮಗೂ ಇರುವ ಪ್ರಿಯಕರ–ಪ್ರೇಯಸಿ ಭಾವವನ್ನು ವ್ಯಕ್ತಪಡಿಸಿದ್ದಾರೆ.

---

## ಅಧ್ಯಾಯ ೭

# ಪ್ರಬಂಧದ ಹಿರಿಮೆ ಮತ್ತು ಆಳ್ವಾರುಗಳ ಸಂದೇಶ

ತಮಿಳು ಭಾಷೆಯನ್ನು ಮೊದಲು ಆರಂಭಿಸಿದ ಅಗಸ್ತ್ಯ ಮುನಿಗಳ ತಪಸ್ಸಿನಿಂದ ಸಂತುಷ್ಟನಾದ ಭಗವಂತನು, ಲಕ್ಷ್ಮಿ, ಆದಿಶೇಷ, ಗರುಡ, ವಿಷ್ವಕ್ಸೇನ, ಪಂಚಾಯುಧ ಆಭರಣಗಳೊಡನೆ ಭೂಲೋಕದಲ್ಲಿ ಅವತರಿಸಿ ಸಕಲ ಶಾಸ್ತ್ರಾರ್ಥ ತತ್ತ್ವಗಳನ್ನೂ, ರಹಸ್ಯತ್ರಯಸಾರವನ್ನೂ ದ್ರಾವಿಡ ಭಾಷೆಯಲ್ಲಿಯೇ ಪ್ರಕಟಗೊಳಿಸಿದರು. ಇದೇ ಆಳ್ವಾರುಗಳ ಪ್ರಬಂಧ.

**ಆಳ್ವಾರ್** ಎಂದರೆ ದೈವ ಪ್ರೇಮದಲ್ಲಿ ಐಕ್ಯನಾದವನು, ಆಧ್ಯಾತ್ಮ ಜ್ಞಾನ ರೂಪಿಯಾದ ಸಮುದ್ರದಲ್ಲಿ ಸ್ನಾನಮಾಡಿರುವವನು, ಭಗವಂತನ ಅನುಭವದಲ್ಲಿ ಯಾವಾಗಲೂ ಆಳವಾಗಿ ಮುಳುಗಿದವನು ಮತ್ತು ಪರಮಾತ್ಮನಲ್ಲಿ ಅಸದೃಶ ಭಕ್ತಿಯನ್ನು ಹೊಂದಿರುವವನು ಎಂದರ್ಥ. ಅನುಭಾವಿಗಳಲ್ಲಿ ಕಂಡುಬರುವ ಲಕ್ಷಣಗಳೆಲ್ಲವೂ ಆಳ್ವಾರುಗಳಲ್ಲಿದೆ. ಭಗವಂತನ ಕರುಣೆಯಿಂದ ಭಕ್ತನಲ್ಲಿ ಉಂಟಾದ ಭಕ್ತಿ ಭಾವನೆಯ ಉದ್ರೇಕದಿಂದ ಕಂಠ ಗದ್ಗದಿತವಾಗಿ, ಮೈಮೇಲೆ ರೋಮಾಂಚನಗಳೆದ್ದು, ಕಣ್ಣುಗಳಲ್ಲಿ ಆನಂದಾಶ್ರುವು ತುಂಬಿ, ದೇವನೊಡನೆ ಲಭಿಸಿದ ಭಕುತಿರತಿಯ ಸಂಭಾಷಣೆಯ ಸಂಭ್ರಮದಲ್ಲಿ ಮುಕುತಿಯನ್ನೂ ಮರೆಯುವವರು ಅನುಭಾವಿಗಳು, ಭಕ್ತ ಕವಿಗಳು, ಆಳ್ವಾರುಗಳು ಎನ್ನಬಹುದು. ಪರಮಾತ್ಮನ ವಿರಹಾವಸ್ಥೆಯಲ್ಲಿ ಆದ ಶೋಕವೇ ಶ್ಲೋಕರೂಪದಲ್ಲಿ ಹೊರಹೊಮ್ಮುತ್ತದೆ. ಇಡೀ ಜಗತ್ತಿನ ಹುಟ್ಟು, ಬೆಳವಣಿಗೆ ಮೊದಲಾದುವೆಲ್ಲವನ್ನೂ ತನ್ನ ಲೀಲೆಯಾಗಿ ಉಳ್ಳ ಪರಮಾತ್ಮನನ್ನು ತಮ್ಮೊಳಗೆ ತಾವೇ ಅನುಭವಿಸಿದ ಮಹಾಮಹಿಮರು ಈ ಆಳ್ವಾರುಗಳು.

ಪರಮಾತ್ಮನಾದ ನಾರಾಯಣನ ನೈಜ ಭಕ್ತರಾದ ಆಳ್ವಾರುಗಳದ್ದು **ವಿಷ್ಣು ಭಕ್ತಿ ಪಂಥ**ವೆನಿಸುತ್ತದೆ. ತನ್ನ ಕಲ್ಯಾಣ ಗುಣ ವೈಭವವನ್ನು ಸಂಸಾರಿ ಚೇತನರ ಮನಸ್ಸಿನಲ್ಲಿ ಚಿರಸ್ಥಾಯಿಯಾಗುವಂತೆ ತಿಳಿಯಪಡಿಸಬೇಕೆಂಬ ಭಗವಂತನ ಸಂಕಲ್ಪಕ್ಕೆ ಅನುಗುಣವಾಗಿ ಅವತರಿಸಿ, ಅವನ ಅವ್ಯಾಜ ಕಟಾಕ್ಷಕ್ಕೆ ಪಾತ್ರರಾಗಿ, ಅವನ ಅನುಗ್ರಹಾತಿಶಯದಿಂದ ಭಕ್ತಿರೂಪಾಪನ್ನ ಜ್ಞಾನವನ್ನು ಪಡೆದವರೇ ಆಳ್ವಾರ್ ಎನಿಸಿಕೊಂಡರು. ಭಗವಂತನಿಂದ ಅನುಗೃಹೀತರಾದ ಇವರು ಆತನ ಸ್ವರೂಪರೂಪಗುಣ ವಿಭೂತಿಗಳನ್ನು ಜ್ಞಾನಸಾಕ್ಷಾತ್ಕಾರದ ಮೂಲಕ ಅನುಭವಿಸಿ, ತದನುಭವ ಪರೀವಾಹರೂಪವಾದ ತಮ್ಮ ದಿವ್ಯ ಸೂಕ್ತಿಗಳನ್ನು ಲೋಕೋಜ್ಜೀವನಾರ್ಥವಾಗಿ ಉಪಕರಿಸಿ ಕೊಟ್ಟಿರುತ್ತಾರೆ.

ಇವರು ತಮ್ಮ ಜೀವಿತ ಕಾಲದಲ್ಲಿಯೇ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದುಕೊಂಡು, ಆತನ ಸಾಕಾರ–ನಿರಾಕಾರ ಸಂದರ್ಶನಾನುಭವಗಳಿಂದ ಉಂಟಾದ ಆನಂದವನ್ನು ತಮ್ಮೊಳಗೆ ಹಾಗೆಯೇ ಅಡಗಿಸಿಟ್ಟುಕೊಳ್ಳಲಾರದೆ, ಸರಳ ಮತ್ತು ಮಧುರವಾದ **ನಾಲ್ಕು ಸಾವಿರ ಗೀತೆ**ಗಳ ರೂಪದಲ್ಲಿ ದೇಶ ಭಾಷೆಯಾದ ತಮಿಳಿನಲ್ಲಿ ಹಾಡಿ, ವರ್ಣಿಸಿ, ಆ ಮೂಲಕ ನಂದಿಹೋಗಿದ್ದ ದೈವಭಕ್ತಿ–ದೈವಪೂಜೆಗಳೆಂಬ ಜ್ವಾಲೆಯನ್ನು ಮತ್ತೆ ಹೊತ್ತಿಸಲು ಕಾರಣರಾದರು. ಭಕ್ತಿ, ಜ್ಞಾನ, ಪ್ರೇಮ, ಸೌಂದರ್ಯ, ಆನಂದಗಳಿಂದ ತುಂಬಿದ ಇವು ಆಧ್ಯಾತ್ಮ ಜ್ಞಾನದ ಅಮೂಲ್ಯ ನಿಧಿ ಎನಿಸಿವೆ. ಇವರ ಮೂಲಕ ಜನತೆಯಲ್ಲಿ ಭಗವದ್ಭಕ್ತಿಯನ್ನು ಬಹಳವಾಗಿ ಪ್ರಚಾರ ಮಾಡಲು ಸಹಾಯ ಸಿಕ್ಕಿತು. ವೇದವೇದ್ಯವಾದ, ಸಾಮಾನ್ಯ ಚೇತನರಿಂದ ಸುವ್ಯಕ್ತವಾಗಿ ಅರ್ಥನಿರ್ಣಯಮಾಡಲು ಅಶಕ್ಯವಾದ, ಭಗವಂತನ ಪರತ್ವ, ಸೌಲಭ್ಯ, ಸೌಶೀಲ್ಯ, ವಾತ್ಸಲ್ಯ ಮುಂತಾದುವನ್ನು, ಸಂಶಯಕ್ಕೆ ಲೇಶವೂ ಅವಕಾಶವಿರದಂತಹ ಸ್ವಸೂಕ್ತಿಗಳಿಂದ ವ್ಯಕ್ತಪಡಿಸಿರುವುದರಿಂದ, ಆಳ್ವಾರುಗಳ ಈ ದಿವ್ಯ ಪ್ರಬಂಧವನ್ನು ಸರ್ವರೂ ಅಧಿಕರಿಸಿ ಭಗವತ್ಸಮಾಶ್ರಯಣದ ಪ್ರಯೋಜನವನ್ನು ಪಡೆದುಕೊಳ್ಳ ಬಹುದು. ಋಷಿಮುನಿಗಳ ಪ್ರಬಂಧಗಳಿಗಿಂತಲೂ ಆಳ್ವಾರುಗಳ ನಾಲಾಯಿರ ದಿವ್ಯ ಪ್ರಬಂಧವೇ ರಂಗನಾಥದೇವರಿಗೆ ಹೆಚ್ಚು ಪ್ರಿಯವಾದುದೆಂದು ಕೆಲವು ಆಚಾರ್ಯರ ಅಭಿಪ್ರಾಯ.

ವಿಷ್ಣುವಿನ ಅವತಾರಗಳ ಹಾಗೂ ವಾಸುದೇವ ಅಥವಾ ಶ್ರೀಕೃಷ್ಣನ ವಿಷಯವೇ ತುಂಬಿರುವ ಆಳ್ವಾರುಗಳ ಗೀತೆಗಳ ಮೂಲಕ ವೇದಾಂತ ತತ್ತ್ವದ ಭಕ್ತಿ ಪಂಥವನ್ನು ಜನರ ಆಡುಭಾಷೆಯಾದ ತಮಿಳಿನಲ್ಲಿ ಪ್ರಚಾರಮಾಡಲು ಅನುಕೂಲ ವಾಯಿತು. ಪರಮ ಪ್ರಮಾಣವಾದ ವೇದಗಳ ಉಪದೇಶಸಾರವನ್ನು ಒಳಗೊಂಡಿರು ವುದರಿಂದಲೂ, ವೇದಗಳ ಉಪದೇಶಕ್ಕೆ ವಿರುದ್ಧವಾದುದಾವುದನ್ನೂ ಹೊಂದಿಲ್ಲದಿರು ವುದರಿಂದಲೂ, ಪ್ರಬಂಧಗಳೂ ಸಹ ವೇದಗಳಂತೆಯೇ ಪರಮ ಪ್ರಮಾಣವಾಗಿ ತಮಿಳುವೇದ, ದ್ರಾವಿಡವೇದ, ದ್ರಮಿಡೋಪನಿಷತ್ ಎಂದು ಕರೆಯಲ್ಪಟ್ಟವು. ಇದರ ಫಲವಾಗಿ ತಮಿಳಿಗೂ ಸಂಸ್ಕೃತದಷ್ಟೇ ಗೌರವ ಸ್ಥಾನ ಸಿಕ್ಕಿತು. ವೇದವ್ಯಾಸ ರಿಂದ ವಿಂಗಡಿಸಲ್ಪಟ್ಟ ಗೀರ್ವಾಣ ಶ್ರುತಿಗಳು ನಾಲ್ಕು ಇರುವಂತೆ, ನಮ್ಮಾಳ್ವಾರರಿಂದ ವಿಂಗಡಿಸಲ್ಪಟ್ಟ ಪ್ರಬಂಧವೂ ನಾಲ್ಕು ಭಾಗಗಳಾಗಿವೆ.

ಸಾಹಿತ್ಯಿಕ ಸೌಂದರ್ಯದಿಂದ ಸಮನ್ವಿತವಾದ ಪ್ರಬಂಧಗಳು ಪವಿತ್ರವಾದ ಆಧ್ಯಾತ್ಮಿಕ ತತ್ತ್ವಗಳನ್ನು ಪ್ರತಿಪಾದಿಸುವುದರಿಂದ, ಇವು ಶ್ರೀವೈಷ್ಣವ ಗ್ರಂಥಗಳಲ್ಲಿ ಸರ್ವಶ್ರೇಷ್ಠವೆಂದು ಅಂಗೀಕೃತವಾಗಿವೆ. ಶ್ರೀವೈಷ್ಣವರ ಮೂಲ ಸಿದ್ಧಾಂತವಾದ ಮೂಲ, ದ್ವಯ, ಚರಮ ಶ್ಲೋಕ ಮಂತ್ರಗಳೆಂಬ ರಹಸ್ಯತ್ರಯವನ್ನು ಪ್ರತಿ ಪಾದನೆ ಮಾಡುವುದರಿಂದ ಜನರ ಆದರಕ್ಕೆ ಪಾತ್ರವಾಗಿವೆ. ಐಹಿಕವಾದ ಐಶ್ವರ್ಯ

ವಾಗಲೀ, ಆತ್ಮಾನುಭವರೂಪವಾದ ಕೈವಲ್ಯವಾಗಲೀ, ಪರಮ ಪುರುಷಾರ್ಥವಲ್ಲ; ಪರಮ ಮಂಗಳ ಸ್ವರೂಪಿಯಾದ ಭಗವಂತನನ್ನು ಸೇರುವುದು ಹಾಗೂ ಅವನಿಗೆ ನಿತ್ಯ ಕೈಂಕರ್ಯಮಾಡುವುದು – ಇದೇ ಪರಮ ಪುರುಷಾರ್ಥ ಎಂಬುದನ್ನು ಇವು ನಿರ್ಧಾರಕ ವಾಗಿ ಪ್ರತಿಪಾದಿಸುತ್ತವೆ. ಆ ಮೂಲಕ ಭಗವಂತನಲ್ಲಿ ನಿರತಿಶಯವಾದ, ಪ್ರೀತಿ ರೂಪವಾದ ಭಕ್ತಿಯನ್ನು ಮೂಡಿಸಿ ಬೆಳೆಸುತ್ತವೆ.

ಹೀಗೆ ಭಕ್ತಿ ಪಂಥವನ್ನು ರೂಢಿಸಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಬೇಕಾದ ಸಂಪ್ರದಾಯದ ಚೌಕಟ್ಟನ್ನು ಆಳ್ವಾರುಗಳು ಒದಗಿಸಿದರು. ತಮಿಳಿನ ಪ್ರಬಂಧವು ಸಂಸ್ಕೃತದ ಉಪನಿಷತ್ತುಗಳೊಡನೆ ಸೇರಿ, ಉಭಯ ವೇದಾಂತ ಎನಿಸಿಕೊಂಡು, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಆಧಾರವಾಯಿತು ಹಾಗೂ ಶ್ರೀವೈಷ್ಣವ ಮತೀಯ ರಿಗೆ ನಿತ್ಯಾನುಸಂಧೇಯ, ಕಾಲಕ್ಷೇಪ ವಿಷಯ, ಆದುವು. ಕರ್ಮಸಂಸ್ಕಾರ, ವೇದಾ ಧ್ಯಯನದಿಂದ ಬ್ರಾಹ್ಮಣ್ಯ ಸಿದ್ಧಿಸುವಂತೆ, ಪಂಚ ಸಂಸ್ಕಾರ, ಪ್ರಬಂಧ ಪಾರಾಯಣ ಗಳಿಂದಲೂ ಶ್ರೀವೈಷ್ಣವತ್ವ ಸಿದ್ಧಿಸುತ್ತದೆಯಾದ ಕಾರಣ, ದೇವರ ಆರಾಧನೆ ಮತ್ತು ಉತ್ಸವ ಕಾಲದಲ್ಲಿ ಉತ್ಸವಮೂರ್ತಿಯ ಮುಂಭಾಗದಲ್ಲಿ ಪ್ರಬಂಧ, ಹಿಂಭಾಗದಲ್ಲಿ ವೇದ ಇವೆರಡರ ಪಾರಾಯಣ ನಡೆಯಬೇಕೆಂಬ ಸಂಪ್ರದಾಯ ಬಂದಿತು.

ಮುಖ್ಯವಾಗಿ ತಮಿಳು ವೇದವನ್ನು ಸೃಷ್ಟಿಸಿದವರು ಶಠಗೋಪರು; ಅವರನ್ನೂ, ಅವರ ತಿರುವಾಯ್ಮೊಳಿಯನ್ನೂ ಮೊದಮೊದಲು ಈ ಲೋಕದಲ್ಲಿ ಪ್ರಚಾರಕ್ಕೆ ತಂದವರು ನಾಥಮುನಿಗಳು; ಇದರ ಅರ್ಥ ಪ್ರವಚನವು ಆರಂಭವಾದುದು ಯಾಮು ನರ ಕಾಲದಲ್ಲಿ; ಇದನ್ನು ವಿಶೇಷವಾಗಿ ಪ್ರವಚನಮಾಡಿ ಪ್ರಚಾರ ಮಾಡಿದವರು ರಾಮಾನುಜರು; ಇದು ಬಹುವಾಗಿ ಬೆಳೆದುದು ತೆಂಗಲೆ ಆಚಾರ್ಯರುಗಳಿಂದ. ಆದರೂ ವಡಗಲೆ ಆಚಾರ್ಯರು ಇದನ್ನು ಅಲಕ್ಷಿಸಿಲ್ಲ. ಇದಕ್ಕೆ ಮೊದಲ ವ್ಯಾಖ್ಯಾನ ಬರೆದವರು ಪಿಳ್ಳಾನ್‌ರವರು, ಹಾಗೂ ಸಾಕಷ್ಟು ಕೆಲಸಮಾಡಿ ಇದರ ಶ್ರೇಷ್ಠತೆಯ ಪರಿಚಯ ಮಾಡಿಕೊಟ್ಟವರು ವೇದಾಂತ ದೇಶಿಕರು. ಇಬ್ಬರೂ ವಡಗಲೆ ಆಚಾರ್ಯರು.

ಉಪನಿಷತ್ತು ಎಂಬ ಗಂಗೆ, ದಿವ್ಯ ಪ್ರಬಂಧವೆಂಬ ಯಮುನೆ, ದೇಶಿಕರ ಕೃತಿ ಗಳೆಂಬ ಸರಸ್ವತಿ–ಈ ತ್ರಿವೇಣೀ ಸಂಗಮದಿಂದ ಉಭಯ ವೇದಾಂತವು ಪವಿತ್ರ ವಾಯಿತು. ದಿವ್ಯ ಪ್ರಬಂಧಗಳ ರಕ್ಷಣೆ–ಪ್ರಚಾರಗಳಲ್ಲಿ ವೇದಾಂತ ದೇಶಿಕರ ಕೊಡು ಗೆಯು ಅಪಾರ ನೆರವು ನೀಡಿದೆ. ಪ್ರಬಂಧದ ಮತ್ತು ಅದರ ವ್ಯಾಖ್ಯಾನದ ಅಧ್ಯಯನವು ನಿಗಮಾಂತ ಮಹಾದೇಶಿಕರ ಕೃತಿಗಳ ಅಧ್ಯಯನ ಮಾಡದೆ ಪೂರ್ಣ ಗೊಳ್ಳಲಾರದು.

"ಧನಸಂಪತ್ತು, ಸ್ತ್ರೀಸುಖ, ರಾಜಮರ್ಯಾದೆ ಮೊದಲಾದ ಪ್ರಾಪಂಚಿಕ ಸುಖ ಭೋಗಗಳು ಪರಮಾತ್ಮನ ಸಾನ್ನಿಧ್ಯದ ಮುಂದೆ ಹುಲ್ಲಿಗಿಂತಲೂ ಕಡೆಯಾದದ್ದು.

ಇಂದ್ರಿಯ ಸುಖದಲ್ಲಿ ಮತ್ತು ವಿಷಯ ಭೋಗಗಳಲ್ಲಿ ಆಸೆಯನ್ನು ತೊರೆದು, ಭಗವಂತ ನಲ್ಲಿ ಆಸೆಯನ್ನು ಬೆಳೆಸಿಕೊಳ್ಳಬೇಕು. ಭಕ್ತಿಯೇ ಅಂದರೆ ಭಗವಂತನಲ್ಲಿ ಪ್ರೀತಿ ಇಡುವುದೇ ಸರ್ವೋತ್ಕೃಷ್ಟವಾದ ಮಾರ್ಗ. ಜೀವಾತ್ಮ–ಪರಮಾತ್ಮರಲ್ಲಿ ಉತ್ತಮ ಸಂಬಂಧವನ್ನು ಕಲ್ಪಿಸುವುದೇ ಪ್ರೇಮ. ಭಗವಂತನ ಸ್ವರೂಪವೇ ಪ್ರೇಮವಾದುದ ರಿಂದ, ಆತನ ಸಾಯುಜ್ಯ ಸಿಗುವುದೂ ಪ್ರೇಮದಿಂದಲೇ. ಕೃಪಾಪರಿಪೂರ್ಣ, ಪ್ರೇಮಮಯಿ ಆಗಿರುವ ಭಗವಂತನು ವರ್ಣ, ಜಾತಿ, ಕುಲ, ಲಿಂಗ, ಪಾಂಡಿತ್ಯ ಗಳ ಭೇದವಿಲ್ಲದೆ ಎಲ್ಲರಿಗೂ ಒಲಿಯುವಂಥವನು. ಬುದ್ಧಿಗಿಂತ ಭಾವವು ಅಂದರೆ ಜ್ಞಾನಮಾರ್ಗಕ್ಕಿಂತ ಭಕ್ತಿಮಾರ್ಗವು ಸುಗಮವಾದುದು.

"ಭಗವಂತನಲ್ಲಿ ಆತ್ಮ ಸಮರ್ಪಣೆಮಾಡುವುದೇ ಪರಮ ಪುರುಷಾರ್ಥ. ಏಕ ದೇವನಾದ ನಾರಾಯಣನೆಂಬ ಭಗವಂತನೊಬ್ಬನೇ ಉಪಾಸ್ಯನು. ಜಗದಾದಿ ಕಾರಣನಾದ ಅವನೇ ಜಗತ್ತಿನಲ್ಲಿ ಅಂತರ್ಯಾಮಿಯಾಗಿದ್ದು, ಸಂಸಾರರಥದ ಚಕ್ರ ವನ್ನು ತಿರುಗಿಸುತ್ತಿದ್ದಾನೆ. ಆತನ ಶರೀರವಾದ ಜಗತ್ತಿನಲ್ಲಿ ಆತನೇ ಅದರ ಆತ್ಮ. ಚೇತನ-ಅಚೇತನ ವಸ್ತುಗಳೆಲ್ಲವೂ ಅವನ ಪ್ರಕಾರಗಳು ಹಾಗೂ ಅವನಿಗೆ ಶೇಷ ಭೂತವಾದವುಗಳು. ಜೀವರು ಆತನ ಆಸ್ತಿಯಾಗಿರುವುದರಿಂದ ಆತನು ಅದನ್ನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳಬಹುದು. ಭಗವಂತನಾದ ನಾರಾಯಣನು ಅಕ್ಷರ, ಅಮೃತ, ಸತ್ಯಸುಗುಣಸೌಂದರ್ಯಗಳ ನೆಲೆ, ಸಚ್ಚಿದಾನಂದ ಸ್ವರೂಪ, ಸಮಸ್ತ ಕಲ್ಯಾಣಗುಣಪೂರ್ಣ, ಸರ್ವವ್ಯಾಪಿ ಆಗಿದ್ದಾನೆ. ಅವನ ಕೃಪೆಯೇ ಆತನ ವಕ್ಷಸ್ಥಲ ನಿವಾಸಿಯಾದ ಜಗನ್ಮಾತೆ ಮಹಾಲಕ್ಷ್ಮಿ ಆಗಿದ್ದಾಳೆ.

"ನತೇರೂಪಂ ನ ಚಾಕಾರೋ ನಾಯುಧಾನಿ ನಚಾಸ್ಪದಂ ।
ತಥಾಪಿ ಪುರುಷಾಕಾರೋ ಭಕ್ತಾನಾಂ ತ್ವಂ ಪ್ರಕಾಶಸೇ ॥"

ಎಂಬಂತೆ ನಿರ್ಗುಣೇಶ್ವರನೆಂದಾಗ ಪರಮಾತ್ಮನಿಗೆ ರೂಪ, ಆಕಾರ, ಆಯುಧಗಳಿಲ್ಲ ದಿದ್ದರೂ, ಸಗುಣೇಶ್ವರನೆನಿಸಿದ ಆತನು ತನ್ನ ಸೌಶೀಲ್ಯ, ಸೌಲಭ್ಯ, ವಾತ್ಸಲ್ಯ ಗುಣ ಗಳ ಪರಿಣಾಮವಾಗಿ, ತನ್ನ ಭಕ್ತರನ್ನು ಉದ್ಧರಿಸಬೇಕೆಂದು ಸಂಕಲ್ಪಿಸಿದಾಗ, ಲಕ್ಷ್ಮೀ ಸಹಿತನಾದ ನಾರಾಯಣನು ಸಾಕಾರನಾಗಿ ಅವತಾರಗಳನ್ನು ಎತ್ತಿದುದಲ್ಲದೆ, ಅರ್ಚಾರೂಪಿಯಾಗಿ ಕಲ್ಲು, ಮರ, ಲೋಹಗಳ ಪ್ರತಿಮೆಯ ಮೂಲಕ ತನ್ನ ಭಕ್ತ ರಿಗೆ ತಂದೆ, ತಾಯಿ, ಗುರು, ಮಿತ್ರ, ಮಗು, ಒಡೆಯ, ದಾಸ, ಪ್ರಿಯಕರ ಆಗಿ, ಆಯಾ ಸನ್ನಿವೇಶಗಳಿಗೆ ತಕ್ಕಂತೆ ದರ್ಶನವಿತ್ತು ನೆರವು ನೀಡುತ್ತಾನೆ.

"ಪರಮಾತ್ಮನ ಪಾದಸೇವೆ ಹಾಗೂ ಕೈಂಕರ್ಯಗಳಿಂದ ಜೀವನವು ಸಾರ್ಥಕ ವಾಗುತ್ತದೆ. ಅಹಂಕಾರ, ಮಮತೆಗಳನ್ನು ತೊರೆದು ನಮ್ಮ ಕರ್ಮಗಳನ್ನೆಲ್ಲಾ ಭಗವಂತನ ಸೇವೆ ಎಂದೇ ಭಾವಿಸಿ ಎಸಗಬೇಕು. ಮಾನವನು ಉದ್ಧಾರವಾಗಬೇಕಾ ದರೆ, ಭಗವಂತನ ನಿತ್ಯ ಕೈಂಕರ್ಯ ಮಾಡುವ ಭಾಗ್ಯವನ್ನು ಪಡೆಯಬೇಕಾದರೆ,

ಆತನ ಪಾದಕಮಲಗಳಲ್ಲಿ ಶರಣಾಗತಿಯನ್ನು ಅನುಷ್ಠಿಸಬೇಕು." ಇದು ಆಳ್ವಾರುಗಳ ಸಂದೇಶ.

ಭಾಗವತ, ಭಕ್ತ, ಭಗವಂತ ಈ ಮೂರೂ ಒಂದೇ. ಭಕ್ತಿಗೆ ಎಲ್ಲರೂ ಅಧಿಕಾರಿಗಳು. ಭಕ್ತಿ ಪ್ರಪತ್ತಿಗಳೇ ಮುಕ್ತಿಗೆ ದಾರಿ ಎಂಬ ಭಾಗವತ ಮತದ ತತ್ತ್ವವನ್ನು ತಮ್ಮ ಜೀವನ–ಅನುಷ್ಠಾನಗಳ ಮೂಲಕ ತೋರಿಸಿಕೊಟ್ಟ ಆಳ್ವಾರುಗಳ ವಿಷಯದಲ್ಲಿ ಆ ಕಾಲದ ಜನಸಾಮಾನ್ಯರಿಗೆ ಅಸದೃಶವಾದ ಭಕ್ತಿ, ಪ್ರೇಮ, ಗೌರವಗಳಿದ್ದುವು. ದಕ್ಷಿಣ ಭಾರತದ ಪವಿತ್ರ ನದಿಗಳು ಜನರ ತನುವನ್ನು ತಣಿಸಿದಂತೆ, ಆಳ್ವಾರುಗಳ ಭಕ್ತಿ ಪ್ರವಾಹವು ಜನರ ಹೃದಯಗಳನ್ನು ತಣಿಸಿತು.

ಶೂದ್ರರು, ಅಸ್ಪೃಶ್ಯರು, ಕಳ್ಳರು, ಬ್ರಾಹ್ಮಣರು, ಹೆಂಗಸು ಇರುವ ಆಳ್ವಾರುಗಳ ಮೂರ್ತಿಗಳನ್ನು ದೇವಾಲಯ, ಮಂದಿರಗಳಲ್ಲಿ ಸ್ಥಾಪಿಸಿ ಪೂಜಿಸುವಷ್ಟು ಆದರ, ಈ ಭಕ್ತರ ವಿಷಯದಲ್ಲಿ ಇದೆ. ವೇದ ಮಂತ್ರಗಳಷ್ಟೇ ಪವಿತ್ರವಾದ ಇವರ ಮಧುರ ಗೀತೆಗಳನ್ನು ಸಭೆ ಉತ್ಸವಗಳಲ್ಲಿ ಇಂದಿಗೂ ಹಾಡುತ್ತಾರೆ. ಇವರ ಜೀವನದಲ್ಲಿನ ಪ್ರಭಾವಶಾಲಿಯಾದ ಘಟನೆಗಳನ್ನು ಅಭಿನಯಿಸುತ್ತಾರೆ.

"ಭೂತಂ ಸರಶ್ಚ ಮಹದಾಹ್ವಯ ಭಟ್ಟನಾಥ
ಶ್ರೀಭಕ್ತಿಸಾರ ಕುಲಶೇಖರ ಯೋಗಿವಾಹಾನ್ ।
ಭಕ್ತಾಂಘ್ರಿರೇಣು ಪರಕಾಲ ಯತೀಂದ್ರ ಮಿಶ್ರಾನ್
ಶ್ರೀಮತ್ಪರಾಂಕುಶಮುನಿಂ ಪ್ರಣತೋಽಸ್ಮಿ ನಿತ್ಯಂ ॥"

ಇದು ಆಳ್ವಾರುಗಳನ್ನು ಕುರಿತು ಶ್ರೀವೈಷ್ಣವರು ಮಾಡುವ ಪ್ರಾರ್ಥನೆ. ಈ ಸುಂದರ ಶ್ಲೋಕವನ್ನು ಕೊಟ್ಟವರು ಆಚಾರ್ಯ ಪರಾಶರ ಭಟ್ಟರು.

ಆಳ್ವಾರುಗಳ ಅವತಾರಕಾಲ, ಕೃತಿ ಮತ್ತು ಅದರ ಶ್ರೇಷ್ಠತೆಯ ಬಗ್ಗೆ ನಿಗಮಾಂತ ದೇಶಿಕರು ತಮ್ಮ ಪ್ರಬಂಧಸಾರದಲ್ಲಿ ವಿವರಿಸಿ, ಆಳ್ವಾರುಗಳನ್ನು ಅಭಿನವ ದಶಾವತಾರವೆಂದು ಸ್ತುತಿಸಿದ್ದಾರೆ.

"ಪೊಯ್‌ಗೈಮುನಿ ಪೂದತ್ತಾರ್ ಪೇಯಾಳ್ವಾರ್
ಕಣ್‌ಪೊರು ನಲ್ಲವರುಂ ಕುರುಕೇಶನ್ ವಿಷ್ಣುಚಿತ್ತನ್
ತುಯ್ಯ ಕುಲಶೇಖರನ್ ನಮ್ ಪಾಣನಾಥನ್
ತೊಂಡರಡಿಪೊಡಿಮಳಿಶೈವಂದ ಜ್ಯೋತಿ
ವೈಯಮೆಲ್ಲಾಮ್ ಮರೈವಿಳಂಗ ವಾಳವೇಲೆಂದುಮ್
ಮಂಗೈಯರ್ ಕೋನೆನ್ನ್ರುವರ್‌ಗಳ ಮಹಿಳಂದು ಪಾಡುವನ್
ಶೆಯ್ಯ ತಮಿಳ್ ಮಾಲೈಗಳ್ ನಾಮ್ ತೆಳಿಯ ಮೊದಿತ್ತೈಳಿಯಾದ
ಮರೈ ನಿಲಂಗಲ್ ತೆಳಿನಿನ್ರೋಮೇ ॥"

ಎಂಬಂತೆ ಎಷ್ಟು ಪರಿಶ್ರಮ ಪಟ್ಟರೂ ವೇದವೇದಾಂತಗಳಿಂದ ಉಂಟಾಗದ ಜ್ಞಾನ ದಿವ್ಯಪ್ರಬಂಧದಿಂದ ಉಂಟಾಗುತ್ತದೆ.

ಆಳ್ವಾರುಗಳಲ್ಲಿ ಯಾರು, ಎಷ್ಟು ಪ್ರಬಂಧಾತ್ಮಕ ಗೀತೆಗಳನ್ನು ರಚಿಸಿದ್ದಾರೆ ಎಂಬುದನ್ನು ವೇದಾಂತ ದೇಶಿಕರು ಹೀಗೆ ಸಂಗ್ರಹಿಸಿ ಹೇಳಿದ್ದಾರೆ.

| | |
|---|---|
| "ಎಣ್ಣಿಲ್ ಮುದಲಾಳ್ವಾರ್‌ಹಳ್ ಮೂನ್ರುನೂರುಂ | 300 |
| ಎಳಿಲ್ ಮಳಿಶೈಪ್ಪಿರಾನಿರು ನೂತ್ತೊರು ಪತ್ತಾರುಂ | 216 |
| ಉಣ್ಮೈಮಿಹುಮಾರನ್ ಮರೈಯಾಯಿರತ್ತೋಡು | |
| ಉತ್ತವಿರು ನೂತ್ತುತ್ತೊಣ್ಣೂರು ಮಾರುಂ | 1296 |
| ಪಣ್ಮೈಯುಡೈ ಮದುರ ಕವಿ ಪತ್ತುಮೊನ್ರುಂ | 11 |
| ಪಂಜಿಯರ್ ಕೋನ್ ನೂತ್ತೈಂದುಂ ಪಟ್ಟನಾದನ್ | 105 |
| ಪಣ್ಣಿಯಿಲ್ ನಾನೂತ್ತೆಳುಪತ್ತು ಮೂನ್ರುಂ | 473 |
| ಪಾರ್ತೋದ್ದೈ ನೂತ್ತೆಳುಪತ್ತು ಮೂನ್ರೇ॥ | 173 |
| ಬತ್ತರಡಿಪ್ಪೊಡಿ ಪಾಡಲೈಂಬತ್ತೈದುಂ | 55 |
| ಪಾಣರ್ ಪುಗಳ್ ಪತ್ತುಡನೇ ಪರಕಾಲನ್‌ಶೊಲ್ | 10 |
| ಆತ್ತನುಯರ್ ವೇಂಗಡ ಮಾರ್ಕಾಯಿ ರತ್ತೋಡಾನ | |
| ಇರುನೂತ್ತೋರೈಂಬತ್ತು ಮೂನ್ರುಂ | 1253 |
| ಮತ್ತಿತರು ಮೆತಿರಾಶರ್ ಪೊನ್ನಡಿಕ್ಕೇ | |
| ಮೋಳಿಂದವಮುದರ್ ಪಾಡಲ್ ನೂರುಮೆಟ್ಟುಂ | 108 |
| ಎತ್ತಿಶೈಯುಂ ವಾಳವಿವರ್ ಪಾಡಿವೈತ್ತ | |
| ಇವೈ ನಾಲಾಯಿರ ಮುಮುಡಿಯೋಂಗಳ್ ವಾಳ್ವೇ" | 4000 |

## ಅಧ್ಯಾಯ ೮

# ರಾಮಾನುಜರ ಗುರುಪರಂಪರೆ—ಆಚಾರ್ಯರುಗಳು

ಕಮಲದಲ್ಲಿ ಜನಿಸಿದ ಪ್ರಥಮ ಪುತ್ರನಾದ ಚತುರ್ಮುಖ ಬ್ರಹ್ಮನಿಗೆ, ಭಗವಂತನು ಹಂಸರೂಪವನ್ನು ತಾಳಿ ಉಪದೇಶಮಾಡಿದ ಪರತತ್ತ್ವದ ಸ್ವರೂಪ-ಸ್ವಭಾವಗಳು ಸಂಸ್ಕೃತ ಭಾಷೆಯ ವೇದಗಳಲ್ಲಿವೆ. ಆಮೇಲೆ ಭಗವಂತನು ತನಗೆ ಶೇಷಭೂತರಾದ ಜೀವಾತ್ಮರುಗಳ ದುಃಖಪರಂಪರೆ, ಕಾರ್ಪಣ್ಯಗಳನ್ನು ದೂರ ಮಾಡುವ ನಲುವಾಗಿ ಭಗವದ್ಗುಣಾನುಭವೈಕನಿರತರಾದ ಆಳ್ವಾರುಗಳ ಪರಂಪರೆಯ ಮೂಲಕ ದ್ವಿಜರಲ್ಲದವರಿಗೂ ಸಹಾಯಕವಾಗುವಂತೆ, ದ್ರಾವಿಡ ವೇದಗಳೆನಿಸಿದ ನಾಲ್ಕು ಸಾವಿರ ಪ್ರಬಂಧಗಳನ್ನು ಪ್ರಚಾರಮಾಡಿಸಿದನು. ಇದರ ಫಲವಾಗಿ ವೈಷ್ಣವ ಮತವು ತಮಿಳು ದೇಶದಲ್ಲಿ ಉನ್ನತಿ ಹೊಂದಿತು. ಆದರೆ ಕಾಲವೈಪರೀತ್ಯ ದಿಂದ ಅವೂ ಖಿಲವಾಗುತ್ತಿರುವುದನ್ನು ಕಂಡು ಅವುಗಳ ಪುನರುತ್ಥಾನಕ್ಕಾಗಿ ಆಚಾರ್ಯರುಗಳ ಪರಂಪರೆಯ ಮೂಲಕ ಉಪದೇಶ ಹಾಗೂ ಕೃತಿ ರಚನೆಗಳನ್ನು ಏರ್ಪಡಿಸಿದನು.

ಈ ಆಚಾರ್ಯರು ಪಂಡಿತ, ವಿಮರ್ಶಕ, ಭಕ್ತ, ಉದಾರಿ ಆಗಿದ್ದು, ತಮಿಳು, ಸಂಸ್ಕೃತ ಎರಡರಲ್ಲಿಯೂ ನಿಪುಣರಾಗಿ, ವೈದಿಕ ವೇದಾಂತ ಶಾಸ್ತ್ರದ ಕರ್ಮ ಮತ್ತು ಜ್ಞಾನಸಂಪ್ರದಾಯ ಹಾಗೂ ಆಳ್ವಾರುಗಳ ಪ್ರಬಂಧಗಳ ಭಕ್ತಿ ಸಂಪ್ರದಾಯ ಎರಡಕ್ಕೂ ಸುಂದರ, ಸಮನ್ವಯ–ಸಾಮರಸ್ಯಗಳನ್ನು ಉಂಟುಮಾಡಿ, ಆಮೂಲಕ ಉಭಯ ವೇದಾಂತಿಗಳೆನಿಸಿಕೊಂಡರು. ವಿಶಿಷ್ಟಾದ್ವೈತ ಸಿದ್ಧಾಂತ ಮತ್ತು ಪ್ರಪತ್ತಿ ಮಾರ್ಗಗಳನ್ನು ಸ್ಥಾಪಿಸಿ, ಇದನ್ನು ಪ್ರಥಮವಾಗಿ ಪ್ರವರ್ತನೆಮಾಡಿದ ಲಕ್ಷ್ಮಿ ಅಥವಾ ಶ್ರೀಯ ಹೆಸರಿನಲ್ಲಿ ಈ ನೂತನ ಮತವನ್ನು ಶ್ರೀವೈಷ್ಣವ ಮತ ಎಂದು ಕರೆದರು.

ತಪ ಅಥವಾ ಚಕ್ರಾಂಕನ, ಪುಂಡ್ರ ಅಥವಾ ನಾಮ, ನಾಮ ಅಥವಾ ಹೆಸರು, ಮಂತ್ರ ಅಥವಾ ರಹಸ್ಯತ್ರಯ, ಯಾಗ ಅಥವಾ ಭಗವದಾರಾಧನ–ಈ ಐದು ಗುರುತು ಅಥವಾ ಪಂಚ ಸಂಸ್ಕಾರಗಳನ್ನು ಹೊಂದಿದ್ದುದರಿಂದ ವಿಶಿಷ್ಟಾದ್ವೈತಿಗಳು ಅಯ್ಯಂಗಾರ್ ಎನಿಸಿದರು.

ಹೀಗೆ ಈ ಆಚಾರ್ಯರುಗಳು ತಮಿಳುನಾಡಿನ ಜನತೆಯಲ್ಲಿ ವಿಷ್ಣು ಭಕ್ತಿಯನ್ನು ಪ್ರಚಾರಮಾಡುವ ಶ್ಲಾಘ್ಯ ಪ್ರಯತ್ನವನ್ನು ಮಾಡಿ, ಆ ಮೂಲಕ ಬೇರ್ಪಟ್ಟ ಜೀವಾತ್ಮ–ಪರಮಾತ್ಮರನ್ನು ಒಂದುಗೂಡಿಸಲೆತ್ನಿಸಿದರು.

"By the Designing and Directing Power known as Narayana and Mahalaxmi, the Vedic Religion or Sanatana Dharma, comprising its Philosophy, Ethics and Ritual, is maintained by continuous lines of Acharyas under whose care and activity, it has remained vitally one and unaltered."—ಎಂಬುದಾಗಿ ವಾಶ್ಚಿವಾತ್ಯ ವಿದ್ವಾಂಸರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆಂದರೆ, ನಮ್ಮ ಈ ಆಚಾರ್ಯರು ಎಷ್ಟು ಶ್ರಮ ವಹಿಸಿದ್ದಾರೆಂಬುದು ವ್ಯಕ್ತವಾಗುತ್ತದೆ.

ವಿಶಿಷ್ಟಾದ್ವೈತವನ್ನು ರೂಪಿಸಿ, ಬೆಳೆಸಿ, ಪ್ರಚಾರಮಾಡಿದ ಪ್ರಮುಖ ಆಚಾರ್ಯರ ಪರಿಚಯುವನ್ನು ಇಲ್ಲಿ ಮಾಡಿಕೊಡಲಾಗಿದೆ.

## 1. ನಾಥಮುನಿ (823–924)

ಜ್ಯೇಷ್ಠೇಽನುರಾಧಾ ಸಂಭೂತಂ ವೀರನಾರಾಯಣೇಪುರೇ ।
ಗಜವಕ್ತ್ರಾಂಶಮಾಚಾರ್ಯ ಮಾದ್ಯಂ ನಾಥಮುನಿಂ ಭಜೇ ॥ ೧ ॥
ನಮೋ ಚಿಂತ್ಯಾದ್ಭುತಾ ಕ್ಲಿಷ್ಟ ಜ್ಞಾನವೈರಾಗ್ಯರಾಶಯೇ ।
ನಾಥಾಯ ಮುನಯೇಽಗಾಧ ಭಗವದ್ಭಕ್ತಿ ಸಿಂಧವೇ ॥ ೨ ॥
ವ್ಯೋಮ್ನಃ ಪರಸ್ಮಾತ್ಸವಿಧಂ ಸಮೇತ್ಯ ।
ಲಕ್ಷ್ಮ್ಯಾನಿಯೋಗಾತ್ಕುರುಕಾಧಿರಾಜಃ ॥
ಸಮಂತ್ರ ರತ್ನಂ ದ್ವಯಮಾಹಯಸ್ಮೈ ।
ನಾಥಾಯ ತಸ್ಮೈ ಮುನಯೇ ನಮೋಽಸ್ತು ॥ ೩ ॥

ವಿಶಿಷ್ಟಾದ್ವೈತ ದರ್ಶನವನ್ನು ಯೋಗ ಬಲದಿಂದ ಸಾಕ್ಷಾತ್ಕರಿಸಿಕೊಂಡು, ಅದಕ್ಕೆ ತಳಹದಿಯನ್ನು ಹಾಕಿಕೊಟ್ಟ. ಇವರಿಗೆ ರಂಗನಾಥಾಚಾರ್ಯ ಎಂದೂ ಹೆಸರಿದ್ದಿತು.

ಇವರು ವಿಷ್ಣು ಸೇನಾಪತಿಯಾದ ವಿಷ್ವಕ್ಸೇನರ ಮಂತ್ರಿ ಗಜಾನನ ಅಂಶ ಭೂತರು. ಮಧುರ ಕವಿ ಆಳ್ವಾರರ ಸಮಕಾಲೀನರು. ನಮ್ಮಾಳ್ವಾರರಿಂದ ಯೋಗ ದಸೆಯಲ್ಲಿ ನೇರವಾಗಿ ಉಪದೇಶ ಪಡೆದವರು. ಆಳ್ವಾರುಗಳ ತಮಿಳು ಗೀತೆಗಳನ್ನು ನಾಲಾಯಿರ ಪ್ರಬಂಧ ರೂಪದಲ್ಲಿ ಶೇಖರಿಸಿ, ಅವುಗಳನ್ನೆಲ್ಲ ಸಂಗೀತಕ್ಕೆ ಅಳವಡಿಸಿ, ದೇವಾಲಯದಲ್ಲಿ ಹಾಡುವ ಪದ್ಧತಿಯನ್ನು ತಂದರು. ಇದು ಇಶೈಪ್ಪಾ ಎನಿಸಿಕೊಂಡಿತು. ಉಳಿದುದು ಇಯುಪಾ ಎನಿಸಿತು. ಪ್ರಬಂಧವನ್ನು ದೇವಗಾನ ಅಂದರೆ ವೇದದ ಸಾಮಗಾನದಂತೆಯೂ, ಮನುಷ್ಯಗಾನ ಅಂದರೆ ರಾಗ ತಾಳಗಳಿಂದ ಕೂಡಿದ ಗಾನದಂತೆಯೂ, ಹಾಡುವ ಕೆಲಸದಲ್ಲಿ ಇವರ ಸೋದರಳಿಯಂದಿರುಗಳಾದ ಮೇಳೈಯಾಗತ್ತಾಳ್ವಾರ್ ಅಥವಾ ಮಣವಾಳಪ್ಪೆರುಮಾಳ್ ಅರೈಯರ್

ಮತ್ತು ಕೀಳೈಯಾಗತ್ತಾಳ್ವಾರ್ ಅಥವಾ ನಾದವಿನೋದ ಅರೈಯರ್ ಎಂಬ ಇಬ್ಬರೂ ನೆರವು ನೀಡಿದರು. ನಾಥಮುನಿಗಳು ಇಲ್ಲದಿದ್ದರೆ ವಿಶಿಷ್ಟಾದ್ವೈತ ದರ್ಶನ, ಶ್ರೀವೈಷ್ಣವ ಮತ, ಉಭಯ ವೇದಾಂತಗಳು ಇರುತ್ತಿರಲಿಲ್ಲವೆಂಬುದು ನಿಜ.

ದಕ್ಷಿಣ ಆರ್ಕಾಟ್ ಜಿಲ್ಲೆಯಲ್ಲಿ, ಚಿದಂಬರಂ ಬಳಿಯ ವೀರನಾರಾಯಣಪುರ ಅಥವಾ ಕಾಟ್ಟುಮನ್ನಾರ್ ಕೋಯಿಲ್ ಎಂಬಲ್ಲಿ ಸೊಟ್ಟೈ ವಂಶದ ಈಶ್ವರ ಭಟ್ಟ ಮತ್ತು ತಾಮರೈಯಾಳ್ ಮಗನಾಗಿ ಜನಿಸಿದರು. ಸಂಸ್ಕೃತದಲ್ಲಿ ಪೂರ್ಣ ಪಂಡಿತರಾಗಿದ್ದು, ಶ್ರೀರಂಗದಲ್ಲಿದ್ದ ಪಂಡಿತ ಮಂಡಲಿಯ ಅಧ್ಯಕ್ಷರಾಗಿದ್ದರು. ದೇವಗಾನದಲ್ಲಿ ಪರಿಣತರಾಗಿದ್ದರು.

ಭಾರತದ ದಿವ್ಯ ಕ್ಷೇತ್ರಗಳು ಹಾಗೂ ಅಲ್ಲಿನ ದೇವಾಲಯಗಳಲ್ಲಿರುವ ಅರ್ಚಾ ಮೂರ್ತಿಗಳನ್ನು ಸಂದರ್ಶಿಸಿ, ವಿಷ್ಣುಭಕ್ತಿ ಮತ್ತು ವೈಷ್ಣವ ಮತಗಳನ್ನು ಕೇರಳದಿಂದ ಕಾಶ್ಮೀರದವರೆಗೆ ಹರಡಲು ಶ್ರಮಿಸಿದರು.

ಇವರು ಬರೆದ ನ್ಯಾಯತತ್ತ್ವ, ಯೋಗರಹಸ್ಯ, ಪುರುಷನಿರ್ಣಯ ಎಂಬ ಗ್ರಂಥಗಳು ಯಾಮುನ, ರಾಮಾನುಜ, ವೇದಾಂತ ದೇಶಿಕ ಎಲ್ಲರಿಗೂ ಮಾರ್ಗದರ್ಶಿಯಾದುವು. ಶ್ರೀವೈಷ್ಣವ ಆಚಾರ್ಯರಲ್ಲಿ ಅಗ್ರಗಣ್ಯ, ವಿಶಿಷ್ಟಾದ್ವೈತ ಹಾಗೂ ಉಭಯ ವೇದಾಂತಗಳ ಪ್ರಥಮಾಚಾರ್ಯ, ಪ್ರಪನ್ನ ಜನಕೂಟಸ್ಥ, ಎನಿಸಿದ್ದರು.

## 2. ಪುಂಡರೀಕಾಕ್ಷ

ನಮಃ ಪಂಕಜನೇತ್ರಾಯ ನಾಥ ಶ್ರೀಪಾದ ಪಂಕಜೇ ।
ನ್ಯಸ್ತ ಸರ್ವಭರಾಯಾಸ್ಮತ್ಕುಲನಾಥಾಯ ಧೀಮಹಿ ॥ ೧ ॥

ನಾಥಮುನಿಗಳ ಶಿಷ್ಯರಲ್ಲಿ ಅಗ್ರಗಣ್ಯರಾಗಿದ್ದು, ಗುರುಗಳಿಂದಲೇ ಉಯ್ಯಕ್ಕೊಂಡಾರ್ ಎಂದು ಹೊಗಳಿಸಿಕೊಂಡರು. ಇವರಿಗೆ ಪದ್ಮಾಕ್ಷ ಎಂಬ ಹೆಸರೂ ಇದ್ದಿತು. ಶ್ರೀರಂಗಕ್ಕೆ ಉತ್ತರದಲ್ಲಿರುವ ತಿರುವಳ್ಳರಿಯಲ್ಲಿ ಜನಿಸಿದರು. ಶ್ರೇಷ್ಠ ತಾರ್ಕಿಕರಾಗಿದ್ದು, ಶ್ರೀವೈಷ್ಣವ ತತ್ತ್ವ ಹಾಗೂ ಸಂಪ್ರದಾಯಗಳ ಸಂಪಾದನೆ ಕಾರ್ಯ, ಸೇವೆ ಮಾಡಿದರು. ದರ್ಶನ, ರಹಸ್ಯಾರ್ಥ ಹಾಗೂ ದಿವ್ಯ ಪ್ರಬಂಧಗಳನ್ನು ಜನರಿಗೆ ತಿಳಿಸಲು ಗೋಷ್ಠಿಗಳನ್ನು ಏರ್ಪಡಿಸಿ ನಡೆಸಿದರು. ಆ ಮೂಲಕ ವೇದಾಧ್ಯಯನಕ್ಕೆ ಅವಕಾಶವಿಲ್ಲದ ಕೆಳಜಾತಿಯವರಿಗೂ, ಪರಮಾತ್ಮನನ್ನು ಅರಿಯುವ ಹಾಗೂ ಮುಕ್ತಿಯನ್ನು ಹೊಂದುವ, ಅವಕಾಶ–ಅನುಕೂಲಗಳನ್ನು ಕಲ್ಪಿಸಿಕೊಟ್ಟರು.

## 3. ಮೊದಲನೆಯ ರಾಮಮಿಶ್ರ

ಅಯತ್ನತೋಯಾಮುನಮಾತ್ಮದಾಸಂ ।
ಅಲರ್ಕ ಪತ್ರಾರ್ಪಣ ನಿಷ್ಕ್ರಯೇಣ ॥

ಯಃಕ್ರೀತವಾನಾಸ್ಥಿತಯೌವರಾಜ್ಯಂ ||
ನಮಾಮಿ ತಂ ರಾಮಮಮೇಯ ಸತ್ತ್ವಂ || ೧ ||

ಇವರು ಪುಂಡರೀಕಾಕ್ಷರ ಮುಖ್ಯ ಶಿಷ್ಯರು. ಇವರಿಗೆ ಮಣಕ್ಕಾಲ್ ನಂಬಿ ಎಂದೂ ಹೆಸರು. ಶ್ರೇಷ್ಠ ವಿದ್ವಾಂಸರು ಹಾಗೂ ವ್ಯಾಕರಣ ಪಂಡಿತರು. ರಾಜ ಭೋಗದಲ್ಲಿ ನಿರತರಾಗಿದ್ದ ಯಾಮುನರ ಮನಸ್ಸನ್ನು, ಬಹಳ ಶ್ರಮಪಟ್ಟು ಆಧ್ಯಾತ್ಮಿಕದ ಕಡೆಗೆ ತಿರುಗಿಸಿ ಶ್ರೀರಂಗಕ್ಕೆ ಕರೆದು ತಂದು, ಅವರಿಗೆ ಸರಿಯಾದ ಶಿಕ್ಷಣ ನೀಡಿ, ಅವರನ್ನು ಮುಂದಕ್ಕೆ ತಂದು, ಅವರು ಸಿದ್ಧಾಂತವನ್ನು ಉದ್ಧರಿಸುವಂತೆ ಮಾಡಿದರು ಆದುದರಿಂದ ಇವರು ಯಾಮುನರ ನಿಜವಾದ ಆಧ್ಯಾತ್ಮಿಕ ಗುರು.

ಇವರೂ ಯಥಾರ್ಥಖ್ಯಾತಿವಾದದ ಬೆಂಬಲಿಗರಾಗಿದ್ದು, ಪುಂಡರೀಕಾಕ್ಷ ಮತ್ತು ನಾಥಮುನಿಗಳ ಅಭಿಪ್ರಾಯಗಳನ್ನು ಸಮರ್ಥಿಸಿ ಪ್ರಚಾರ ಮಾಡಿದರು. ಇವರೂ ತಮ್ಮ ಗುರುಗಳಂತೆಯೇ ದಿವ್ಯ ಪ್ರಬಂಧದ ಪಾರಾಯಣ ಹಾಗೂ ಪ್ರಪತ್ತಿಗಳ ಮೂಲಕ, ಕೆಳಜಾತಿ ಎನಿಸಿಕೊಂಡವರಿಗೂ ಪರಮಾತ್ಮನನ್ನು ಅರಿತು ಮುಕ್ತಿ ಹೊಂದುವ ಅವಕಾಶ–ಅನುಕೂಲಗಳನ್ನು ಕಲ್ಪಿಸಿದರು.

## 4. ಯಾಮುನ (912–1042)

ಆಷಾಢೇಚೋತ್ತರಾಷಾಢಾ ಸಂಭೂತಂ ತತ್ರವೈಪುರೇ |
ಸಿಂಹಾಸನಾಂಶಂ ವಿಖ್ಯಾತಂ ಶ್ರೀಯಾಮುನ ಮುನಿಂಭಜೇ || ೧ |
ಶ್ರೀರಾಮಮಿಶ್ರ ಸಚ್ಛಿಷ್ಯಂ ವಂದೇ ತತ್ತ್ವಾರ್ಥಕೋವಿದಂ |
ವಾದಾದವಾಪ್ತ ರಾಜ್ಯಾಮ್ಯೋ ವಿರಕ್ತೋ ಯಾಮುನೋ ಭವೇತ್ || ೨ ||
ಯತ್ಪದಾಂಭೋರುಹಧ್ಯಾನ ವಿಧ್ವಸ್ತಾಶೇಷ ಕಲ್ಮಷಃ |
ವಸ್ತುತಾಮುಪಯಾತೋಽಹಂ ಯಾಮುನೇಯಂ ನಮಾಮಿತಂ ||೩||
ಸಿಂಹಾಸನಾಂಶ ಭವಮೀಶ್ವರಯೋಗಿ ಸಿಂಧು
ಮುಕ್ತಾಮಣಿಂ ಮಹಿತನಾಥ ಮುನೀಂದ್ರ ಪೌತ್ರಂ ||
ಪ್ರಜ್ಞಾ ವಿಶೇಷ ಜಲಧಿಂ ಪ್ರತಿಪಾದ ತೂಲ
ಜಂಘಾನಿಲಂ ಹೃದಯ ಚಿಂತಯ ಯಾಮುನಾರ್ಯಂ || ೪ ||

ಇವರು ನಾಥಮುನಿಗಳ ಮೊಮ್ಮಗ, ಈಶ್ವರ ಮುನಿಗಳ ಮಗ. ಮಹಾಭಾಷ್ಯ ಭಟ್ಟರ ಪ್ರಿಯಶಿಷ್ಯ. ವೀರನಾರಾಯಣಪುರದಲ್ಲಿದ್ದು ಬಹಳ ಬುದ್ಧಿವಂತ, ಶ್ರೇಷ್ಠ ಜ್ಞಾನಿ, ಭಕ್ತ ಎನಿಸಿದ್ದರು. ಜ್ಞಾಪಕಶಕ್ತಿ ಹೆಚ್ಚಾಗಿದ್ದಿತು. ವಿದ್ಯಾರ್ಥಿಯಾಗಿದ್ದಾಗಲೇ ತಮ್ಮ ವಾದ ಶಕ್ತಿ ಹಾಗೂ ಪಾಂಡಿತ್ಯ ಪ್ರಕಾಶನಗಳಿಂದ, ಅದ್ವೈತದ ಆಚಾರ್ಯರಾದ ಅಕ್ಕಿಆಳ್ವನೆಂಬ ಆಸ್ಥಾನದ ಮಹಾ ವಿದ್ವಾಂಸನನ್ನು ಸೋಲಿಸಿ,

ಅವನಿಗೆ ತಮ್ಮ ಗುರುಗಳು ಕೊಡುತ್ತಿದ್ದ ಕಪ್ಪವನ್ನು ನಿಲ್ಲಿಸಿದರು. ಇದರ ಫಲವಾಗಿ ರಾಜನಿಂದ ಅರ್ಧ ರಾಜ್ಯ ಸಿಕ್ಕಿತು, ರಾಣಿಯಿಂದ ಆಳವಂದಾರ್ ಎಂಬ ಜನಪ್ರಿಯ ಬಿರುದು ದೊರಕಿತು.

ಕೆಲಕಾಲ ರಾಜಭೋಗದಲ್ಲಿದ್ದು, ರಾಮಮಿಶ್ರರ ಸತತ ಪ್ರಯತ್ನದಿಂದ, ಪ್ರಭಾವದಿಂದ, ಸಂನ್ಯಾಸಿಯಾಗಿ ಆಧ್ಯಾತ್ಮಿಕ ಜೀವನವನ್ನು ಅಪ್ಪಿದರು. ಶ್ರೀರಂಗದ ಶ್ರೀವೈಷ್ಣವ ಆಚಾರ್ಯಪೀಠದ ಮುಖ್ಯಸ್ಥರಾಗಿದ್ದು, ಕಾಲಕ್ಷೇಪ, ಗೋಷ್ಠಿಗಳನ್ನು ನಡೆಸಿ, ಆಮೂಲಕ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಚಾರ ಮಾಡಿದರು. ಶ್ರೀರಂಗನಾಥ ದೇವಾಲಯದ ಅಧಿಪತಿಯಾಗಿದ್ದರು. ಅವೈದಿಕ ಮತಗಳೊಡನೆ ಹೋರಾಡಿ ಗೆದ್ದು, ವಿಶಿಷ್ಟಾದ್ವೈತ ತತ್ತ್ವ ಮತ್ತು ಶ್ರೀವೈಷ್ಣವ ಸಂಪ್ರದಾಯಗಳಿಗೆ ನವಚೇತನವನ್ನು ನೀಡಿ, ಉಭಯ ವೇದಾಂತವನ್ನು ಅತಿ ಉತ್ಸಾಹದಿಂದ ಪ್ರಚಾರ ಮಾಡಿದರು ಹಾಗೂ ಪ್ರಾಚೀನ ಶ್ರೀವೈಷ್ಣವ ಆಚಾರ್ಯರೆನಿಸಿದರು. ಇವರ ಶ್ರೀ ತತ್ತ್ವವು ಶ್ರೀವೈಷ್ಣವ ಮತಕ್ಕೆ ಹೊಸ ಕಳೆಯನ್ನು ನೀಡಿತು. ಇವರ ಪ್ರಯತ್ನ ಗಳಿಂದ, ಶ್ರೀರಂಗವು ಶ್ರೀವೈಷ್ಣವ ಮತದ ಪ್ರಬಲ ಕೇಂದ್ರವಾಯಿತು.

ತಾತನಾದ ನಾಥಮುನಿಗಳು ಹಾಕಿದ್ದ ಭದ್ರವಾದ ತಳಹದಿಯ ಮೇಲೆ ಅವರ ಮೊಮ್ಮಗ ಯಾಮುನರು ಭವ್ಯಮಂದಿರವೊಂದನ್ನು ನಿರ್ಮಿಸಿದರು. ಅದ್ವೈತಿ ಆಚಾರ್ಯ ಯಾದವಪ್ರಕಾಶರ ಬಳಿ ಇದ್ದು, ಸಮರ್ಥರೆನಿಸಿದ್ದ, ಮೊಮ್ಮಗಳ ಮಗ ರಾಮಾನುಜರನ್ನು, ಶ್ರೀವೈಷ್ಣವ ಸಿದ್ಧಾಂತದ ನಿರ್ವಹಣೆಗೆ ದೊರಕಿಸಿಕೊಡುವಂತೆ ಯಾಮುನರು ಕಂಚಿಯ ವರದರಾಜಸ್ವಾಮಿಯನ್ನು ಪ್ರಾರ್ಥಿಸಿ ಅವನಲ್ಲಿ ಶರಣು ಹೋದರು. ರಾಮಾನುಜರಿಂದ ಇವರಿಗೆ ಹೆಚ್ಚು ಗೌರವ ಭಕ್ತಿಗಳು ದೊರಕಿದುವು.

ಚತುಶ್ಲೋಕೀ, ಸ್ತೋತ್ರರತ್ನ, ಗೀತಾರ್ಥ ಸಂಗ್ರಹ, ಆಗಮ ಪ್ರಾಮಾಣ್ಯ, ಸಿದ್ಧಿತ್ರಯ, ಮಹಾಪುರುಷ ನಿರ್ಣಯ, ಕಾಶ್ಮೀರಾಗಮ ಸಂಪ್ರದಾಯ, ಇವರ ಶ್ರೇಷ್ಠ ಕೃತಿಗಳು.

ಇವರ ಮುಖ್ಯ ಶಿಷ್ಯರಾದ ಮಹಾಪೂರ್ಣ, ಶ್ರೀಶೈಲಪೂರ್ಣ, ಕಾಂಚೀ ಪೂರ್ಣ, ಗೋಷ್ಠೀಪೂರ್ಣ, ಮಾಲಾಧರ, ವರರಂಗನಾಯಕ–ಇವರು ಗುರುಗಳಿಂದ ಕಲಿತಿದ್ದ ವಿಶಿಷ್ಟಾದ್ವೈತದ ಒಂದೊಂದು ರಹಸ್ಯಗಳನ್ನು ರಾಮಾನುಜರಿಗೆ ತಿಳಿಸಿ ಕೊಟ್ಟು, ಅವರನ್ನು ಸಿದ್ಧಾಂತಿ ಸ್ಥಾಪನಾಚಾರ್ಯರಾಗಿ ಮಾಡಿ ಗುರುಗಳ ಮಹದಿಚ್ಛೆ ಯನ್ನು ಪೂರ್ಣಗೊಳಿಸಿದರು.

## 5. ಮಹಾಪೂರ್ಣ

ಕಮಲಾಪತಿ ಕಲ್ಯಾಣ ಗುಣಾಮೃತ ನಿಷೇವಯಾ ।
ಪೂರ್ಣಕಾಮಾಯ ಸತತಂ ಪೂರ್ಣಾಯ ಮಹತೇನಮಃ ॥ ೧ ॥

ಆಚಾರ್ಯಾದ್ಯಾಮುನೇಯಾ ದಧಿಗತ ನಿಗಮಾನಾರ್ಥ ಜಾತಃ
ಪ್ರಪತ್ತಿಂ
ಚೋಳಾರಿಕ್ಷದ್ರಹಸ್ಯಾನ್ಯಪಿಯತಿ ಪತಯೇಯಶ್ಚತದ್ರಕ್ಷಣಾರ್ಥಂ ||
ಚೋಳೇಂದ್ರಪ್ರಾಪ್ಯ ಚೋಕ್ತ್ವಾ ಸದಸಿಪರವುಮಾನ್
ಶ್ರೀಪತೀರ್ಹೀಕಿಪೀಡಾಂ
ಶಾರೀರಾಂ ತತ್ಕೃತಾಂ ಚಾಪ್ಯ ಸಹತಮನವ್ಯೆ
ತಂ ಮಹಾಪೂರ್ಣಮಾರ್ಯಂ || ೨ ||

ಯಾಮುನರ ಮುಖ್ಯ ಶಿಷ್ಯರಾದ ಇವರಿಗೆ ಪೆರಿಯನಂಬಿ, ಪರಾಂಕುಶದಾಸ, ಎಂದೂ ಹೆಸರು. ಇವರು ಯಾಮುನರ ನಂತರ ಕೆಲಕಾಲ ದರ್ಶನದ ನಿರ್ವಾಹಕರಾಗಿದ್ದರು.

ಶ್ರೀರಂಗದ ಶ್ರೀವೈಷ್ಣವ ಮಂಡಲಿಯ ಪ್ರಾರ್ಥನೆಯಂತೆ, ಯಾಮುನರು ಈ ಮೊದಲೇ ಸೂಚಿಸಿದ್ದ ರಾಮಾನುಜರನ್ನು ಕರೆತರಲು ಕಂಚಿಗೆ ಹೊರಟು, ದಾರಿಯಲ್ಲಿ ಮಧುರಾಂತಕದ ಏರಿಕಾತ್ತ ಪೆರುಮಾಳ್ ಎಂಬ ಶ್ರೀರಾಮಚಂದ್ರನ ದೇವಾಲಯದಲ್ಲಿ ತಂಗಿದ್ದರು. ವರದರಾಜಸ್ವಾಮಿಯ ಆಜ್ಞೆಯಂತೆ ಪೆರಿಯನಂಬಿಗಳನ್ನು ಆಶ್ರಯಿಸುವ ಸಲುವಾಗಿ ಕಂಚಿಯಿಂದ ಶ್ರೀರಂಗಕ್ಕೆ ಹೊರಟ ರಾಮಾನುಜರು ದಾರಿಯಲ್ಲೇ ಮಧುರಾಂತಕದಲ್ಲಿ ಅನಿರೀಕ್ಷಿತವಾಗಿ ಪೆರಿಯನಂಬಿಗಳನ್ನು ಭೇಟಿಯಾದರು. ಪಂಚಸಂಸ್ಕಾರ, ಮಂತ್ರೋಪದೇಶ ಮಾಡಿದ ಮೇಲೆ, ನ್ಯಾಸತತ್ತ್ವ, ಗೀತಾರ್ಥ ಸಂಗ್ರಹ, ಸಿದ್ಧಿತ್ರಯ, ವ್ಯಾಸಸೂತ್ರ, ಪಾಂಚರಾತ್ರಾಗಮಗಳನ್ನು ಮಹಾಪೂರ್ಣರು ರಾಮಾನುಜರಿಗೆ ಕಲಿಸಿದರು. ಆ ಮೂಲಕ ರಾಮಾನುಜರ ಮುಖ್ಯ ಆಚಾರ್ಯರೆನಿಸಿದರು. ರಾಮಾನುಜರನ್ನು ರಾಮಾನುಜನ್ ಎಂದು ಕರೆದರು.

"ಪ್ರಮಾಣ ಎಂದರೆ ಭಗವಂತನ ಜ್ಞಾನದ ಆಧಾರವಾದ ಪವಿತ್ರ ಗ್ರಂಥಗಳ ಸಾರವು, ದಿವ್ಯ ಮಂತ್ರಗಳಲ್ಲಿ ಅಡಗಿದೆ. ಮಾತಾಪಿತೃ ಸದೃಶನಾದ ಭಗವಂತನ ದಿವ್ಯದರ್ಶನದ ಆಧಾರ ಹೊಂದಿರುವುದು ಪ್ರಮೇಯ. ಈ ದರ್ಶನ ಅಂದರೆ ಭಗವಂತನ ಜ್ಞಾನವನ್ನು ಹೊಂದಿದವನು ಪ್ರಮಾತಾ. ಭಗವಂತನು ಒಬ್ಬನೇ. ಅವನು ಕರುಣಾಮಯ, ಪೂರ್ಣಜ್ಞಾನಿ, ಸರ್ವಶಕ್ತ, ನಮ್ಮೆಗಳೆಲ್ಲರ ಸ್ವಾಮಿ. ಅವನ ಪವಿತ್ರವಾದ ಕೈಂಕರ್ಯವೇ ಜೀವನದ ಗುರಿ" ಇದು ಮಹಾಪೂರ್ಣರು ರಾಮಾನುಜರಿಗೆ ಉಪದೇಶಿಸಿದ ಸಾರಾಂಶ.

ಪೆರಿಯನಂಬಿಗಳು, ಕೂರೇಶರೊಂದಿಗೆ ಸೇರಿ, ರಾಮಾನುಜರಿಗೆ ಬದಲಾಗಿ ಶಿವಭಕ್ತ ಚೋಳರಾಜನ ಆಸ್ಥಾನಕ್ಕೆ ಹೋಗಿ, ವಿಷ್ಣುವಿನ ಪಾರಮ್ಯವನ್ನು ಸಮರ್ಥಿಸಿದುದರ ಫಲವಾಗಿ ಕಣ್ಣುಗಳನ್ನು ಕಳೆದುಕೊಂಡರು. ಇವರು ರಾಮಾನುಜರಿಗಾಗಿ

ಕಷ್ಟಪಟ್ಟು ತ್ಯಾಗಮಾಡಿದ್ದಾರೆ. ತಮ್ಮ ಮಗ ಪುಂಡರೀಕನನ್ನು ರಾಮಾನುಜರ ಶಿಷ್ಯರನ್ನಾಗಿ ಮಾಡಿದರು.

ಇವರು ಅಂತ್ಯಜನಾದ, ಯಾಮುನರ ಶಿಷ್ಯ ಮಾರನೇರ್ ನಂಬಿಯ ಅಂತ್ಯ ಸಂಸ್ಕಾರ ಮಾಡಿದುದಕ್ಕಾಗಿ ಕುಲದಿಂದ ಹೊರಗಟ್ಟಲ್ಪಟ್ಟರು. ಇವರ ಮಗಳಾದ ಅತ್ತುಳಾಯ್ ಪ್ರಾರ್ಥನೆಯ ಮೇರೆಗೆ, ರಂಗನಾಥಸ್ವಾಮಿಯೇ ಆಜ್ಞೆ ಮಾಡಿದುದರ ಫಲವಾಗಿ, ಇವರಿಗೆ ಕಳೆದ ಗೌರವ ಮತ್ತೆ ಸಿಗುವಂತೆ ಮಾಡಿದನು.

## 6. ಶ್ರೀಶೈಲಪೂರ್ಣ

ಪಿತಾಮಹಸ್ಯಾಪಿ ಪಿತಾಮಹಾಯ ।
ಪ್ರಾಚೇತಸಾ ದೇಶ ಫಲಪ್ರದಾಯ ॥
ಶ್ರೀಭಾಷ್ಯಕಾರೋತ್ತಮದೇಶಿಕಾಯ ।
ಶ್ರೀಶೈಲ ಪೂರ್ಣಾಯ ನಮೋ ನಮಸ್ತೇ ॥ ೧ ॥

ಇವರೂ ಯಾಮುನರ ಮುಖ್ಯ ಶಿಷ್ಯರು. ರಾಮಾನುಜರ ಸೋದರಮಾವನಾದ ಇವರು ಅವರ ಗುರುಗಳಲ್ಲಿ ಒಬ್ಬರು. ಇವರಿಗೆ ಪೆರಿಯ ತಿರುಮಲೆನಂಬಿ, ತಾತ ಆಚಾರ್ಯ ಎಂದೂ ಹೆಸರು.

ತಾತ ಯಾಮುನರ ಇಚ್ಛೆಯಂತೆ, 15 ವರ್ಷ ಆಗಿದ್ದಾಗಲೇ ತಂದೆ ದೈವತ್ತುಕ್ಕರಸು ನಂಬಿ ಅಥವಾ ದೇವಾಧಿರಾಜ ಹಾಗೂ ತಂಗಿಯರಾದ ಕಾಂತಿಮತಿ, ದ್ಯುತಿಮತಿಯರೊಡನೆ ತಿರುಪತಿ ಬೆಟ್ಟಕ್ಕೆ ಬಂದು, ಅಲ್ಲಿ ಶ್ರೀನಿವಾಸಸ್ವಾಮಿಗೆ ಹೂ ಮತ್ತು ನೀರು ತಂದುಕೊಡುವ ಕೈಂಕರ್ಯದಲ್ಲಿ ನಿರತರಾಗಿದ್ದರು. ದೇವರ ಅಲಂಕಾರಕ್ಕೆ ಬೇಕಾದ ಬಗೆಬಗೆಯ ಹೂಗಳಿಗಾಗಿ ನಂದನವನವೊಂದನ್ನು ಬೆಳೆಸಿದರು. ಮೊದಲು ದೂರದ ಪಾಪವಿನಾಶ ತೀರ್ಥದಿಂದಲೂ, ವಯಸ್ಸಾದಾಗ ಹತ್ತಿರದ ಆಕಾಶಗಂಗೆಯಿಂದಲೂ ನೀರನ್ನು ತರುತ್ತಿದ್ದರು.

ವೇದ, ರಾಮಾಯಣ, ತಿರುವಾಯ್ಮೊಳಿಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದು, ಉಭಯ ವೇದಾಂತದಲ್ಲಿ ಹೆಚ್ಚು ಜ್ಞಾನವಿದ್ದಿತು. ದೇವಾಲಯದ ಬಳಿ ಇದ್ದ ಇವರ ಮನೆಯು–ತಿರುಮಲೈನಂಬಿ ತಿರುಮಾಳಿಗೆ–ಶಿಕ್ಷಣ ಹಾಗೂ ವಿಶಿಷ್ಟಾದ್ವೈತ ವೇದಾಂತದ ಪ್ರವಚನ ಕೇಂದ್ರ ಆಗಿದ್ದಿತು. ಇವರ ಕೀರ್ತಿಯನ್ನು ಕೇಳಿ ಇವರ ಬಳಿಯಲ್ಲಿ ವಿದ್ಯೆ ಕಲಿಯಲು ಬಂದ ಯುವಕರು ಇವರ ತಂಗಿಯರನ್ನು ವಿವಾಹವಾದರು. ಶ್ರೀಪೆರಂಬೂದೂರಿನ ಆಸೂರಿ ಕೇಶವಭಟ್ಟರು ಕಾಂತಿಮತಿಯನ್ನೂ, ಮಧುರಮಂಗಲದ ಕಮಲನಯನಭಟ್ಟರು ದ್ಯುತಿಮತಿಯನ್ನೂ, ವಿವಾಹವಾದರು. ಕಾಂತಿಮತಿಯ ಮಗನಾದ ರಾಮಾನುಜ, ದ್ಯುತಿಮತಿಯ ಮಗನಾದ ಗೋವಿಂದ, ಇಬ್ಬರೂ ವಿಶಿಷ್ಟಾದ್ವೈತಕ್ಕೆ ಸೇವೆ ಸಲ್ಲಿಸಿದ್ದಾರೆ.

ರಾಮಾನುಜರ ತಂದೆಗೆ ಅವರ ಮದುವೆಯ ಮುನ್ನ, ರಾಮಾನುಜರಿಗೆ ಅವರು ಜನ್ಮ ತಳೆದಾಗ, ಪಂಚ ಸಂಸ್ಕಾರಗಳನ್ನು ನೀಡಿ ಉತ್ತಮದೇಶಿಕ, ಶ್ರೇಷ್ಠ ಆಚಾರ್ಯರೆನಿಸಿದರು. ರಾಮಾಯಣ, ತಿರುವಾಯ್ಮೊಳಿಗಳನ್ನು ಓದಿ ಅರ್ಥಮಾಡಿಕೊಂಡಿದ್ದ ತಿರುಮಲೆ ನಂಬಿಗಳು, ನಮ್ಮಾಳ್ವಾರರ ಬೋಧನೆಯ ತಿರುಳಾದ ಪ್ರಪತ್ತಿ ಅಥವಾ ಶರಣಾಗತಿಗೆ ಪ್ರಾಶಸ್ತ್ಯ ನೀಡಿ, ಅದಕ್ಕೆ ಸ್ಫೂರ್ತಿ ನೀಡುವ ರಾಮಾಯಣದ ಗೂಡಾರ್ಥ ಸಾರವನ್ನು ರಾಮಾನುಜರಿಗೆ ಉಪದೇಶಿಸಿದರು. ತಮ್ಮ ಮಗ ಪಿಳ್ಳಾನ್‌ರನ್ನು ರಾಮಾನುಜರ ಶಿಷ್ಯನಾಗುವಂತೆ ಮಾಡಿದರು.

ಆಕಾಶಗಂಗೆಯ ನೀರು ತರುತ್ತಿದ್ದಾಗ ಇವರನ್ನು ದೇವರೇ 'ತಾತ, ದಾಹವಾಗಿದೆ, ನೀರು ಕೊಡು' ಎಂದು ಕರೆದುದರಿಂದ, ಇವರು ತಾತಾಚಾರ್ಯ ಎನಿಸಿ, ಆ ಪರಂಪರೆಯ ಮೂಲ ಪುರುಷರಾದರು. ಇವರ ವಂಶದವರೇ ತಿರುಮಲೆ, ತಿರುಪತಿ ದೇವಾಲಯಗಳಲ್ಲಿ ಮೊದಲ ಆಚಾರ್ಯ ಪುರುಷರೆನಿಸಿದರು.

ರಾಮಾಯಣದ ಗೂಢಾರ್ಥವನ್ನು ಕಲಿಯುತ್ತಿದ್ದಾಗ, ತಮ್ಮಂತೆಯೇ ಶ್ರೀನಿವಾಸ ದೇವರಿಗೆ ಮನಃಪೂರ್ವಕವಾಗಿ ಸೇವೆಮಾಡಿದ ರಾಮಾನುಜರನ್ನು 'ಕೋಯಿಲಣ್ಣನ್' ಎಂದು ಕರೆದು ಹೊಗಳಿದರು. ರಾಮಾನುಜರ ಪ್ರಾರ್ಥನೆಯಂತೆ ಶೈವರಾಗಿದ್ದ ಅದ್ವೈತಿ ಗೋವಿಂದನನ್ನು, ವಿಶಿಷ್ಟಾದ್ವೈತ ಪಂಥಕ್ಕೆ ಬರುವಂತೆ ಶ್ರಮಿಸಿ ಸಫಲರಾದರು.

## 7. ಗೋಷ್ಠೀಪೂರ್ಣ

ಶಮದಮಗುಣಪೂರ್ಣಂ ಯಾಮುನಾರ್ಯ ಪ್ರಸಾದಾತ್
ಅಧಿಗತ ಪರಮಾರ್ಥಂ ಜ್ಞಾನಭಕ್ತ್ಯಾದಿ ಸಿಂಧುಂ ||
ಯತಿಪತಿನುತ ಪಾದಂ ಶ್ಲೋಕ ತತ್ತ್ವಾರ್ಥ ನಿಷ್ಠಂ
ಶ್ರಿತದುರಿತ ಹರಂ ಗೋಷ್ಠೀಪೂರ್ಣಂ ನಮಾಮಿ || ೧ ||

ಇವರು ಪುದುಕೋಟೆಯ ಬಳಿಯ ತಿರುಕ್ಕೋಟ್ಟಿಯೂರ್‌ನಲ್ಲಿ ವಾಸಿಸುತ್ತಿದ್ದುದರಿಂದ, ಇವರಿಗೆ ತಿರುಕ್ಕೋಟ್ಟಿಯೂರ್‌ನಂಬಿ ಎಂದೂ ಹೆಸರಿದ್ದಿತು. ಇವರು ಸುಪ್ರಸಿದ್ಧ ಧಾರ್ಮಿಕ ಪಂಡಿತರು.

ಇವರ ಬಳಿ ಮಂತ್ರಗಳ ರಹಸ್ಯಾರ್ಥವನ್ನು ತಿಳಿಯಲು ರಾಮಾನುಜರು ಶ್ರೀರಂಗದಿಂದ ಮಧುರೆಗೆ, ಬೇಸರವಿಲ್ಲದ ಹದಿನೆಂಟು ಬಾರಿ ಹೋಗಿ ಬಂದರು. ರಾಮಾನುಜರ ಆಸಕ್ತಿ, ಮನೋದಾರ್ಢ್ಯದ ಪರೀಕ್ಷೆ ಚೆನ್ನಾಗಿಯೇ ಆಯಿತು; ತಮಗೆ ಆಧ್ಯಾತ್ಮಿಕ ವಿದ್ಯೆಯಲ್ಲಿ ಅಚಲವಾದ ಶ್ರದ್ಧೆಯಿದೆ ಎಂಬುದನ್ನು ರಾಮಾನುಜರು ಗುರುಗಳಿಗೆ ಮನವರಿಕೆ ಮಾಡಿಕೊಟ್ಟರು. ಅಷ್ಟಾಕ್ಷರೀ ಮಂತ್ರವು ಭಕ್ತಿವರ್ಧಕ,

ವಿರಕ್ತಿಯ ಸಾಧನ, ಶಾಂತಿದಾಯಕ, ಸಕಲ ಇಷ್ಟಾರ್ಥ ಸಿದ್ಧಿದಾಯಕ, ಎಂದು ರಾಮಾನುಜರಿಗೆ ಗುರುಗಳು ಉಪದೇಶಿಸಿದರು. ಬಹಳ ಶ್ರಮಪಟ್ಟು ಕಲಿತ ಅತಿ ಗೋಪ್ಯವಾದ ತಿರುಮಂತ್ರವನ್ನು, ಸಕಲ ಚೇತನರ ಉದ್ಧಾರವಾಗಲೆಂದು ಎಲ್ಲರಿಗೂ ಉಪದೇಶಿಸಿ, ಆ ಮೂಲಕ ಕೊಟ್ಟ ಮಾತನ್ನು ಮುರಿದ ರಾಮಾನುಜರ ಬಗ್ಗೆ, ಗೋಷ್ಠಿಪೂರ್ಣರಿಗೆ ಬಹಳ ಕೋಪ ಬಂದರೂ, ರಾಮಾನುಜರ ಔದಾರ್ಯ, ಕಾರುಣ್ಯಗಳು ಮಿಗಿಲಾದುವು ಎಂದು ಒಪ್ಪಿಕೊಂಡು, ಅವರನ್ನು ಎಂಬೆರುಮಾನಾರ್ ಎಂದು ಕರೆದು ಹೊಗಳಿದರು. ಅಲ್ಲದೆ ವಿಶಿಷ್ಟಾದ್ವೈತ ಸಿದ್ಧಾಂತವು ಇನ್ನು ಮುಂದೆ 'ಎಂಬೆರುಮಾನಾರ್ ದರ್ಶನ'ವೆಂದೇ ಕರೆಯಲ್ಪಡಲಿ ಎಂದು ಶಿಷ್ಯನನ್ನು ಹರಸಿದರು.

ರಾಮಾನುಜರಲ್ಲಿರುವ ಸರ್ವವ್ಯಾಪಕವಾದ ಪ್ರೇಮವು ತನ್ನಲ್ಲಿ ಬರಲಿಲ್ಲವಲ್ಲಾ ಎಂದು ಮರುಗಿದ ಗುರುಗಳು, ತ್ಯಾಗಶೀಲರೂ, ಉದಾರ ಚರಿತರೂ ಆದ ರಾಮಾನುಜರೇ ತಮ್ಮ ಗುರು ಎಂದು ಭಾವಿಸಿದರು. ತಮ್ಮ ಮಗ ಸೌಮ್ಯ ನಾರಾಯಣನನ್ನು ರಾಮಾನುಜರ ಶಿಷ್ಯನಾಗಿ ಮಾಡಿದರು.

## 8. ಮಾಲಾಧರ

ರಾಮಾನುಜ ಮುನೀಂದ್ರಾಯ ದ್ರಾಮಿಡೀ ಸಂಹಿತಾರ್ಥದಂ ।
ಮಾಲಾಧರ ಗುರುಂ ವಂದೇ ಪಾಪದೂರಂ ವಿಪಶ್ಚಿತಂ ॥ ೧ ॥

ಇವರಿಗೆ ತಿರುಮಲೈಯಾಂಡಾನ್ ಎಂದೂ ಹೆಸರು. ಗೋಷ್ಠೀಪೂರ್ಣರ ಸಲಹೆಯಂತೆ ಇವರು ರಾಮಾನುಜರಿಗೆ ದಿವ್ಯ ಪ್ರಬಂಧಗಳ, ಮುಖ್ಯವಾಗಿ ಶಠಾರಿ ಸೂಕ್ತಿ ಅಥವಾ ಸಹಸ್ರಗೀತಿಯ ವಿಶೇಷಾರ್ಥವನ್ನು ಕಲಿಸಿದರು.

ಗುರುಶಿಷ್ಯರಲ್ಲಿ ಪ್ರಬಂಧದ ಸರಿಯಾದ ಅರ್ಥದ ಬಗ್ಗೆ ಅತೃಪ್ತಿ, ವಿವಾದ ಬಂದು ಪಾಠಕ್ಕೆ ತಡೆ ಉಂಟಾದಾಗ, ಗೋಷ್ಠಿಪೂರ್ಣರು ಮಧ್ಯಸ್ಥಿಕೆ ವಹಿಸಿ ಪಾಠವು ಮುಂದುವರೆಯುವಂತೆ ಮಾಡುತ್ತಿದ್ದರು. ಕೊನೆಯಲ್ಲಿ ನಾಥಮುನಿ ಮತ್ತು ಯಾಮುನಮುನಿಗಳ ಅಭಿಪ್ರಾಯವು ತಮಗಿಂತಲೂ ರಾಮಾನುಜರಿಗೇ ಚೆನ್ನಾಗಿ ತಿಳಿದಿದೆಯೆಂಬುದನ್ನು ಅರಿತ ಮಾಲಾಧರರು, ರಾಮಾನುಜರನ್ನು 'ಶಠಗೋಪನ್ ಪೊನ್ನಡಿ' ಎಂದು ಹೊಗಳಿದರು.

ತಮ್ಮ ಮಗ ಸುಂದರಬಾಹುವನ್ನು ರಾಮಾನುಜರ ಶಿಷ್ಯರಾಗಿ ಮಾಡಿದರು.

## 9. ವರರಂಗಗಾಯಕ

ಅಧ್ಯಾಯ ಪದ್ಯತೀಂದ್ರಾಯ ಪರಾಂಕುಶ ಮಹೀಸ್ಸ್ತಕಾಂ ।
ತಾನ್ಯಾಥ ವಂಶ್ಯಂ ವಂದೇಹಂ ಶ್ರೀರಂಗಾಧಿಪದೇಶಿಕಂ ॥ ೧ ॥

ಯಾಮುನರ ಮಗ, ಅಂತರಂಗ ಭಕ್ತ, ಶಿಷ್ಯ, ಮಹಾತ್ಮ. ಯಾಮುನರ ನಂತರ ರಂಗನಾಥ ದೇವಾಲಯದ ಅಧಿಕಾರಿಯಾಗಿದ್ದರು. ಶ್ರೀರಂಗದ ರಂಗನಾಥನ ಮುಂದೆ ತಿರುವಾಯ್ಮೊಳಿಯನ್ನು ಸಂಗೀತಕ್ಕೆ ಅಳವಡಿಸಿ, ಯಕ್ಷಗಾನದ ಅಭಿನಯ–ನೃತ್ಯ-ನಾಟಕ ರೂಪದಲ್ಲಿ ಅದ್ಭುತವಾಗಿ ಹಾಡುತ್ತಿದ್ದರು, ಹಾಗೂ ವಾಚನ ಮಾಡುತ್ತಿದ್ದರು. ಇವರಿಗೆ ತಿರುವರಂಗಪ್ಪೆರುಮಾಳ್ ಅರೈಯರ್, ಆಳವಂದಾರಾಳ್ವಾನ್ ಎಂಬ ಹೆಸರಿದ್ದಿತು.

ಭಕ್ತರು, ಜ್ಞಾನಿಗಳು ಆದರೂ, ಪವಿತ್ರ ಗ್ರಂಥಗಳಿಗೆ ಅನುಭವ ಸಿದ್ಧವಾದ ಶಾಸ್ತ್ರನೈಪುಣ್ಯತೆಯಿಂದ ಕೂಡಿದ ಅರ್ಥ ವಿವರಣೆಯನ್ನು ಹೇಳುವ ಸಾಮರ್ಥ್ಯವನ್ನು ಬೆಳೆಸಿಕೊಂಡಿರಲಿಲ್ಲ. ಭಗವದಾರಾಧನೆಯಲ್ಲೇ ಹೆಚ್ಚು ಕಾಲವನ್ನು ಕಳೆಯುತ್ತಿದ್ದ ಅವರಿಗೆ ಕಾಲಕ್ಷೇಪ ಹೇಳುವುದಕ್ಕೂ ವಿರಾಮವಿರುತ್ತಿರಲಿಲ್ಲ.

ಕಂಚಿಯ ವರದರಾಜಸ್ವಾಮಿಯ ಮುಂದೆ ಶ್ಲೋಕ, ಪ್ರಬಂಧಗಳನ್ನು ದಿವ್ಯವಾಗಿ, ಮಧುರವಾಗಿ ಹಾಡಿ, ನರ್ತಿಸಿ, ಅಭಿನಯಿಸಿ, ಅವನನ್ನು ಮೆಚ್ಚಿಸಿ, ಅವನಿಂದ ಅಪ್ಪಣೆ ಪಡೆದು, ರಾಮಾನುಜರನ್ನು ಶ್ರೀರಂಗಕ್ಕೆ ಕರೆತಂದವರು ಇವರೇ.

ರಾಮಾನುಜರ ಸೇವೆ, ಕೈಂಕರ್ಯದಿಂದ ತೃಪ್ತರಾಗಿ ಅವರಿಗೆ ಚರಮಪರ್ವವೆಂಬ ಧರ್ಮ ರಹಸ್ಯಗಳನ್ನು ತಿಳಿಸಿದರು. ಅವರನ್ನು ಲಕ್ಷ್ಮಣಮುನಿ ಎಂದು ಕರೆದರು.

"ಗುರುರೇವ ಪರಂಬ್ರಹ್ಮ ಗುರುರೇವ ಪರಂಧನಂ ।
ಗುರುರೇವಪರಃ ಕಾಮೋ ಗುರುರೇವಪರಾಯಣಂ ।
ಗುರುರೇವ ಪರಾವಿದ್ಯಾ ಗುರುರೇವ ಪರಾಗತಿಃ ।
ಯಸ್ಮಾತ್ತ್ವದುಪದೇಷ್ಟಾಸೌ ತಸ್ಮಾದ್ಗುರು ತರೋ ಗುರುಃ
ಉಪಾಯಶ್ಚಾಪ್ಯುಪೇಯಶ್ಚ ಗುರುರೇವೇತಿ ಭಾವಯಃ ॥"

ಎಂದು ಉಪದೇಶಿಸಿದರು.

ತನ್ನ ತಮ್ಮ ಚೋಟನಂಬಿಯನ್ನು ರಾಮಾನುಜರ ಶಿಷ್ಯರಾಗಿ ಮಾಡಿದರು.

## 10. ಕಾಂಚೀಪೂರ್ಣ

ಕರುಣಾಕರ ಪಾದಾಬ್ಜ ಶರಣಾಯ ಮಹಾತ್ಮನೇ ।
ಶ್ರೀಮದ್ಗಜೇಂದ್ರದಾಸಾಯ ಕಾಂಚೀಪೂರ್ಣಾಯ ತೇನಮಃ ॥ ೧ ॥

ಇವರಿಗೆ ತಿರುಕ್ಕಚ್ಚಿನಂಬಿ ಎಂದೂ ಹೆಸರು. ಜನ್ಮತಃ ವೈಶ್ಯರು, ಶಾತ್ತಾದ ಶ್ರೀವೈಷ್ಣವರು. ಕಂಚಿಯ ವರದರಾಜಸ್ವಾಮಿಯ ಅಂತರಂಗಭಕ್ತರು.

ಭಗವದ್ಭಕ್ತ, ವಿನಯಶೀಲ, ಸರಳ ಸ್ವಭಾವದವ, ಅಪರೋಕ್ಷಜ್ಞಾನಿ, ನಿರಹಂಕಾರಿ, ಅಜಾತಶತ್ರು, ದ್ವೇಷಾಸೂಯೆಗಳಿಂದ ಮುಕ್ತ, ನಿರ್ಮಲಾಂತಃಕರಣಿ–ಆಗಿದ್ದ ಇವರು, ವೈಕುಂಠದಿಂದ ಬಂದ ದಿವ್ಯದೂತ ಎಂಬ ಭಾವನೆ ಜನರಲ್ಲಿ ಉಂಟಾಗಿದ್ದಿತು. ಇವರ ದರ್ಶನವೇ ಸಂಕಟ, ಕ್ಲೇಶ, ವಿಪತ್ತುಗಳನ್ನು ನಾಶಪಡಿಸಿ, ಶಾಂತಿ, ಸಂತೋಷ, ಭಕ್ತಿಗಳನ್ನು ಉಂಟುಮಾಡುತ್ತಿದ್ದಿತು. ರಾಮಾನುಜರ ತಾಯಿ ಕಾಂತಿಮತಿಗೆ ಇವರಲ್ಲಿ ವಿಶೇಷ ಗೌರವವಿದ್ದಿತು.

ಕಂಚಿಯ ವರದರಾಜಸ್ವಾಮಿಯು ತನ್ನ ಇಷ್ಟ ಹಾಗೂ ಮಾರ್ಗದರ್ಶನಗಳನ್ನು ಇವರ ಮೂಲಕ ಭಕ್ತರಿಗೆ ತಿಳಿಸುತ್ತಿದ್ದನೆಂದು ಪ್ರತೀತಿ. ಗುರು ಯಾಮುನರಿಂದ ಇವರು ಶ್ರೀವೈಷ್ಣವರಿಗೆ ಮಾರ್ಗದರ್ಶಕರೆಂದು ಹೊಗಳಿಸಿಕೊಂಡಿದ್ದರು; ಓಡಾಡುವ ವರದರಾಜಸ್ವಾಮಿಯೆಂದು ಶಿಷ್ಯ ರಾಮಾನುಜರಿಂದಲೂ ಹೊಗಳಿಸಿಕೊಂಡರು. ರಾಮಾನುಜರ ಸಂದೇಹಗಳಿಗೆ ಇವರು ದೇವರ ಆದೇಶವನ್ನು ತಿಳಿದು ಹೇಳಿದರು ಹಾಗೂ ಅವರಿಗೆ ಅನೇಕ ಕಷ್ಟ ಸಂದರ್ಭ, ಸನ್ನಿವೇಶಗಳಲ್ಲೆಲ್ಲಾ ಮಾರ್ಗದರ್ಶಿ, ಆಚಾರ್ಯರಾಗಿದ್ದರು.

ಆಧ್ಯಾತ್ಮಿಕದಲ್ಲಿ ವರ್ಣಾಶ್ರಮ ವ್ಯವಸ್ಥೆಯನ್ನು ತಳ್ಳಿಹಾಕಬಹುದಾದರೂ, ಸಮಾಜವು ಸಮರಸವಾಗಿ ಉಳಿಯಲು ಈ ವ್ಯವಸ್ಥೆಯನ್ನು ಉಳಿಸಿಕೊಳ್ಳಬೇಕು ಎಂಬ ಅಭಿಪ್ರಾಯವನ್ನು ಹೊಂದಿದ್ದ ತಿರುಕ್ಕಚ್ಚಿನಂಬಿಗಳು, ರಾಮಾನುಜರ ಗುರುಗಳಾಗಲು ಒಪ್ಪಿಕೊಳ್ಳದೆ, ಕೇವಲ ಮಿತ್ರ, ಮಾರ್ಗದರ್ಶಕರಾಗಿಯೇ ಉಳಿದರು.

---

## ಅಧ್ಯಾಯ ೯

# ವಿಶಿಷ್ಟಾದ್ವೈತದ ವಿಶ್ವಾಚಾರ್ಯ ರಾಮಾನುಜ
## (1017–1137)

ಚೈತ್ರಾರ್ದ್ರಾಸಂಭವಂ ವಿಷ್ಣೋರ್ದರ್ಶನ ಸ್ಥಾಪನೋತ್ಸುಕಂ ।
ತುಂಡೀರ ಮಂಡಲೇಶೇಷಮೂರ್ತಿಂ ರಾಮಾನುಜಂ ಭಜೇ ॥ ೧ ॥
ಯೋನಿತ್ಯಮಚ್ಯುತ ಪದಾಂಬುಜ ಯುಗ್ಮರುಕ್ಮ
ವ್ಯಾಮೋಹತ ಸ್ತದಿತರಾಣಿ ತೃಣಾಯ ಮೇನೇ ॥
ಅಸ್ಮದ್ಗುರೋರ್ಭಗವತೋಽಸ್ಯದಯೈಕ ಸಿಂಧೋ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ॥ ೨ ॥

ಆಳ್ವಾರುಗಳ ಗೋಷ್ಠಿಯಲ್ಲಿ ಪ್ರಸನ್ನ ಜನಕೂಟಸ್ಥ ಎಂದು ಪ್ರಸಿದ್ಧರಾದ ನಮ್ಮಾಳ್ವಾರರಂತೆ, ಆಚಾರ್ಯರುಗಳ ಗೋಷ್ಠಿಯಲ್ಲಿ ಭಗವಾನ್ ಎನಿಸಿದ ರಾಮಾನುಜರು ಅಸಮಾನರಾಗಿ ಅಮೋಘವಾದ ಸ್ಥಾನವನ್ನು ಗಳಿಸಿದ್ದಾರೆ. ತಮ್ಮ ಪೂರ್ವಾಚಾರ್ಯ ಪರಂಪರಾಪ್ರಾಪ್ತವಾದ ಅರ್ಥ ವಿಶೇಷಗಳನ್ನು ಸರಿಯಾಗಿ ಗ್ರಹಿಸಿ, ಅವೆಲ್ಲವನ್ನೂ ಯಥಾವತ್ತಾಗಿ ಅರ್ವಾಚೀನ ಆಚಾರ್ಯ ಪರಂಪರೆಗೆ ಉಪದೇಶಿಸಿ ಉಪಕರಿಸಿದ್ದಾರೆ.

ಶ್ರೀಮನ್ನಾರಾಯಣನೇ ವ್ಯಾಸರಾಗಿ ಅವತರಿಸಿ ಸಂಸ್ಕೃತ ಭಾಷೆಯಲ್ಲಿ ಶಾರೀರಕ ಮೀಮಾಂಸೆಯೆಂಬ ಬ್ರಹ್ಮಸೂತ್ರಗಳನ್ನು ರಚಿಸಿದರು ; ಅವರೇ ಆಮೇಲೆ ನಮ್ಮಾಳ್ವಾರರಾಗಿ ಬಂದು ಬ್ರಹ್ಮಸೂತ್ರಗಳನ್ನು ತಮಿಳು ಭಾಷೆಯಲ್ಲಿ ಸುಂದರವಾದ ಸೂಕ್ತಿಗಳಿಂದ ವಿವರಿಸಿದರು ; ಕೊನೆಗೆ ಅವರೇ ರಾಮಾನುಜರಾಗಿಯೂ ಅವತರಿಸಿ ಸಂಸ್ಕೃತ-ತಮಿಳು ಎರಡೂ ಸುವಿಶದವಾಗಿ ಪ್ರಕಾಶವಾಗುವಂತೆ ಮಾಡಿ ಈ ಲೋಕದ ಜನತೆಯನ್ನು ಉದ್ಧರಿಸಿದರು.

ವಿಷ್ಣುರೂಪವಾದ ವೇದವ್ಯಾಸರಿಂದ ಸೂತ್ರರೂಪದಲ್ಲಿ ಉಕ್ತವಾಗಿ, ಬೋಧಾಯನ, ಟಂಕ, ದ್ರಮಿಡ, ಗುಹದೇವ, ನಾಥಮುನಿ, ಯಾಮುನ ಮುಂತಾದ ಆಚಾರ್ಯರುಗಳಿಂದ ಸಂಗ್ರಹವಾಗಿ ವಿವೃತವಾದುದನ್ನು, ರಾಮಾನುಜರು ಸಂಗ್ರಹಿಸಿ, ಸಂಸ್ಕರಿಸಿ, ಸ್ಥಿರೀಕರಿಸಿ, ತಾರ್ಕಿಕವಾಗಿ ಸುವ್ಯವಸ್ಥಿತ ರೂಪದಲ್ಲಿ ಪ್ರತಿಪಾದಿಸಿ ಪ್ರಚಾರಮಾಡಿದರು.

ಉಪನಿಷತ್ತುಗಳು, ವೇದಾಂತ ಅಥವಾ ಬ್ರಹ್ಮಸೂತ್ರಗಳು, ಭಗವದ್ಗೀತೆ, ಪಾಂಚರಾತ್ರ ಮತ್ತು ವೈಖಾನಸ ಆಗಮ, ಆಳ್ವಾರುಗಳ ಪ್ರಬಂಧ, ಪರಾಶರರ ವಿಷ್ಣುಪುರಾಣ—ಇವು ರಾಮಾನುಜ ದರ್ಶನದ ಆಧಾರಗಳು.

ವಿಷ್ಣುಭಕ್ತಿಯು ಭಗವದ್ಗೀತೆಯಲ್ಲಿ ಆರಂಭವಾಗಿ, ಆಳ್ವಾರುಗಳ ದಿವ್ಯ ಪ್ರಬಂಧದಲ್ಲಿ ಪ್ರವಹಿಸಿ, ರಾಮಾನುಜ ಸಿದ್ಧಾಂತದಲ್ಲಿ ಸ್ಥಿರವಾದ ಉಚ್ಚ ಸ್ಥಾನವನ್ನು ಪಡೆಯಿತು. ಪ್ರವಾಹಗಳೆಲ್ಲವೂ ಜಲಾಶಯದಲ್ಲಿ ಬಂದು ಐಕ್ಯವಾಗುವಂತೆ, ವೇದಗಳಲ್ಲಿನ ವಿಷ್ಣು–ನಾರಾಯಣರ ಪೂಜೆ, ಭಾಗವತ ಸಂಪ್ರದಾಯ, ರಾಮಕೃಷ್ಣರ ಅವತಾರದ ಕಥೆಗಳು, ವೈಷ್ಣವ ಆಗಮ, ಆಳ್ವಾರುಗಳು, ವಿಶಿಷ್ಟಾದ್ವೈತ ವೇದಾಂತ —ಇವುಗಳಲ್ಲಿ ಕಾಣಬರುವ ಮೊದಲಿನ ಭಕ್ತಿಗಳೆಲ್ಲವೂ ತ್ಯಾಗಜೀವಿಯಾದ ರಾಮಾನುಜರಲ್ಲಿ ಬಂದು ಸೇರಿ, ಅಲ್ಲಿಂದ ಮತ್ತೆ ಬೇರೆ ಬೇರೆ ಕಾಲುವೆಗಳಾಗಿ ಒಡೆದು, ಹರಿದು ಭಕ್ತರನ್ನು ಉದ್ಧರಿಸಿವೆ. ರಾಮಾನುಜರ ಸಗುಣೇಶ್ವರ ಭಾವನೆಯು ಹಾಗೂ ಚಿದಚಿದೀಶ್ವರ ಸಂಬಂಧ ಸಿದ್ಧಾಂತವು, ಭಾವಪ್ರಧಾನ ಜೀವಿಗಳಾದ ಭಾರತೀಯರಿಗೆ ಹಾಗೂ ಭಾರತದ ಭಕ್ತಿಪಂಥಕ್ಕೆ ಸ್ಫೂರ್ತಿಯನ್ನು ನೀಡಿ, ಇಲ್ಲಿನ ಕೋಟ್ಯಾಂತರ ಜೀವಿಗಳ ಮನಸ್ಸನ್ನು ತಣಿಸಿತು. ಭಾರತೀಯ ಸಂತ ಶ್ರೇಷ್ಠರೆಲ್ಲ ರಾಮಾನುಜ ಪಂಥದಿಂದ ಪ್ರಭಾವಿತರಾದವರೇ.

ಕಾಂಚೀಪುರದ ಬಳಿಯಲ್ಲಿ ಇರುವ ಭೂತಪುರಿ ಅಥವಾ ಶ್ರೀ ಪೆರುಂಬೂದೂರ್‌ನಲ್ಲಿ, ಆಸೂರಿ ಕೇಶವ ಸೋಮಯಾಜಿಗಳ ಮಗನಾದ ಕೇಶವ ಪೆರುಮಾಳ್ ಮತ್ತು ಶ್ರೀಶೈಲಪೂರ್ಣರ ಸೋದರಿ ಕಾಂತಿಮತಿ ಎಂಬೀ ವೈಷ್ಣವ ದಂಪತಿಗಳ ಮಗನಾಗಿ, ರಾಮಾನುಜರು ಜನಿಸಿದರು. ಕೇಶವ ಪೆರುಮಾಳರು ದೊಡ್ಡ ವಿದ್ವಾಂಸರಾಗಿದ್ದು, ಯಜುರ್ವೇದದ ಶಿಕ್ಷಾ, ಶ್ರೌತಗಳ ವಿಷಯವಾಗಿ ಅನೇಕ ಪುಸ್ತಕಗಳನ್ನು ಬರೆದಿದ್ದು, ಅವು ಕೇಶವೀಯ ಎಂಬ ಹೆಸರಿನಿಂದ ಪ್ರಖ್ಯಾತವಾಗಿವೆ.

ಹುಟ್ಟಿದ ಕೂಡಲೇ ಲಕ್ಷ್ಮಣ ಅಥವಾ ರಾಮಾನುಜ ಎಂಬ ಹೆಸರನ್ನು ಇಟ್ಟ ಅವರ ಸೋದರಮಾವ ಶ್ರೀಶೈಲಪೂರ್ಣರು, ಇವರು ಶ್ರೀವೈಷ್ಣವ ಮತೋದ್ಧಾರಕನಾದ ಪ್ರವಾದಿ ಎಂದು ಅಭಿಪ್ರಾಯಪಟ್ಟರು.

ರಾಮಾನುಜರ ಬಾಲ್ಯ ವಿದ್ಯಾಭ್ಯಾಸವು ತಂದೆಯ ಬಳಿಯಲ್ಲಿಯೇ ನಡೆಯಿತು. ಜಟಿಲ ಸಮಸ್ಯೆ, ಕಠಿಣ ರೀತಿಯ ಅರ್ಥಗರ್ಭಿತ ವಿಷಯಗಳನ್ನು ತಕ್ಷಣ ಚೆನ್ನಾಗಿ ಗ್ರಹಿಸಿ, ಅದನ್ನು ಎಲ್ಲರಿಗೂ ತಿಳಿಯುವಂತೆ ವಿವರಿಸುವ ಅದ್ಭುತ ಶಕ್ತಿ ಇವರಿಗೆ ಬಾಲ್ಯದಿಂದಲೂ ಇದ್ದಿತು. ಸತ್ಸಂಗ ಹಾಗೂ ಸತ್ಕಥಾಕಾಲಕ್ಷೇಪಗಳಲ್ಲಿ ಸದಾ ಇರಲು ರಾಮಾನುಜರ ಮನಸ್ಸು ಇಷ್ಟಪಡುತ್ತಿದ್ದಿತು. ಸಂತರು, ದೈವಭಕ್ತರು ಎಂದರೆ ಬಾಲಕ ರಾಮಾನುಜರಿಗೆ ಅತಿಯಾದ ಗೌರವ ಆದರಗಳಿದ್ದುವು. ಅಸಾಧಾರಣ ಬುದ್ಧಿಶಕ್ತಿ, ಸನ್ಮಾರ್ಗಪ್ರವೃತ್ತಿ, ಸದ್ವರ್ತನೆ, ವಿನಯ, ಶೀಲ ಇವೆಲ್ಲ ಇದ್ದ ರಾಮಾನುಜರು, ಮುಂದೆ ಉತ್ತಮ ದರ್ಶನ ಸ್ಥಾಪನಾಚಾರ್ಯರಾಗುವರು ಎಂಬುದನ್ನು ಸೂಚಿಸುತ್ತಿತ್ತು.

ಕಂಚಿಯಿಂದ ತನ್ನ ಹುಟ್ಟೂರಾದ ಪೂನಾಮಲಿಗೆ ಶ್ರೀಪೆರುಂಬೂದೂರ್ ಮೂಲಕ ಹೋಗುತ್ತಿದ್ದ ಕಾಂಚೀಪೂರ್ಣರನ್ನು ಆಗಾಗ ನೋಡುತ್ತಿದ್ದ ರಾಮಾನುಜರಿಗೆ ಅವರ ವಿಷಯದಲ್ಲಿಯೂ, ಕಾಂಚೀಪೂರ್ಣರಿಗೆ ರಾಮಾನುಜರ ವಿಷಯದಲ್ಲಿಯೂ, ಗಾಢವಾದ ಪ್ರೀತಿ ವಿಶ್ವಾಸ ಬೆಳೆಯಿತು. ರಾಮಾನುಜರ ಮನೆಯಲ್ಲಿ ಪರಸ್ಪರ ಭೇಟಿಯಾಗಿ ಭಗವದ್ವಿಷಯವನ್ನು ಕುರಿತು ಚರ್ಚೆ, ಚಿಂತನೆ ಮಾಡುತ್ತಿದ್ದರು.

ರಾಮಾನುಜರಿಗೆ ಅವರ ಹದಿನಾರನೆಯ ವಯಸ್ಸಿನಲ್ಲಿ ಸತ್ಕುಲ ಪ್ರಸೂತೆ, ಗುಣವತಿ, ಅತಿ ಸುಂದರಿ, ಆದ ತಂಜಮಾಂಬಾಳ್ ಎಂಬ ವಧುವಿನೊಡನೆ ವಿವಾಹವಾಯಿತು. ಅತ್ತೆ ಕಾಂತಿಮತಿಗೆ ಸೊಸೆಯು ತುಂಬಾ ಮೆಚ್ಚುಗೆಯಾಗಿದ್ದಳು. ಆದರೆ ಕೆಲವೇ ದಿನಗಳಲ್ಲಿ ತಂದೆಯು ಮರಣ ಹೊಂದಿದುದರಿಂದ, ತಾಯಿ ಹಾಗೂ ಪತ್ನಿಯೊಡನೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ವಿದ್ವಾಂಸದ ತವರೂರಾದ ಕಂಚಿಗೆ ಹೋದರು. ಅಲ್ಲಿ ಚಿಕ್ಕಮ್ಮನ ಮಗ ಗೋವಿಂದಭಟ್ಟನೊಡನೆ, ಕಾಂಚೀಪುರದ ಬಳಿಯ ತಿರುಪ್ಪುಟ್ಕುಳಿ ಎಂಬಲ್ಲಿದ್ದ ಪ್ರಸಿದ್ಧ ಅದ್ವೈತಿ ವಿದ್ವಾಂಸರಾದ ಯಾದವಪ್ರಕಾಶರಲ್ಲಿ, ಉನ್ನತ ವಿದ್ಯಾಭ್ಯಾಸವನ್ನು ಮಾಡತೊಡಗಿದರು. ಬಹುಬೇಗ ರಾಮಾನುಜರು ಗುರುಗಳ ವಿಶ್ವಾಸ, ಆದರಗಳಿಗೆ ಪಾತ್ರರಾಗಿ ಅವರ ಮುಖ್ಯ ಶಿಷ್ಯರಲ್ಲಿ ಒಬ್ಬರಾದರು.

ಶಾಸ್ತ್ರವ್ಯಾಸಂಗದಲ್ಲಿ ಬಹುಬೇಗ ಉನ್ನತಿ ಪಡೆಯುತ್ತಿದ್ದ ರಾಮಾನುಜರನ್ನು ನೋಡುವ ಸಲುವಾಗಿ ಯಾಮುನರು ಶ್ರೀರಂಗದಿಂದ ಕಂಚಿಗೆ ಬಂದು, ಅವರನ್ನು ಅಲ್ಲಿನ ದೇವರಾಜಸ್ವಾಮಿಯ ಸನ್ನಿಧಿಯಲ್ಲಿ ನೋಡಿದರು.

ತಮ್ಮ ಮನಸ್ಸಿನಲ್ಲಿ ಅವ್ಯಕ್ತವಾಗಿ ಅಡಗಿದ್ದ, ಹೊರಬರಲು ತವಕಿಸುತ್ತಿದ್ದ, ಆದರೆ ಮಾತುಗಳಲ್ಲಿ ಸರಿಯಾಗಿ ಮೂಡದಿದ್ದ, ಭಾವನೆಗಳೆಲ್ಲಾ ಸ್ಪಷ್ಟವಾದ ರೂಪು ನಪಡೆದು ರಾಮಾನುಜರಲ್ಲಿ ಪ್ರಕಾಶಿಸುತ್ತಿವೆಯೆಂಬುದು ಯಾಮುನರಿಗೆ ತಿಳಿಯಿತು ಭಕ್ತಿ, ಪ್ರಪತ್ತಿ ಪ್ರಧಾನವಾದ ಭಾಗವತ ಸಂಪ್ರದಾಯಕ್ಕೆ, ವೇದಶಾಸ್ತ್ರಗಳ ಅಡಿಪಾಯ ಹಾಕಿ ಶ್ರೀವೈಷ್ಣವ ಸಿದ್ಧಾಂತವನ್ನು ನಿರೂಪಿಸುವ ಶಕ್ತಿ, ರಾಮಾನುಜರಲ್ಲಿ ಅಡಗಿದೆಯೆಂದೂ ಯಾಮುನರಿಗೆ ಸ್ಪಷ್ಟವಾಗಿ ಗೋಚರಿಸಿತು. ಅದರಿಂದ ರಾಮಾಜರನ್ನು ಆಶೀರ್ವದಿಸಿ, ಅವರನ್ನು ತಮ್ಮ ಮತಕ್ಕೆ ಕೊಡುವಂತೆ ಕಂಚಿಯ. ವರದರಾಜಸ್ವಾಮಿಯನ್ನು ಪ್ರಾರ್ಥಿಸಿ ಶ್ರೀರಂಗಕ್ಕೆ ಹಿಂದಿರುಗಿದರು.

ತೈತ್ತಿರೀಯೋಪನಿಷತ್ತಿನ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ',
ಛಾಂದೋಗ್ಯೋಪನಿಷತ್ತಿನ 'ಸರ್ವಂಖಲ್ವಿದಂ ಬ್ರಹ್ಮ', ಹಾಗೂ
'ತಸ್ಯಯಥಾಕಪ್ಯಾಸಂ ಪುಂಡರೀಕಂ ಏವಂ ಅಕ್ಷಿಣಿ',

ಬೃಹದಾರಣ್ಯಕೋಪನಿಷತ್ತಿನ

'ಮನಸೈವೇದ ಮಾಪ್ತವ್ಯಂ ನೇಹನಾನಾಸ್ತಿ ಕಿಂಚನ'

ಮುಂತಾದುವುಗಳ ಶಾಸ್ತ್ರಾರ್ಥದಲ್ಲಿ, ಗುರುಶಿಷ್ಯರಿಗೆ ಭಿನ್ನಾಭಿಪ್ರಾಯ ಬಂದಿತು. ಯಾದವಪ್ರಕಾಶರ ಅಭಿಪ್ರಾಯ, ಉಪದೇಶಗಳೆರಡೂ ಸಮರ್ಪಕವಾಗಿ ತೋರಲಿಲ್ಲವಾದರೂ, ವಿನಯಶೀಲರಾದ ರಾಮಾನುಜರು ತಮ್ಮ ವಿರೋಧಾಭಿಪ್ರಾಯವನ್ನು ಹಾಗೂ ಅತೃಪ್ತಿಯನ್ನು ಮೊದಮೊದಲು ತೋರ್ಪಡಿಸಲಿಲ್ಲವಾದರೂ, ಕೊನೆಗೆ ವ್ಯಕ್ತಪಡಿಸಲೇಬೇಕಾಯಿತು. ಇದರ ಪರಿಣಾಮವಾಗಿ ಗುರುಶಿಷ್ಯರಲ್ಲಿ ವಿಶ್ವಾಸ ಹೋಗಿ, ಯಾದವಪ್ರಕಾಶರನ್ನು ತ್ಯಜಿಸಿ ಬೇರೆ ಗುರುವಿನ ಅನ್ವೇಷಣೆಯಲ್ಲಿ ತೊಡಗಿದರು. ಜೊತೆಗೆ ಗುರುವನ್ನು ವಿರೋಧಿಸಿದುದು ಸರಿಯೇ ತಪ್ಪೇ ಎಂಬ ಬಗ್ಗೆ ಚಿಂತೆ ಉಂಟಾಗಿ, ರಾಮಾನುಜರ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲ ಉಂಟಾಯಿತು. ಆಗ ತಾಯಿಯ ಸಲಹೆಯಂತೆ ಕಾಂಚೀಪೂರ್ಣರನ್ನು ಭೇಟಿಯಾಗಿ, ಅವರ ಸಲಹೆಯಂತೆ ವರದರಾಜ ಸ್ವಾಮಿಯ ಅಭಿಷೇಕಕ್ಕಾಗಿ ಶಾಲಕ್ಕಿಣರ್ ಅಥವಾ ಸಾಲವೃಕ್ಷದ ಭಾವಿಯಿಂದ, ಒಂದು ಕೊಡ ತೀರ್ಥವನ್ನು ದಿನವೂ ತಂದೊಪ್ಪಿಸುವ ಕೈಂಕರ್ಯದಲ್ಲಿ ನಿರತರಾದರು. ಜೊತೆಗೆ ಅಧ್ಯಯನ, ಚಿಂತನ, ಮಂಥನ ಮಾಡುತ್ತಿದ್ದರು.

ಯಾದವಪ್ರಕಾಶರಿಂದ ರಾಮಾನುಜರು ಬೇರ್ಪಟ್ಟು, ತಮ್ಮ ಶಿಷ್ಯ ಹಾಗೂ ಉತ್ತರಾಧಿಕಾರಿ ಆಗಬೇಕೆಂದು ಆಸೆಪಡುತ್ತಿದ್ದ ಯಾಮುನರಿಗೆ, ಈ ವಿಷಯ ತಿಳಿದಾಗ ಉಂಟಾದ ಸಂತೋಷದಲ್ಲಿ, ಅವರು ಶ್ರೀರಂಗದ ರಂಗನಾಥನನ್ನು ಕುರಿತು ಹಾಡಿದ ಪದ್ಯಗಳೇ ಶ್ರೀವೈಷ್ಣವ ಮತದ ಮೂಲತತ್ತ್ವದ ಪ್ರಕಾಶಿಕೆ ಎನಿಸಿದ ಸ್ತೋತ್ರರತ್ನ.

ತಮ್ಮ ಮನಸ್ಸಿನಲ್ಲಿ ಕಾಡುತ್ತಿದ್ದ ಸಂಶಯ, ಪ್ರಶ್ನೆಗಳಿಗೆ, ಉತ್ತರವನ್ನು ದೇವರಿಂದ ಪಡೆದು ತಿಳಿಸುವಂತೆ, ರಾಮಾನುಜರು ಕಾಂಚೀಪೂರ್ಣರನ್ನು ಕೇಳಿಕೊಂಡರು. ಪರಮಾತ್ಮನು ಕಾಂಚೀಪೂರ್ಣರ ಮೂಲಕ ನೀಡಿದ ಉತ್ತರ ಹೀಗಿದೆ. "ಶ್ರೀಮನ್ನಾರಾಯಣನೇ ಪರತತ್ತ್ವ ಹಾಗೂ ಸೃಷ್ಟಿ ಸ್ಥಿತಿ ಲಯ ಕರ್ತ; ಜೀವ–ಈಶ್ವರ ಭೇದವು ಸಹಜವಾದುದು; ಜೀವವು ಈಶ್ವರನನ್ನು ಅವಲಂಬಿಸಿದೆ; ಮುಕ್ತಿಗೆ ಪ್ರಪತ್ತಿ ಅಥವಾ ಶರಣಾಗತಿಯೇ ಉಪಾಯವು; ಸಾಯುವಾಗ ನನ್ನ ಸ್ಮರಣೆ ಬಲಾತ್ಕಾರವಿಲ್ಲ; ಮರಣದ ನಂತರ ದೇಹದಿಂದ ಬಿಡುಗಡೆಯಾದಾಗ ಮುಕ್ತಿ ಸಿಗುತ್ತದೆ; ಅತಿ ಶ್ರೇಷ್ಠರಾದ ಮಹಾಪೂರ್ಣರನ್ನು ಆಚಾರ್ಯರನ್ನಾಗಿ ಸ್ವೀಕರಿಸಬೇಕು"–ಎಂಬುದೆಲ್ಲವೂ ತಿಳಿದು, ಆಮೂಲಕ ತಮ್ಮ ಸಂದೇಹಗಳಿಗೆಲ್ಲ ಸೂಕ್ತ ಸಮಾಧಾನವು ದೊರಕಿದ ರಾಮಾನುಜರಿಗೆ ಮುಂದಿನ ದಾರಿಯು ಸುಸ್ಪಷ್ಟವಾಯಿತು.

ರಾಮಾನುಜರು ತಮ್ಮ ಶಿಷ್ಯನಾಗಬೇಕೆಂದು ಯಾಮುನರು ಇಚ್ಛಿಸಿದಂತೆಯೇ, ಯಾಮುನರ ಸ್ತೋತ್ರವನ್ನು ಮಹಾಪೂರ್ಣರಿಂದ ಆಲಿಸಿದ ರಾಮಾನುಜರೂ, ಯಾಮುನರೇ ತಮ್ಮ ಗುರುಗಳಾಗಬೇಕೆಂದು ಇಚ್ಛಿಸಿದ್ದರು. ಯಾಮುನರನ್ನು

ನೋಡಬೇಕೆಂಬ ಉತ್ಸುಕತೆಯಿಂದ ಶ್ರೀರಂಗಕ್ಕೆ ಹೋದರು. ಯಾರಿಂದ ತಾವು ಮಾರ್ಗದರ್ಶನ ಪಡೆದು ಆಧ್ಯಾತ್ಮ ಮಾರ್ಗದಲ್ಲಿ ಮುಂದುವರೆಯಬಹುದಾಗಿತ್ತೋ, ಯಾದವ ಪ್ರಕಾಶರ ನಂತರ ಗುರುವೇ ಇಲ್ಲದೆ ತೊಳಲುತ್ತಿದ್ದ ತನ್ನನ್ನು ಯಾವ ಮಹ ನೀಯರು ಕೈಚಾಚಿ ಕರೆದರೋ, ಯಾರ ಶಿಷ್ಯತ್ವ ಪಡೆದು ಉತ್ತರಾಧಿಕಾರಿಯಾಗ ಬೇಕಾಗಿತ್ತೋ, ಅಂಥಾ ಯಾಮುನರ ದರ್ಶನ ರಾಮಾನುಜರಿಗೆ ಆಗಲಿಲ್ಲ. ಅಲ್ಲಿ ಅವರ ಶವವನ್ನು ಮಾತ್ರ ನೋಡಲು ಸಾಧ್ಯವಾಯಿತು. ಯಾಮುನರಿಂದ ಪ್ರತ್ಯಕ್ಷವಾಗಿ ಉಪದೇಶವನ್ನು ಪಡೆಯಲಾಗಲಿಲ್ಲವಲ್ಲಾ, ಅವರನ್ನು ಜೀವಂತವಾಗಿ ನೋಡುವ ಭಾಗ್ಯ ಸಿಗಲಿಲ್ಲವಲ್ಲಾ, ಎಂದು ಸದಾ ಕೊರಗುತ್ತಿದ್ದರು. ಸಾಂಸಾರಿಕ ಜೀವನದಲ್ಲಿ ಹಾಗೂ ಪ್ರಾಪಂಚಿಕ ವ್ಯವಹಾರಗಳಲ್ಲಿ ಅನಾಸಕ್ತಿ ಹೆಚ್ಚಿತು.

ಯಾದವಪ್ರಕಾಶರ ಶಿಷ್ಯಗೋಷ್ಠಿಯಲ್ಲಿದ್ದಾಗಲೇ, ಯಾಮುನರು ರಾಮಾನುಜ ರನ್ನು ದೂರದಿಂದಲೇ ಕಟಾಕ್ಷಿಸಿ, ಅವರು ವಿಶಿಷ್ಟಾದ್ವೈತ ಸಿದ್ಧಾಂತ ಪ್ರವರ್ತಕರಾಗು ವಂತೆ ಅನುಗ್ರಹಿಸಿ, ಅವರನ್ನು ಇಳೆಯ ಪೆರುಮಾಳ್ ಎಂದು ಕರೆದಿದ್ದರು. ಯಾಮುನರ ಅಂತಿಮೇಚ್ಛೆಯಂತೆ ಅವರನಂತರ ಆಚಾರ್ಯ ಪೀಠವನ್ನು ಅಲಂಕರಿಸ ಬೇಕಾದ ರಾಮಾನುಜರಿಗೆ, ಯಾಮುನರಿಂದ ನೇರವಾಗಿ ಉಪದೇಶವು ಲಭಿಸದಿದ್ದರೂ, ಅವರ ಜ್ಞಾನಾನುಭವದ ಒಂದೊಂದು ಮುಖವನ್ನು ಪಡೆದು ಕಾದಿಟ್ಟಿದ್ದ ಅವರ ಆಪ್ತಶಿಷ್ಯರಿಂದ ಉಪದೇಶ ದೊರಕಿ, ಆ ಮೂಲಕ ಯಾಮುನರ ಅನುಗ್ರಹವು ಪೂರ್ಣ ವಾಗಿ ರಾಮಾನುಜರಿಗೆ ದೊರಕಿತೆಂದು ಹೇಳಬಹುದು.

ತಾಯಿಯಾದ ಕಾಂತಿಮತಿಯು ಮರಣಹೊಂದಿದುದರಿಂದ, ಸತಿಪತಿಯರಲ್ಲಿ ಭಿನ್ನತೆ ಹೆಚ್ಚಿತು. ಕಾಂಚೀಪೂರ್ಣ ಮತ್ತು ಮಹಾಪೂರ್ಣರಿಬ್ಬರಿಗೂ ಪತ್ನಿಯ ಕಾರಣದಿಂದ ಸರಿಯಾದ ಗೌರವ ಸಲ್ಲಿಸಲಾಗದೆ, ಆಧ್ಯಾತ್ಮಿಕ ಸಾಧನೆಗೆ ಹಾಗೂ ನೂತನ ಸಿದ್ಧಾಂತ ಪ್ರಚಾರಕ್ಕೆ ಅಡ್ಡಿ ಎನಿಸಿದ್ದ ಗೃಹಸ್ಥ ಜೀವನವನ್ನು ತೊರೆದು, ಲೋಕೋದ್ಧಾರಕ್ಕೆ ಅವಶ್ಯವಾದ ಸಂನ್ಯಾಸವನ್ನು ವರದರಾಜಸ್ವಾಮಿಯ ಸನ್ನಿಧಿ ಯಲ್ಲಿ ಸ್ವೀಕರಿಸಿ ಯತಿರಾಜರೆನಿಸಿದರು.

ವರದರಾಜಸ್ವಾಮಿಯ ಆದೇಶದಂತೆ, ತಮಗಿಂತ ಜಾತಿಯಲ್ಲಿ ಕೀಳಾಗಿದ್ದರೂ, ಆಧ್ಯಾತ್ಮಿಕತೆಯಲ್ಲಿ ಮೇಲಾಗಿದ್ದ **ಪೆರಿಯನಂಬಿ**ಗಳನ್ನು ರಾಮಾನುಜರು ಗುರುವಾಗಿ ಸ್ವೀಕರಿಸಿದರು. ಅವರಿಂದ ವಿಶಿಷ್ಟಾದ್ವೈತದ ಗೂಢತತ್ತ್ವ ರಹಸ್ಯಗಳನ್ನು ತಿಳಿದರು.

ಇವರ ಆದೇಶದಂತೆ ಬಹುಕಷ್ಟಪಟ್ಟು **ಗೋಷ್ಠೀಪೂರ್ಣ**ರನ್ನು ಒಲಿಸಿಕೊಂಡು ಅವರಿಂದ ತಿರುಮಂತ್ರವನ್ನು ಕಲಿತರು. ಯಾವ ಮಂತ್ರವನ್ನು ಜಪಿಸುವುದರಿಂದ ಹಾಗೂ ಶ್ರವಣಮಾಡುವುದರಿಂದ ಭವದ ಕಷ್ಟಗಳೆಲ್ಲವೂ ತೊಲಗಿ, ಜೀವನದಲ್ಲಿ ಸುಖ, ಶಾಂತಿಗಳು ಲಭಿಸಿ, ಅಂತ್ಯದಲ್ಲಿ ಮುಕ್ತಿ ದೊರಕುವುದೋ, ಅದನ್ನು ಗುಪ್ತ ವಾಗಿಟ್ಟುಕೊಳ್ಳಬಾರದೆಂದು ತೀರ್ಮಾನಿಸಿ, ಎಲ್ಲರಿಗೂ ಉಪದೇಶಿಸಿಬಿಟ್ಟರು. ಗುರು

ಗಳು ರಾಮಾನುಜರ ಬಗ್ಗೆ ಮೊದಲು ಬಹಳ ಕೋಪಗೊಂಡರೂ, ಆಮೇಲೆ ಅವರ ಔದಾರ್ಯ, ಕಾರುಣ್ಯಗಳನ್ನು ಮೆಚ್ಚಿಕೊಂಡರು. ದೀನರ ಹಾಗೂ ಪಾಪಿಗಳ ಉದ್ಧಾರವಾಗಿ ಅವರಿಗೆಲ್ಲ ಮುಕ್ತಿ ಲಭಿಸುವುದಾದರೆ, ತಾನು ನರಕದಲ್ಲಿ ಕಷ್ಟಪಡಲು ಸಿದ್ಧ ಎನ್ನುವ ಈ ಭಾವನೆಯೇ, ರಾಮಾನುಜರನ್ನು ವಿಶ್ವದ ಶ್ರೇಷ್ಠತಮ ವ್ಯಕ್ತಿಗಳ ಸಾಲಿಗೆ ಸೇರಿಸಲು ಕಾರಣವಾಯಿತು.

ಗುರುಗಳ ಸಲಹೆಯಂತೆ, ನಮ್ಮಾಳ್ವಾರರ ಪ್ರಬಂಧಗಳಲ್ಲಿ ವಿಶೇಷ ಪ್ರಾವೀಣ್ಯತೆಯನ್ನು ಪಡೆದಿದ್ದ **ಮಾಲಾಧರ**ರಲ್ಲಿ, ರಾಮಾನುಜರು ದಿವ್ಯಪ್ರಬಂಧಗಳ ವಿಶೇಷಾರ್ಥಗಳನ್ನು ಕಲಿಯಲಾರಂಭಿಸಿದರು. ಅಲ್ಲಲ್ಲಿ ಗುರುಗಳ ವ್ಯಾಖ್ಯಾನ ಸರಿಯಿಲ್ಲವೆಂದು ರಾಮಾನುಜರಿಗೆ ಅನಿಸಿದಾಗ, ತಮ್ಮ ಅತೃಪ್ತಿಯನ್ನು ತೋರಿಸಿ, ತಮಗೆ ತೋರಿದ ಅರ್ಥವಿವರಣೆಯನ್ನು ಕೊಡುತ್ತಿದ್ದರು. ಮೊದಲು ಅಸಮಾಧಾನಗೊಂಡರೂ, ಗೋಷ್ಠೀಪೂರ್ಣರ ಅಪೇಕ್ಷೆಯಂತೆ ಪಾಠವನ್ನು ಮುಂದುವರೆಸಿ, ಕೊನೆಗೆ ನಮ್ಮಾಳ್ವಾರ್, ನಾಥಮುನಿ, ಯಾಮುನ ಇವರುಗಳ ಅಭಿಪ್ರಾಯವು ತಮಗಿಂತ ರಾಮಾನುಜರಿಗೆ ಚೆನ್ನಾಗಿ ತಿಳಿದಿದೆ ಎಂಬುದನ್ನು ಅರಿತುಕೊಂಡರು. ಗುರುಗಳಿಗೆ ಅಪಚಾರವಾಗುವುದೆಂಬ ಭಯದಿಂದ, ರಾಮಾನುಜರು ಪ್ರಬಂಧಗಳ ಬಗ್ಗೆ ತಾವು ಹೊಂದಿದ್ದ ಅಭಿಪ್ರಾಯಗಳನ್ನು ತಾವೇ ಬರೆಯದೆ, ತಮ್ಮ ಶಿಷ್ಯ ಪಿಳ್ಳಾನ್‌ರವರಿಂದ ಬರೆಸಿದರು.

ಆಮೇಲೆ ಶ್ರೀರಂಗದಲ್ಲಿದ್ದ **ಆಳವಂದಾರಾಳ್ವಾನ್** ಅಥವಾ ವರರಂಗನಾಯಕರಿಗೆ ಸೇವೆ, ಶುಶ್ರೂಷೆಮಾಡಿ, ರಾಮಾನುಜರು ಅವರಿಂದ ದಿವ್ಯ ಪ್ರಬಂಧದ ಮೂಲವನ್ನೂ, ಆಚಾರ್ಯಾಭಿಮಾನದ ಲಕ್ಷಣಗಳನ್ನೂ ಗ್ರಹಿಸಿದರು.

ಸೋದರಮಾವ **ಶ್ರೀಶೈಲಪೂರ್ಣ**ರಲ್ಲಿ ಕಾಲಕ್ಷೇಪಮಾಡಿ ಪ್ರಪತ್ತಿವೇದ ಅಥವಾ ಶರಣಾಗತಿಶಾಸ್ತ್ರ ಎನಿಸಿದ ರಾಮಾಯಣದ ಗೂಢಾರ್ಥವನ್ನರಿತರು. ಹೀಗೆ ಯಾಮುನರ ಐವರು ಮುಖ್ಯ ಶಿಷ್ಯರಿಂದ ಉಪದೇಶ ಪಡೆದ ರಾಮಾನುಜರು, ಆ ಮೂಲಕ **ಪಂಚಾಚಾರ್ಯ ಪದಾಶ್ರಯ**ರೆನಿಸಿ ಪ್ರಖ್ಯಾತರಾದರು. ಆಚಾರ್ಯ ಯಾಮುನರ ಆಜ್ಞೆಯನ್ನು ಪಾಲಿಸಿ, ಐವರು ಆಚಾರ್ಯರೂ ರಾಮಾನುಜರ ಸಂಪರ್ಕದಿಂದ ತಾವು ಕೃತಾರ್ಥರಾದೆವೆಂದೇ ಭಾವಿಸಿದರು.

ಹೀಗೆ ಒಬ್ಬೊಬ್ಬ ಆಚಾರ್ಯರಿಂದ ವಿಶಿಷ್ಟಾದ್ವೈತದ ಒಂದೊಂದು ರಹಸ್ಯವನ್ನು ಒಂದೊಂದು ರೀತಿಯಲ್ಲಿ ಪಡೆದುಕೊಂಡ ರಾಮಾನುಜರು, ಅವುಗಳನ್ನೆಲ್ಲಾ ತಮ್ಮ ಅನುಷ್ಠಾನಾದಿಗಳಿಂದ ದೃಢಪಡಿಸಿಕೊಂಡು, ಸಿದ್ಧಾಂತದ ರಕ್ಷಣೆ—ಪ್ರಚಾರಗಳಿಗೆ ಅವಶ್ಯಕವಾದ ಶಕ್ತಿ—ಸಾಮರ್ಥ್ಯಗಳನ್ನು ಸಂಪಾದಿಸಿಕೊಂಡು, ಆಮೇಲೆ ತಮ್ಮ ಕೃತಿಗಳಲ್ಲಿ ತತ್ತ್ವ, ಹಿತ, ಪುರುಷಾರ್ಥಗಳನ್ನೆಲ್ಲ ಹೃದಯಂಗಮವಾಗಿ ನಿರೂಪಿಸಿದ್ದಾರೆ.

ರಾಮಾನುಜರ ಈ ಕಾರ್ಯದಲ್ಲಿ ಅವರ ಆಪ್ತಶಿಷ್ಯರಾದ ಕೂರೇಶ, ದಾಶರಥಿ ಇಬ್ಬರ ಸೇವೆಯು, ಅಪಾರ ಹಾಗೂ ಅಸದೃಶ.

ರಾಮಾನುಜರು ಕೂರೇಶರ ನೆರವಿನಿಂದ ಬ್ರಹ್ಮಸೂತ್ರಗಳಿಗೆ ವಿಶಿಷ್ಟಾದ್ವೈತ ಪರವಾದ ಶ್ರೀಭಾಷ್ಯವನ್ನು ತಾವೇ ರಚಿಸಿದರು ; ಕೂರೇಶರ ಮಗನಿಗೆ ಪರಾಶರ ನೆಂದು ಹೆಸರಿಟ್ಟು, ಅವರಿಂದ ವಿಷ್ಣುಸಹಸ್ರನಾಮಕ್ಕೆ ವ್ಯಾಖ್ಯಾನ ಬರೆಸಿದರು ; ಶ್ರೀಶೈಲಪೂರ್ಣರ ಮಗನಿಗೆ ಕುರುಕೇಶನೆಂದು ಹೆಸರಿಟ್ಟು, ಅವರಿಂದ ತಿರುವಾಯ್ಮೊಳಿಗೆ ಭಾಷ್ಯವನ್ನು ಬರೆಸಿದರು. ಹೀಗೆ **ಯಾಮುನರ ಅಂತಿಮೇಚ್ಛೆಯನ್ನು ಪೂರೈಸಿ,** ಅವರ ಶವದ ಮುಂದೆ ಮಾಡಿದ ತಮ್ಮ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದರು.

ರಾಮಾನುಜರು, ಅತ್ಯುತ್ತಮವಾದ ಒಂಬತ್ತು ಧರ್ಮ ಗ್ರಂಥಗಳನ್ನು ರಚಿಸು ವುದರ ಮೂಲಕ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅಮೋಘವಾದ ಸೇವೆಯನ್ನು ಸಲ್ಲಿಸಿ ದ್ದಾರೆ. ಶ್ರೀಭಾಷ್ಯ, ವೇದಾರ್ಥಸಂಗ್ರಹ, ವೇದಾಂತದೀಪ, ವೇದಾಂತಸಾರ, ಗೀತಾಭಾಷ್ಯ, ಶರಣಾಗತಿ ಗದ್ಯ, ಶ್ರೀರಂಗ ಗದ್ಯ, ಶ್ರೀವೈಕುಂಠ ಗದ್ಯ, ನಿತ್ಯ ಗ್ರಂಥ—ಇವು **ರಾಮಾನುಜರ ಕೃತಿಗಳು.**

ಶ್ರೀಭಾಷ್ಯವು ಬಹು ಮುಖ್ಯವಾದುದು. ಇದರಲ್ಲಿ ಸಂಪ್ರದಾಯದ ಜಾಡನ್ನೇ ಹಿಡಿದು ಹೊಸ ರೀತಿಯಲ್ಲಿ ಹಳೆಯ ಅರ್ಥವನ್ನು ಸಮಗ್ರವಾಗಿ ಸಮನ್ವಯಗೊಳಿಸ ಲಾಗಿದೆ. ಇದು ರಾಮಾನುಜರ ಪಾಂಡಿತ್ಯಕ್ಕೆ ಉತ್ಕೃಷ್ಟವಾದ ಉದಾಹರಣೆಯಾಗಿ ರುವ ಗ್ರಂಥ. ಎರಡನೆಯ ರಾಮಮಿಶ್ರರ ಶ್ರೀಭಾಷ್ಯ ವಿವರಣ, ಸುದರ್ಶನ ಸೂರಿ ಗಳ ಶ್ರುತಪ್ರಕಾಶಿಕೆ, ವಾತ್ಸ್ಯ ವರದಾಚಾರ್ಯರ ತತ್ತ್ವಸಾರ, ವೇದಾಂತ ದೇಶಿಕರ ತತ್ತ್ವ ಟೀಕೆ, ಮೇಘನಾದಾರಿ ಸೂರಿಗಳ ನಯಪ್ರಕಾಶಿಕೆ, ವೀರರಾಘವದಾಸರ ತಾತ್ಪರ್ಯ ದೀಪಿಕೆ, ಪರಕಾಲ ಸ್ವಾಮಿಗಳ ಮಿತ ಪ್ರಕಾಶಿಕೆ—ಇವು ಶ್ರೀಭಾಷ್ಯದ ಗೂಢಾರ್ಥಗಳನ್ನು ವಿವರಿಸುವ ಸಲುವಾಗಿ ವಿವಿಧ ಕಾಲಗಳಲ್ಲಿ ರಚಿಸಲ್ಪಟ್ಟ ವೃತ್ತಿ ಗ್ರಂಥಗಳು.

ಗ್ರಂಥ ರಚನೆಯಾದ ಮೇಲೆ ರಾಮಾನುಜರು ತಮ್ಮ ಶಿಷ್ಯರೊಡನೆ ತಮ್ಮ ನೂತನ ಪಂಥವು ಎಲ್ಲರಿಗೂ ಸಿಗಬೇಕೆಂಬ ಉದ್ದೇಶದಿಂದ, ಧಾರ್ಮಿಕ ಯಾತ್ರೆಗೆ ಹಾಗೂ ಧರ್ಮ ದಿಗ್ವಿಜಯಕ್ಕೆ ಹೊರಟರು. ಭಾರತದಲ್ಲೆಲ್ಲ ಇರುವ ಪವಿತ್ರ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸಿ, ಭಗವಂತನ ಸೇವೆ ಮಾಡಿದರು. ಹೋದೆಡೆಗಳಲ್ಲೆಲ್ಲ ವಿದ್ವತ್ಸಭೆಗಳಲ್ಲಿ ವಾದಮಾಡಿ, ತಮ್ಮ ನೂತನ ಸಿದ್ಧಾಂತದ ರಹಸ್ಯಗಳನ್ನೆಲ್ಲ ವಿವರಿಸಿ, ಶೈವ ಮತ್ತು ಜೈನ ಪಂಥದ ಅನೇಕರನ್ನು ಶ್ರೀವೈಷ್ಣವರನ್ನಾಗಿ ಪರಿವರ್ತಿಸಿದರು. ತಮ್ಮ ಮಾರ್ಗಕ್ಕಿಂತ ಭಿನ್ನವಾಗಿದ್ದರೂ, ರಾಮಾನುಜರ ಧರ್ಮಶ್ರದ್ಧೆ, ಸ್ವಮತ ನಿಷ್ಠೆ, ತತ್ತ್ವ ಪ್ರಸಾರದಲ್ಲಿ ಅವರಿಗಿದ್ದ ಅದಮ್ಯ ಉತ್ಸಾಹಗಳನ್ನು ಅನೇಕ ವಿದ್ವಾಂ ಸರು ಕೊಂಡಾಡಿ, ಅವರ ನವೀನ ಮತವನ್ನು ಮೆಚ್ಚಿದರು. ಇವರ ಪಾಂಡಿತ್ಯ,

ಪ್ರತಿಭೆ, ಭಕ್ತಿ, ಶೀಲಗಳನ್ನು ನೋಡಿದ ಸಾವಿರಾರು ಆಸ್ತಿಕರು ಇವರ ಶಿಷ್ಯರಾದರು. ತೊಂಡನೂರು ನಂಬಿ ಎಂಬ ಶಿಷ್ಯನ ಅಪೇಕ್ಷೆಯಂತೆ, ಹಿಂದೆ ಚಾಳುಕ್ಯ ದೊರೆ ವೀರ ರಾಜೇಂದ್ರನ ಮಗಳಿಗೆ ಗುಣಪಡಿಸಿದಂತೆ, ಹೊಯ್ಸಳ ರಾಜ ಬಿಟ್ಟೀದೇವನ ಮಗಳಿಗೂ ಗುಣಪಡಿಸಿ, ರಾಜನಿಗೆ ಶ್ರೀವೈಷ್ಣವ ದೀಕ್ಷೆಯನ್ನಿತ್ತು, ವಿಷ್ಣುವರ್ಧನನೆಂದು ಕರೆದರು. ಮೇಲುಕೋಟೆಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದರು. ಹೀಗೆ ಇದರಿಂದ ಅನೇಕ ಸ್ಥಳಗಳಲ್ಲಿ ವಿಷ್ಣುದೇವಾಲಯಗಳ ನಿರ್ಮಾಣ, ಅವುಗಳ ಪೂಜಾ ವ್ಯವಸ್ಥೆ, ಶ್ರೀವೈಷ್ಣವ ಮಠಗಳ ಸ್ಥಾಪನೆ ಆಯಿತು.

ಸಂಸ್ಕೃತ ವೇದಾಂತ ಮತ್ತು ತಮಿಳು ಪ್ರಬಂಧ ಎರಡೂ ಸಮರಸವುಳ್ಳವು ಎಂದು ಪ್ರತಿಪಾದಿಸಿ, ಸಂಸ್ಕೃತದ ಶ್ರುತಿಯ ಜೊತೆಗೆ, ತಮಿಳಿನ ಆಳ್ವಾರುಗಳ ಅನುಭವಗಳಿಗೂ ಪ್ರಾಧಾನ್ಯತೆಯನ್ನು ಕೊಟ್ಟು, ಎರಡೂ ಭಾಷೆಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಆಧಾರವಾದ ಗ್ರಂಥಗಳು ಬರುವಂತೆಮಾಡಿ, ಅದು ಶಾಶ್ವತವಾಗಿ ನಿಲ್ಲುವಂತೆ ಮಾಡಿ, ಉಭಯ ವೇದಾಂತದ ಸಿಂಹಾಸನಾಧಿಪತಿ ಎನಿಸಿಕೊಂಡು, ತಮ್ಮ ನೂತನ ಸಿದ್ಧಾಂತಕ್ಕೆ 'ಎಂಬೆರುಮಾನಾರ್ ದರ್ಶನಂ' ಅಥವಾ 'ರಾಮಾನುಜ ದರ್ಶನ' ಎಂದು ಹೆಸರು ಬರುವಂತೆ ಮಾಡಿದರು.

ನೂರಿಪ್ಪತ್ತು ವರ್ಷಗಳ ತುಂಬು ಜೀವನವನ್ನು ನಡೆಸಿದ ರಾಮಾನುಜರು, ತಮ್ಮ ಶ್ರೇಷ್ಠವಾದ ತ್ಯಾಗಮಯ **ಜೀವನ–ಕೆಲಸ**ಗಳಿಂದ, **ಇತಿಹಾಸ ನಿರ್ಮಾಪಕ**ರೆನಿಸಿದ್ದಾರೆ ಎಂದರೆ ಅತಿಶಯೋಕ್ತಿಯಾಗಲಾರದು.

ಪ್ರಾಚೀನ ಋಷಿಪರಂಪರೆಗೆ ಸೇರಿದ್ದರೂ, ಕಾಲದೇಶಗಳಿಗೆ ಅನುಗುಣವಾಗಿ ವರ್ತಿಸುವ ಸದಸದ್ವಿವೇಕ ಅವರಲ್ಲಿದ್ದಿತು. ಆದುದರಿಂದಲೇ ಅವರಿಗೆ ಮೊದಲಿನಿಂದಲೂ ತಮ್ಮ ಕುಲದ ಮಡಿವಂತಿಕೆಯು ಹಿಡಿಸಿರಲಿಲ್ಲ. ಯೋಗ್ಯತೆಯಿದ್ದ ಅಬ್ರಾಹ್ಮಣರನ್ನೂ ಗುರುವಾಗಿ ಸ್ವೀಕರಿಸಿದರು.

ತಿರುಪತಿಗೆ ಹೋಗುವಾಗ, ಧನಮದವಿದ್ದ ಯಜ್ಞೇಶನೆಂಬ ಧನಿಕ ಶಿಷ್ಯನ ಮನೆಯಲ್ಲಿ ಆತಿಥ್ಯ ಸ್ವೀಕರಿಸದೆ, ವಿನಯವಂತನಾದ ಕಾರ್ಪಾಸರಾಮ ಅಥವಾ ವರದನೆಂಬ ಬಡ ಶಿಷ್ಯನ ಮನೆಯಲ್ಲಿ ಅವನ ಪತ್ನಿ ಲಕ್ಷ್ಮಿಯಿಂದ ಆತಿಥ್ಯ ಸ್ವೀಕರಿಸಿದರು. ಯಜ್ಞೇಶ್ವರನು ವಿನಯ ವಿಧೇಯತೆಗಳನ್ನು ಕಲಿಯಬೇಕೆಂದು ತಿಳಿಸಿದರು. ವರದನ ಪತ್ನಿ ಲಕ್ಷ್ಮಿಯ ಗುರುಭಕ್ತಿ, ತ್ಯಾಗಗಳಿಂದ ಆಕರ್ಷಿತನಾಗಿ, ಅವಳಲ್ಲಿ ಕಾಮಾಸಕ್ತನಾದ ವರ್ತಕನೂ ಯೋಗ್ಯನಾಗಿ ರಾಮಾನುಜರ ಶಿಷ್ಯನಾದನು.

ಗುರುಗಳೆಲ್ಲರಿಂದಲೂ ಹೊಗಳಿಸಿಕೊಂಡು, ಅವರು ತಮ್ಮ ಮಕ್ಕಳನ್ನು ರಾಮಾನುಜರ ಶಿಷ್ಯರಾಗುವಂತೆ ಮಾಡುವಷ್ಟು ಉನ್ನತವಾದ ಯೋಗ್ಯತೆ ಇವರಲ್ಲಿದ್ದಿತು. ಗುರುಗಳಾದ ಯಾದವಪ್ರಕಾಶರೂ, ಶಿಷ್ಯನಾದ ರಾಮಾನುಜರ ಶಿಷ್ಯರಾದರು.

ವಾದದಲ್ಲಿ ದಿಗ್ವಿಜಯಿಯಾದ, ಶ್ರೇಷ್ಠ ವಿದ್ವಾಂಸ ಯಜ್ಞಮೂರ್ತಿಯನ್ನು ದೇವರ ಅನುಗ್ರಹದಿಂದ ಸೋಲಿಸಿ, ಅವರನ್ನೂ ಶಿಷ್ಯರಾಗಿಸಿಕೊಂಡರು. ಅವರು ಅರುಳಾಳಪ್ಪೆರುಮಾಳ್ ಅಥವಾ ದೇವರಾಜಮುನಿ ಎಂಬ ಹೆಸರನ್ನು ಪಡೆದು, ಜ್ಞಾನ ಸಾರ, ಪ್ರಮೇಯಸಾರ ಎಂಬ ಎರಡು ಗ್ರಂಥಗಳನ್ನು ಬರೆದರು. ಶ್ರೀರಂಗದ ದೇವಾಲಯದ ಆಡಳಿತದಲ್ಲಿ ಸುಧಾರಣೆಗಳನ್ನು ತಂದು ತನ್ನ ಹಣಸಂಪಾದನೆಗೆ ಅಡ್ಡಿ ಬಂದರೆಂಬ ಕೋಪದಿಂದ, ತನ್ನ ಪತ್ನಿಯ ಮೂಲಕ ತಮಗೆ ವಿಷಮಿಶ್ರ ಭಿಕ್ಷೆಯನ್ನು ನೀಡುವಂತೆ ಮಾಡಿದ ಶ್ರೀರಂಗನಾಥನ ಪ್ರಧಾನ ಅರ್ಚಕನನ್ನು, ಆತನ ದ್ವೇಷಾ ಸೂಯೆ ಮತ್ತು ಹೇಯ ಕಾರ್ಯಗಳಿಂದ ಮುಕ್ತನಾಗುವಂತೆ ಹರಸಿ ಕ್ಷಮಿಸಿದರು. ತನ್ನನ್ನು ದ್ವೇಷಿಸಿದವರಲ್ಲಿಯೂ ಮಮಕ ತೋರಿಸಿದರು.

ಕ್ರೀಡಾಪಟು, ಸುಂದರಾಂಗ, ಯುವಕಜಟ್ಟಿ, ಶೂದ್ರ ಆಗಿದ್ದರೂ, ವಿನಯ, ನಮ್ರತೆ, ತ್ಯಾಗ, ವೈರಾಗ್ಯಗಳಲ್ಲಿ ಶ್ರೇಷ್ಠನಾದ ಪಿಳ್ಳೈಉರಂಗ ವಿಲ್ಲಿದಾಸರ್ ಅಥವಾ ಧನುರ್ದಾಸನನ್ನು, ಪ್ರಮುಖ ಶಿಷ್ಯರಲ್ಲೊಬ್ಬನಾಗಿ ಮಾಡಿಕೊಂಡಿದ್ದರು. ಸ್ನಾನಕ್ಕೆ ಹೋಗುವಾಗ ಬ್ರಾಹ್ಮಣ ಶಿಷ್ಯರಾದ ಕೂರೇಶ, ದಾಶರಥಿಗಳ ಹೆಗಲಿನ ಮೇಲೆ ಕಯ್ಯಿರಿಸಿಕೊಂಡಿದ್ದರೆ, ಸ್ನಾನಮಾಡಿ ಬರುವಾಗ ಧನುರ್ದಾಸನ ಹೆಗಲ ಮೇಲೆ ಕಯ್ಯಿರಿಸಿಕೊಳ್ಳುತ್ತಿದ್ದರು. ಹೀಗೆ ಕೆಳಜಾತಿಯಿಂದ ಬಂದ ಶಿಷ್ಯರ ಮೂಲಕ ಜಾತಿ, ವಿದ್ಯೆ, ಹಣ ಇವುಗಳ ಮದದಲ್ಲಿ ಸಿಕ್ಕಿ ನರಳುತ್ತಿದ್ದ ಉತ್ತಮ ಕುಲದವರಿಗೆ ಬುದ್ಧಿ ಕಲಿಸಿದರು.

ಆಳ್ವಾರುಗಳ ಗೀತೆಗಳನ್ನು ಆನಂದದಿಂದ ಹಾಡುತ್ತಿದ್ದ ಅಂತ್ಯ ಜಾತಿಯ ಶಿಷ್ಯನ ಗುಡಿಸಲಿನಲ್ಲಿ ಕುಳಿತು, ಆ ಗೀತೆಗಳ ಮಾಧುರ್ಯವನ್ನು ಮನದಣಿಯ ಸವಿಯುತ್ತಿದ್ದರು.

ಜಾತಿ ಕುಲಗಳಿಗಿಂತಲೂ ಸರ್ವಮತಸಮಾನತೆ ಹಾಗೂ ಸಮಾಜದ ಹಿತ ಚಿಂತನೆ ಮುಖ್ಯವೆಂದು ಹೇಳಿ, ಯಾವುದೇ ವ್ಯಕ್ತಿಯನ್ನು ಅವನ ಜನ್ಮ, ಜಾತಿ, ಕುಲ, ಗೋತ್ರ, ಅಜ್ಞಾನ, ಬಡತನಗಳ ನೆಪದಲ್ಲಿ, ಧರ್ಮಮಾರ್ಗದಿಂದ ದೂರ ವಿಡುವುದು ಸರಿಯಲ್ಲ ಎಂದು ಹೇಳಿದರು. ಉಚ್ಚಕುಲದ ಕೆಲವು ಸಾಂಪ್ರದಾಯಿಕ ಪ್ರತಿಬಂಧಕಗಳನ್ನು ವಿಧಿಯಿಲ್ಲದೆ ಉಳಿಸಿಕೊಂಡರೂ, ಮುಕ್ತಿಯನ್ನು ಕೀಳು ಜಾತಿ ಯವರಿಗೂ ತೆರೆದಿಟ್ಟು, ಅವರನ್ನು ತಿರುಕುಲತ್ತಾರ್ ಎಂದು ಕರೆದು, ಮುಂದೆ ಗಾಂಧೀಜಿಯಿಂದ ಹರಿಜನರೆಂದು, ಬಸವಣ್ಣನವರಿಂದ ಹಿರಿಯ ಕುಲದವರೆಂದು, ಕರೆಸಿಕೊಂಡವರಿಗೆ, ತಮ್ಮ ಜೀವಿತ ಕಾಲದಲ್ಲಿಯೇ ವಿಷ್ಣುದೇವಾಲಯಗಳಲ್ಲಿ ಮೂರ್ತಿ ದರ್ಶನಕ್ಕೆ, ಧರ್ಮ ಬೋಧೆಗೆ ಬರಲು ಅವಕಾಶ ಕಲ್ಪಿಸಿ, ಆ ಮೂಲಕ ಶ್ರೇಷ್ಠ ಸಮಾಜ ಸುಧಾರಕರೆನಿಸಿದರು.

ಪಾಂಚರಾತ್ರ ಆಗಮದ ಪ್ರಮಾಣ ಸ್ಥಾಪನೆ, ದೇವಾಲಯದಲ್ಲಿನ ಪೂಜಾ ಕ್ರಮದ ವ್ಯವಸ್ಥೆ, ಪ್ರಪತ್ತಿಯ ಮೂಲಕ ಸಮಸ್ತ ಜನರಿಗೂ ಮೋಕ್ಷೋಪದೇಶ– ಇವು ರಾಮಾನುಜರು ಸಾಧಿಸಿದ ಮೂರು ಮಹತ್ಕಾರ್ಯಗಳು.

ಬುದ್ಧಿಯ ತೀಕ್ಷ್ಣತೆ, ಅಸದೃಶ ಪಾಂಡಿತ್ಯ, ಗ್ರಂಥರಚನಾ ಕೌಶಲ್ಯ, ಪವಿತ್ರ ವ್ಯಕ್ತಿಜೀವನ, ತೀರ್ಥಯಾತ್ರೆ, ದೇವಾಲಯಗಳ ಪುನರುಜ್ಜೀವನ, ಉಜ್ಜ್ವಲ ವ್ಯಕ್ತಿತ್ವ, ಇವು ರಾಮಾನುಜರ ಬಗ್ಗೆ ನೆನಪಿಡಬೇಕಾದ ಅಂಶಗಳು.

ಶ್ರೀರಂಗ, ತಿರುಮಲೈ, ಶ್ರೀ ಪೆರುಂಬೂದೂರು, ತಿರುನಾರಾಯಣಪುರ ಈ ನಾಲ್ಕೂ ದಿವ್ಯಕ್ಷೇತ್ರಗಳಲ್ಲಿ ಇರುವ ತಮ್ಮ ಅರ್ಚಾ ವಿಗ್ರಹಗಳಲ್ಲಿ, ಅವರು ಜೀವಿಸಿದ್ದಾಗಲೇ ತಮ್ಮ ಶಕ್ತಿಯನ್ನು ತುಂಬಿ, ಆ ಮೂಲಕ ರಾಮಾನುಜರು ತಮ್ಮ ಶಿಷ್ಯ ಕೋಟಿಗೆ ಈಗಲೂ ಅನುಗ್ರಹಿಸುತ್ತಿದ್ದಾರೆಂಬುದು ಶ್ರೀವೈಷ್ಣವರ ನಂಬಿಕೆ.

"ಈ ಪ್ರಪಂಚವು ಸತ್ಯವಾದುದು. ಇಲ್ಲಿ ಚೆನ್ನಾಗಿ, ಸಂತಸದಿಂದ, ಸಾಮರಸ್ಯದಿಂದ, ಬಾಳಬೇಕು. ಅನಂತ ಕಲ್ಯಾಣ ಗುಣ ಪರಿಪೂರ್ಣನಾದ ಹಾಗೂ ಲಕ್ಷ್ಮೀಪತಿಯಾದ ನಾರಾಯಣನು, ಈ ಜಗತ್ತಿಗೆ ಅಧಿಪತಿ. ಅವನೇ ಪರಬ್ರಹ್ಮ. ಅವನು ಎಲ್ಲ ಚರಾಚರ ವಸ್ತುಗಳನ್ನೂ ತನ್ನ ಶರೀರವಾಗಿ ಧರಿಸಿದ್ದಾನೆ. ಜೀವಿಗಳು ಅವನಿಂದ ಬೇರೆಯಾಗಿದ್ದಾರೆ. ಚರಾಚರಾತ್ಮಕವಾದ ಸಮಸ್ತ ಪ್ರಪಂಚವೂ ಅವನಿಗೆ ಅಧೀನವಾದುದು. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ನಡೆಸುವುದು ಅವನ ಲೀಲೆ. ಸರ್ವೇಶ್ವರನ ನಿಯಮಗಳನ್ನು ಉಲ್ಲಂಘಿಸಿ ನಡೆದ ಕಾರಣದಿಂದ ಉಂಟಾದ ಸಂಸಾರವು ಅಂದರೆ ಹುಟ್ಟು ಸಾವು, ಸತ್ಯವಾದುದು. ಅನನ್ಯ ಭಕ್ತಿಯಿಂದ ತನ್ನನ್ನು ಆಶ್ರಯಿಸಿದ ಜೀವರಾಶಿಯನ್ನು, ಸಂಸಾರ ಬಂಧನದಿಂದ ಬಿಡುಗಡೆಮಾಡಿ, ನಿತ್ಯಾನಂದವನ್ನು ಒದಗಿಸುವವನು ಆತನೇ. ಪ್ರಕೃತಿಯ ಸಂಪರ್ಕವಿಲ್ಲದ ಪರಮಪದ ಅಥವಾ ವೈಕುಂಠದಲ್ಲಿ ಮುಕ್ತಿಯ ಸ್ಥಾನವಿದೆ. ಆ ಪರಬ್ರಹ್ಮನ ಅನುಭವವೇ ಪರಮಪುರುಷನ ಪ್ರಾಪ್ತಿ. ಆತನ ಪ್ರಾಪ್ತಿಗೆ ಭಕ್ತಿಯೇ ಪರಮೋಪಾಯ. ಆ ಭಕ್ತಿಗೆ ಅಡ್ಡಿಯಾಗಿರುವ ಹಲವಾರು ತೊಡಕುಗಳು ನಿವಾರಣೆಯಾಗಬೇಕಾದರೆ, ಆತನ ಚರಣಾರವಿಂದವನ್ನು ಮರೆಹೋಗುವುದೇ ಏಕೈಕ ಮಾರ್ಗ. ವೇದೋಪನಿಷತ್ತುಗಳು, ಸ್ಮೃತಿ ಪುರಾಣ ಆಗಮಗಳು, ಪ್ರತಿಪಾದಿಸುವ ವಿಷಯ ಇಷ್ಟೇ"—**ಇದು ರಾಮಾನುಜರ ಅಭಿಪ್ರಾಯ.**

"ಶ್ರೀ ಲಕ್ಷ್ಮೀನಾರಾಯಣನೇ ಪರತತ್ತ್ವ. ಅವನೇ ನಮ್ಮೆಲ್ಲರ ತಂದೆ. ಅವನ ವಕ್ಷಸ್ಥಳದಲ್ಲಿರುವ ಮಹಾಲಕ್ಷ್ಮಿಯೇ ನಮ್ಮೆಲ್ಲರ ತಾಯಿ. ನಾವೆಲ್ಲ ಅಣ್ಣತಮ್ಮಂದಿರು ಹಾಗೂ ಅಕ್ಕತಂಗಿಯರು. ಚೇತನ–ಅಚೇತನವೆಲ್ಲವೂ ಅವನಿಗೆ ಅಧೀನವಾಗಿವೆ. ಚೇತನರಾದ ನಾವೆಲ್ಲರೂ ಅವನ ಕಿಂಕರರು. ಈ ಪ್ರಪಂಚವು ಅವನ ಶರೀರವಾದುದರಿಂದ, ಶರೀರದಲ್ಲಿನ ಯಾವುದೇ ಅವಯವಕ್ಕೆ ನೋವು ಉಂಟಾದರೂ, ಅದರಲ್ಲಿರುವ ಅಂತರಾತ್ಮನಿಗೆ ಅದು ಸಹ್ಯವಾಗದು. ಯಾವುದೇ ಪ್ರಾಣಿಮಾತ್ರಕ್ಕೆ

ನಾವು ದ್ರೋಹಮಾಡಿದರೆ, ಅದು ಅವುಗಳಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮ ನಿಗೇ ಮಾಡಿದಂತಾಗುತ್ತದೆ. ಮಾನವನು ತನ್ನ ಆತ್ಮೋನ್ನತಿಯನ್ನೂ, ಶಾಶ್ವತ ಸುಖವಾದ ಮೋಕ್ಷವನ್ನೂ ಪಡೆಯಬೇಕಾದರೆ, ಶ್ರೀಮನ್ನಾರಾಯಣನಲ್ಲಿ ದೃಢವಾದ ವಿಶ್ವಾಸಪೂರ್ವಕ ಶರಣಾಗತಿಯಲ್ಲದೆ ಬೇರೆ ಮಾರ್ಗವಿಲ್ಲ. ಅಂದರೆ ಅನನ್ಯ ಶರಣತೆ ಯಿಂದ ಮರೆಹೊಕ್ಕು ಭಗವಂತನನ್ನು ಆಶ್ರಯಿಸಿದ ಹೊರತು, ಜೀವನದ ತೊಡಕು ಗಳಿಂದ ಬಿಡುಗಡೆ ಹೊಂದುವುದು ಶಕ್ಯವಿಲ್ಲ. ವಿಶ್ವಪ್ರೇಮ ಮತ್ತು ಸಮದರ್ಶಿತ್ವ ಇವು, ಭಗವಂತನನ್ನು ಪ್ರೇಮಿಸಿ ಅವನ ಅನುಗ್ರಹಕ್ಕೆ ಪಾತ್ರರಾದವರ ಕುರುಹು. ಆದಕಾರಣ ಅವನನ್ನು ನಂಬಿ, ಭಕ್ತಿಯಿಂದ ಧ್ಯಾನಿಸಿ, ಪೂರ್ಣವಾಗಿ ಶರಣುಹೊಕ್ಕರೆ ಮುಕ್ತಿಯು ಖಂಡಿತವಾಗಿ ಸಿಗುತ್ತದೆ.” ಇದು **ರಾಮಾನುಜರ ಉಪದೇಶ.**

“ಭಗವಂತನ ಆಜ್ಞಾರೂಪವಾದ ವೇದ ಹಾಗೂ ಧರ್ಮಶಾಸ್ತ್ರಗಳಲ್ಲಿ ಹೇಳಿರು ವಂತಹ ಸುವ್ಯವಸ್ಥಿತ ಜೀವನಕ್ರಮವನ್ನು ಏರ್ಪಡಿಸಿಕೊಂಡು ನಡೆಯಬೇಕು. ವಿಹಿತವಾದ ನಿತ್ಯ ನೈಮಿತ್ತಿಕ ಕರ್ಮಗಳೆಲ್ಲವನ್ನೂ, ಭಗವದಾಜ್ಞೆ, ಭಗವತ್ಪ್ರೀತ್ಯರ್ಥ, ಭಗವತ್ಕೈಂಕರ್ಯ ರೂಪ ಎಂದು ತಿಳಿದು ಅನುಷ್ಠಾನ ಮಾಡಬೇಕು. ಸರ್ವ ಕಾಲ ದಲ್ಲಿಯೂ ದ್ವಯ ಮಂತ್ರೋಚ್ಚಾರಣ ಮಾಡುತ್ತ, ಅದರ ಒಳಾರ್ಥವನ್ನು ಅನು ಸಂಧಾನ ಮಾಡಬೇಕು. ಶ್ರೀವೈಷ್ಣವ ಸಿದ್ಧಾಂತವನ್ನು ಸರಿಯಾಗಿ ಅರಿತು ಆಚರಿ ಸುವ ಶ್ರೀವೈಷ್ಣವರ ಅಭಿಮಾನಕ್ಕೆ ಪಾತ್ರರಾಗಿ, ಅವರ ಸೇವೆ ಮಾಡಬೇಕು. ಅನು ಕೂಲರಾದ ಶ್ರೀವೈಷ್ಣವರನ್ನು ಕಂಡಾಗ, ಮಂದಮಾರುತ, ಬೆಳದಿಂಗಳು, ಅರಳಿದ ಹೂಗಳನ್ನು ಕಂಡಂತೆ ಸಂತೋಷಿಸಬೇಕು. ಪ್ರತಿಕೂಲರಾದ ಅಂದರೆ ಭಗವಂತ–ಭಾಗ ವತರನ್ನು ದ್ವೇಷಿಸುವವರನ್ನು ಕಂಡಾಗ ಬೆಂಕಿ, ಹಾವುಗಳನ್ನು ಕಂಡಂತೆ ಭಯಪಟ್ಟು ದೂರ ಸರಿಯಬೇಕು. ಇತರ ಸಂಸಾರಿಗಳನ್ನು ಕಂಡಾಗ ಕಲ್ಲು, ಮರಗಳನ್ನು ಕಂಡಂತೆ ಉದಾಸೀನರಾಗಿರಬೇಕು. ಧರ್ಮಗ್ರಂಥಗಳನ್ನು ಓದಿ ತಿಳಿದುಕೊಂಡು, ಇಚ್ಛೆ ಇರುವವರಿಗೆ ಬೋಧಿಸಬೇಕು. ಸಾಧ್ಯವಾದರೆ ದಿವ್ಯ ಕ್ಷೇತ್ರಗಳಲ್ಲಿ ವಾಸಿಸಿ, ಅಲ್ಲಿನ ದೇವಾಲಯಗಳಲ್ಲಿ ದೀಪ, ಧೂಪ, ನೈವೇದ್ಯ, ಮಾಲೆ ಮುಂತಾದ ಕೈಂಕರ್ಯ ಗಳನ್ನು ಮಾಡಬೇಕು” ಎಂಬ **ರಾಮಾನುಜರ ದಿವ್ಯಾಜ್ಞೆ**ಯು ಈ ಶ್ಲೋಕದಲ್ಲಿ ಸಂಗ್ರಹೀತವಾಗಿದೆ.

ಶ್ರೀಭಾಷ್ಯ ದ್ರವಿಡಾಗಮೋ ಪ್ರವಚನೇ ಶ್ರೀಶಸ್ಥಲೇಷ್ವನ್ವಹಂ
ಕೈಂಕರ್ಯಂ ಯದುಶೈಲ ನಿತ್ಯವಸತಿಸ್ಸಾರ್ಥದ್ವಯೋಚ್ಚಾರಣಂ ||
ಯದ್ವಾ ಭಾಗವತಾಭಿಮಾನವಸತಿ ಶ್ರೇಯಸ್ಸತಾಮಿತ್ಯಲಂ
ಶಿಷ್ಯಾನ್ಪ್ರಾಹ ಯತೀಶ್ವರಃ ಪರಮಗಾದ್ವಿಷ್ಣೋಃ ಪದಂ ಶಾಶ್ವತಂ ||

ಲೋಕ ಹಿತೈಷಿಣಿಯಾಗಿರುವ ರಾಮಾನುಜರ ಉಪದೇಶ–ದಿವ್ಯಾಜ್ಞೆಗಳು, ಎಲ್ಲ ಕಡೆ ವ್ಯಾಪಿಸಬೇಕೆಂಬುದು ಅವರ ಶಿಷ್ಯರ ಹಿರಿಯಾಸೆ.

**ರಾಮಾನುಜರ ಹಿರಿಮೆಯನ್ನು ಈ ಅಭಿಪ್ರಾಯಗಳು** ಸಮರ್ಥಿಸುತ್ತವೆ :

1. ಶ್ರೀರಂಗದ ದೇವಾಲಯದ ಸ್ಮಾರ್ತ ಅಧಿಕಾರಿಯಾಗಿದ್ದ ಅರಂಗಂ ಎಂಬ ಊರಿನ ಅಮುದನು ಅಥವಾ **ತಿರುವರಂಗತ್ತಮುದನಾರ್** ಎಂಬುವರು, ತಾಯಿಯ ಇಚ್ಛೆಯಂತೆ, ರಾಮಾನುಜರ ಆಜ್ಞೆಯಂತೆ, ಕೂರೇಶರ ಶಿಷ್ಯರಾಗಿ ಶ್ರೀವೈಷ್ಣವ ಮತ ವನ್ನು ಅಪ್ಪಿದನಂತರ, ರಾಮಾನುಜರನ್ನು ಕುರಿತು ಹಾಡಿದ ನೂರೆಂಟು ಪದ್ಯಗಳ **ರಾಮಾನುಜ ನೂತ್ತಂದಾದಿ**ಯು, ಪ್ರಪನ್ನ ಗಾಯತ್ರಿ ಎಂಬ ಹೆಸರಿನಿಂದ ಪಾರಾ ಯಣ ಮಾಡಲ್ಪಡುತ್ತದೆ. ಇದು ದಿವ್ಯ ಪ್ರಬಂಧದ ಭಾಗವಾಗಿದೆ. ನಮ್ಮಾಳ್ವಾರ ರಿಗೆ ಮಧುರಕವಿ ಆಳ್ವಾರ್ ಇದ್ದಂತೆ, ರಾಮಾನುಜರಿಗೆ ತಿರುವರಂಗತ್ತಮುದನಾರ್ ಇದ್ದರೆಂದು ಪ್ರತೀತಿ.

2. ರಾಮಾನುಜರ ಶಿಷ್ಯರಾದ **ಆಂಧ್ರಪೂರ್ಣ** ಅಥವಾ ವಡುಗನಂಬಿಯು, ನೂರಹದಿನಾಲ್ಕು ಶ್ಲೋಕಗಳುಳ್ಳ **ಯತಿರಾಜ ವೈಭವ** ಮತ್ತು **ರಾಮಾನುಜ ಅಷ್ಟೋತ್ತರ**ವನ್ನೂ ರಚಿಸಿ ತಮ್ಮ ಗುರುಕಾಣಿಕೆಯನ್ನು ಸಲ್ಲಿಸಿದ್ದಾರೆ.

3. ಶ್ರೀರಂಗದಲ್ಲಿ ಪಿಳ್ಳಾನ್, ಶ್ರೀಪೆರಂಬೂದೂರಿನಲ್ಲಿ ಮುದಲಿ ಯಾಂಡಾನ್, ಕಂಚಿಯಲ್ಲಿ ನಡಾದೂರಾಳ್ವಾನ್, ತಿರುಪತಿಯಲ್ಲಿ ತಿರುಮಲೆನಂಬಿ— ಹೀಗೆ ರಾಮಾನುಜರ ಶಿಷ್ಯರು, ಅವರ ಸಂಬಂಧ ಇದ್ದ ಸ್ಥಳಗಳಲ್ಲಿ, ಭಾಷ್ಯ ಕಾರರ ಮೂರ್ತಿ ಇರುವ ಸನ್ನಿಧಿಗಳನ್ನು ಕಟ್ಟಿಸಿ, ಅವರ ಪ್ರಭಾವವನ್ನು ಬೆಳೆಸಿದರು.

4. ನಾರಾಯಣ ಮತ್ತು ರಾಮಾನುಜ ಎಂಬ ಎರಡೂ ಶಬ್ದಗಳು ನಾಲ್ಕು ಅಕ್ಷರಗಳಿಂದ ಕೂಡಿವೆ. ನಾರಾಯಣ ಎಂಬುದು ದುಷ್ಟ ನಿಗ್ರಹ, ಶಿಷ್ಟ ಪರಿಪಾಲನೆ ಗಳೆಂಬ ಎರಡೂ ಕಾರ್ಯಗಳನ್ನು ಮಾಡುವುದರಿಂದ, ಅದು ಬಂಧ-ಮೋಕ್ಷಗಳೆರಡಕ್ಕೂ ಕಾರಣವಾದುದು ; ಆದರೆ ರಾಮಾನುಜ ಎಂಬುದು ತನ್ನ ಕಾರುಣ್ಯದ ಮಹಿಮೆ ಯಿಂದ ಕೇವಲ ಮೋಕ್ಷವನ್ನೇ ಅನುಗ್ರಹಿಸುತ್ತದೆ. ಆದುದರಿಂದ ನಾರಾಯಣ ಎಂಬ ಪದಕ್ಕಿಂತ ರಾಮಾನುಜ ಎಂಬ ಪದವೇ ಶ್ರೇಷ್ಠವಾದುದು ಎಂದು ಅವರ ಪ್ರಿಯ ಶಿಷ್ಯ **ಕೂರೇಶ**ರು ಹೊಗಳಿದ್ದಾರೆ.

5. ರಾಮಾನುಜ ಎಂಬ ನಾಲ್ಕು ಅಕ್ಷರಗಳೇ ತಿರುಮಂತ್ರ, ಅವರ ಪಾದ ಗಳ ಕೈಂಕರ್ಯವೇ ಪರಮ ಪುರುಷಾರ್ಥ, ಎಂದು **ನಡಾದೂರಮ್ಮಾಳ್** ಹೊಗಳಿದ್ದಾರೆ.

6. ರಾಮಾನುಜ ಎಂಬುವರು ಸಕಲ ಲೋಕಗಳಿಗೂ ಗುರುವು, ಅವರು ಮಾತ್ರ ಎಲ್ಲರಿಗೂ ಮುಕ್ತಿಯನ್ನು ಕರುಣಿಸಬಲ್ಲರು, ಎಂಬುದು ಕಣಿಯನೂರು **ಶಿರಿಯಾಚ್ಚಾನ್** ಅವರ ಅಭಿಪ್ರಾಯ.

7. ಶ್ರೀಮದ್ರಾಮಾನುಜನೆಂಬ ಸೂರ್ಯನು, ಪುಣ್ಯಗಳೆಂಬ ಕಮಲಗಳನ್ನು ವಿಕಾಸಗೊಳಿಸಿ, ಪಾಪಗಳೆಂಬ ಅಂಧಕಾರವನ್ನು ಧ್ವಂಸಮಾಡಿ, ಲೋಕೋಜ್ಜೀವನ ಕ್ಕಾಗಿ ಅವತರಿಸಿದವರು, ಎಂದು **ಕಂದಾಡೈಯಾಂಡಾನ್** ಹೊಗಳಿದ್ದಾರೆ.

8. ರಾಮಾನುಜರಷ್ಟು ವಿಶಾಲ ಭಾವನೆ ನನ್ನಲ್ಲಿ ಬರಲಿಲ್ಲವಲ್ಲಾ ಎಂದು, ಅವರ ಗುರುಗಳಾದ **ಗೋಷ್ಠೀಪೂರ್ಣರು** ಶೋಕಿಸಿದರು.

9. ಯತಿರಾಜ ರಾಮಾನುಜರು ಹುಟ್ಟಿದುದರಿಂದಲೇ ಶರಣಾಗತಿಗೆ ಒಂದು ಪ್ರಮುಖ ಸ್ಥಾನ ದೊರಕಿತು, ಎಂದು **ಯತಿರಾಜರ್ ಅಂತಾದಿ**ಯಲ್ಲಿ **ಪಿಳ್ಳೈ ಪ್ಪೆರುಮಾಳ್ ಅಯ್ಯಂಗಾರ್** ಹೇಳಿದ್ದಾರೆ.

10. ತಾಯಿ ಸೀತೆ, ಮಗ ಪ್ರಹ್ಲಾದ, ತಮ್ಮ ವಿಭೀಷಣ, ಗುರು ಶಠ ಗೋಪ, ಶಿಷ್ಯ ರಾಮಾನುಜ, ಈ ಐವರಲ್ಲಿ ಮಾತ್ರ ದೀನದಲಿತರ ಬಗ್ಗೆ ಸಹಾನು ಭೂತಿ, ಕರುಣೆಗಳನ್ನು ನೋಡಬಹುದು, ಎಂಬುದಾಗಿ **ಆಚಾರ್ಯ ಹೃದಯ**ದಲ್ಲಿ **ಅಳಗಿಯ ಮಣವಾಳ ನಾಯನಾರ್** ಹೇಳಿದ್ದಾರೆ.

11. **ವೇದಾಂತ ದೇಶಿಕರು, ಯತಿರಾಜ ಸಪ್ತತಿ**ಯಲ್ಲಿ ರಾಮಾನುಜ ರನ್ನು ಕೊಂಡಾಡಿದ್ದಾರೆ.

12. **ಮಣವಾಳ ಮಾಮುನಿ**ಗಳು, **ಯತಿರಾಜ ವಿಂಶತಿ, ಉಪದೇಶ ರತ್ನಮಾಲೈ, ಆರ್ತಿಪ್ರಬಂಧ** ರಚಿಸಿ, ಗುರುಮಹಿಮೆಯನ್ನು ಕೊಂಡಾಡಿದ್ದಾರೆ.

13. ರಾಮಾನುಜೌ ಯಾಮುನ ತೀರ್ಥ ಸೇವಾ
ಪರೌ ಉದೀತೌ ನರಕಂ ನಿರೋದ್ಧುಂ ||
ತಯೋಃ ಪುರಾಣಃ ಪ್ರಣಿನಾಯಗೀತಾಂ
ತಸ್ಯಾ ನವೀನಸ್ತು ತತಾನ ಟೀಕಾಂ ||

ಇದು **ವೆಂಕಟಾಧ್ವರಿ** ಕವಿಯು ರಚಿಸಿರುವ ಪದ್ಯ.ಬಲರಾಮನ ತಮ್ಮ ಶ್ರೀಕೃಷ್ಣನು, ಯಮುನಾ ನದಿಯಲ್ಲಿ ಜಲಕ್ರೀಡೆಯಾಡಿ, ಕಾಳಿಂಗನ ಹೆಡೆಯ ಮೇಲೆ ನರ್ತನ ಮಾಡಿ, ದಡದಲ್ಲಿ ಲೋಕಮೋಹಕ ಲೀಲೆಗಳನ್ನು ಎಸಗಿ, ನರಕಾಸುರನನ್ನು ಸಂಹರಿಸಿ, ದಿವ್ಯವಾಣಿಯಿಂದ ಗೀತೋಪದೇಶ ಮಾಡಿದನು; ಹಾಗೆಯೇ ರಾಮಾನುಜರು, ಯಾಮುನರ ಗ್ರಂಥ ಹಾಗೂ ಶಿಷ್ಯರಮೂಲಕ ಅವರ ಅಭಿಪ್ರಾಯ ವೆಲ್ಲವನ್ನೂ ತಿಳಿದುಕೊಂಡು, ಗ್ರಂಥರಚನೆಮಾಡಿ, ಶ್ರೀವೈಷ್ಣವ ಸಮಾಜವನ್ನು ಸಂಘಟಿಸಿ, ನರಕ ಮಾರ್ಗವನ್ನು ತಪ್ಪಿಸಲು, ಭಕ್ತಿ-ಪ್ರಪತ್ತಿಗಳಿಂದ ಪರಮಪದದ ದ್ವಾರವನ್ನು ತೆಗೆದಿಟ್ಟರು ಹಾಗೂ ಶ್ರೀವೈಷ್ಣವ ಮತ-ಸಮಾಜಗಳ ಸಂಘಟನೆಗಾಗಿ ಅನೇಕ ಲೀಲೆಗಳನ್ನು ಆಚರಿಸಿದರು.

14 I have generally followed the guidance of Sankara, as he seems to carry the Vedanta doctrine to the highest point, but I feel bound to say that Ramanuja is, on many points, the more faithful interpreter of Vedanta Sutras

—*Prof. Max Muller*

15. Ramanuja is the greatest exponent of Hindu theism and the greatest philosopher of Bhakti, His analogy of Self-Body relationship, between God and the Universe, is the best way Ramanuja's, doctrine is the heart of Vedanta and a clear expression of the real concerns of the Brahma Sutras

—*Prof Ninian Smart*

16 Ramanuja expounds the Gita in his Bhashya in a manner far closer to the intention of its author

—*W D P Hill*

17 The view of Ramanuja is one of the moral obligations, to be discharged disinterestedly, without any desire for the consequences. The theory of modified monism, found in some Upanishads and the Bhagavadgita, is adopted by him

—*Dr. Susheela Kumar Maitra*

18. Ramanuja's Bhashya does full justice to the intentions of the Gita, reconciles the barren absolute monistic thought with the living God of devotion and to show a new and supreme way exclusive devotion and to show a new and supreme way (exclusive devotion) to a merciful Personal God endowed with all perfections, who can be fully known only through love He has restored the Gita not only in the hearts but also in the minds of the Indian thinkers, restoring unity of Religion and Philosophy.

—*Prof J A B Van Buitenin*

19 The movement of Sankara forced its way through its high intellectuality, but it could be of little service to the masses, because of its adherence to strict caste laws, very small scope for ordinary emotion and making Sanskrit the only vehicle of communication ;

On the other hand Ramanuja, with his Sariri-Sarira Bhava of God and world, a most practical philosophy, a great appeal to the emotions, an entire denial of birthrights before spiritual attainments and its appeal through the **popular** tongue, completely succeeded in bringing the masses back to the Vedic Religion.

—*Swami Vivekananda*

20. Ramanuja retains the realism of the Astika Philosophies and synthesises the various currents of Vedic ritualism, Bhagavata devotion, philosophy of the Alwars and Monism of Vedanta.

—*S. N. Dasgupta*

---

## ಅಧ್ಯಾಯ ೧೦

# ವಡಗಲೆ–ತೆಂಕಲೆ ಸಂಪ್ರದಾಯಗಳು

ಆಚಾರ್ಯ ರಾಮಾನುಜರನ್ನು ಆಶ್ರಯಿಸಿದವರಲ್ಲಿ ಅನೇಕರು, ಶಾಸ್ತ್ರಗಳಲ್ಲಿ ಪಂಡಿತರೂ, ನಿಪುಣರೂ, ಗ್ರಂಥ ನಿರ್ಮಾಣದಲ್ಲಿ ಚತುರರೂ ಆಗಿದ್ದರು. ಆದರೆ ಅವರಲ್ಲಿ ಕೆಲವರು ಸ್ವಾಭಿಮಾನಿಗಳಾಗಿ, ಆಚಾರ್ಯರ ವಾಕ್ಯಗಳಿಗೆ ಇದೇ ಸರಿಯಾದ ಅಭಿಪ್ರಾಯವೆಂದು, ತಮ್ಮದೇ ಆದ ರೀತಿಯಲ್ಲಿ ಸಮರ್ಥನೆ ಮಾಡತೊಡಗಿದ್ದರು. ಹೀಗೆ ಅಭಿಪ್ರಾಯ ಕಲ್ಪನೆಯಲ್ಲಿ ಭೇದವಿರುವುದನ್ನು ಗಮನಿಸಿದ ರಾಮಾನುಜರು, ತಮ್ಮ ಅನಂತರ ಆಗಬಹುದಾದ ಪರಿಣಾಮವನ್ನು ಊಹಿಸಿ, ಹಿಂದಿನಿಂದಲೂ ಬಂದ ಕ್ರಮದಂತೆ ಆಚಾರ್ಯ ಪದವಿಯನ್ನು ತಮ್ಮ ಮುಖ್ಯ ಶಿಷ್ಯರಲ್ಲಿ ಒಬ್ಬರಿಗೆ ವಹಿಸದೆ, ನಾಡಿನಾದ್ಯಂತ 74 ಮಠ ಹಾಗೂ ಮಠಪೀಠಗಳನ್ನು ಸ್ಥಾಪಿಸಿ, ಅವುಗಳನ್ನು ನೋಡಿಕೊಳ್ಳಲು ಪೀಠಾಧಿಪತಿಗಳನ್ನು ನೇಮಿಸಿ, ದರ್ಶನ-ಸಿದ್ಧಾಂತಗಳ ಪ್ರಚಾರ ಮಾಡುವಂತೆ ಆಜ್ಞೆ ಇತ್ತರು.

"ರಾಮಾನುಜಾರ್ಯಚ್ಛ್ರುತಿಮೌಳಿ ಭಾಷ್ಯಂ ।
ಅರ್ಥಂ ರಹಸ್ಯಂ, ದ್ರಮಿಡ ಶ್ರುತೀನಾಂ ।
ಸಂಪ್ರಾಪ್ಯತೇ ನೈವ ಗುರೂಕೃತಾಂಸ್ತಾನ್ ।
ಭಜೇ ಚತುಸ್ಸಪ್ತತಿ ಪೀಠ ಸಂಸ್ಥಾನ್ ॥"

ಎಂಬಂತೆ ಈ ಪೀಠಾಧಿಪತಿ ಅಥವಾ ಸಿಂಹಾಸನಾಧಿಪತಿಗಳಲ್ಲಿ, ಕೆಲವರು ಶ್ರೀಭಾಷ್ಯ-ಗೀತಾಭಾಷ್ಯಗಳಿಗೂ, ಕೆಲವರು ರಹಸ್ಯಾರ್ಥಕ್ಕೂ, ಇನ್ನೂ ಕೆಲವರು ಭಗವದ್ವಿಷಯಕ್ಕೂ, ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದರು.

"ರಾಮಾನುಜಸ್ಸಪ್ತಶತೈರ್ಯತೀನಾಂ । ಪೀಠೇಶ್ಚತುಸ್ಸಪ್ತತಿಭಿಸ್ಸಮೇತಃ ।
ಏಕಾಂತಿಭಿರ್ದ್ವಾದಶಭಿಸ್ಸಹಸ್ರೈಃ । ಶ್ರೀರಂಗ ಆಸ್ತೇಯತಿಸಾರ್ವಭೌಮಃ ।"

ಎಂಬಂತೆ ಈ 74 ಪೀಠಾಧಿಪತಿಗಳಲ್ಲದೆ, 700 ಜೀಯರ್‌ಗಳು, 1200 ಏಕಾಂತಿಗಳು, 3 ಕೋಟಿ ಅಮ್ಮೈಗಳು, ಶ್ರೀವೈಷ್ಣವ ಸಿದ್ಧಾಂತದ ಪ್ರಚಾರದಲ್ಲಿ ನಿರತರಾಗಿದ್ದರು.

ಪರಂಪರಾಗತವಾದ ಸತ್ಸಂಪ್ರದಾಯನಿಷ್ಠರೂ, ಸದಾಚಾರ ಸಂಪನ್ನರೂ, ತತ್ತ್ವಜ್ಞಾನಿಗಳೂ, ವಿವೇಕಿಗಳೂ, ದೈವಭಕ್ತರೂ ಆದ ಈ ಸಿಂಹಾಸನಾಧಿಪತಿಗಳಿಗೆಲ್ಲ, ಪಂಚಸಂಸ್ಕಾರ, ಮಂತ್ರೋಪದೇಶ, ಗ್ರಂಥಗಳ ಕಾಲಕ್ಷೇಪ, ಮಾಡುವ ಅಧಿಕಾರ ಕೊಡಲ್ಪಟ್ಟಿದ್ದಿತು. ಕೂರೇಶ, ದಾಶರಥಿ, ಕಿಡಾಂಬಿ ಆಚ್ಚಾನ್, ಆಂಧ್ರಪೂರ್ಣ, ತಿರುಕ್ಕುರುಹೈಪ್ಪಿರಾನ್ ಪಿಳ್ಳಾನ್, ನಡಾದೂರಾಳ್ವಾನ್,

ಎಂಗಳಾಳ್ವಾನ್, ಎಂಬಾರ್, ಗೋವಿಂದಜೀಯರ್, ಪರಾಶರ, ದೇವರಾಜ–ಇವರು ರಾಮಾನುಜರ ಪ್ರಮುಖ ಶಿಷ್ಯರು. ಇವರಲ್ಲಿ ನಾಲ್ವರು, ಶ್ರೀಭಾಷ್ಯವನ್ನು ವೈದಿಕ ಸಂಪ್ರದಾಯದ ನೆಲೆಯಲ್ಲಿಯೇ ಬೋಧಿಸಬೇಕೆಂದೂ, ಉಳಿದವರು ಭಗವದ್ವಿಷಯ ಅಥವಾ ಆಳ್ವಾರರ ಪ್ರಬಂಧವನ್ನು ಚೆನ್ನಾಗಿ ಅಧ್ಯಯನ ಮಾಡಿ, ಆ ಮೂಲಕ ಸ್ಪಷ್ಟವಾದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನಾಡಿನಲ್ಲೆಲ್ಲ ಹರಡಬೇಕು, ಎಂಬುದು ರಾಮಾನುಜರ ಇಚ್ಛೆಯಾಗಿದ್ದಿತು.

74 ಮಠಪೀಠಗಳ ಸಿಂಹಾಸನಾಧಿಪತಿ ಅಥವಾ ಆಚಾರ್ಯಪುರುಷರು :— **ತಿರುಕ್ಕುರು ಹೈಪ್ಪಿರಾನ್ ಪಿಳ್ಳಾನ್**, ಕೂರತ್ತಾಳ್ವಾನ್, **ನಡಾದೂರಾಳ್ವಾನ್,** ಎಂಗಳಾಳ್ವಾನ್, ತಿರುಕ್ಕಾಳ್ವಾನ್, ಇಳೈಯಾಳ್ವಾನ್, ಗೋಮಠತ್ತಾಳ್ವಾನ್, ಶೇಟ್ಟಲೂರಾಳ್ವಾನ್, ವೇದಾಂತಿಯಾಳ್ವಾನ್, ಆನಂದಾಳ್ವಾನ್, ನಡುವಿಲಾಳ್ವಾನ್, ಮುಳಹಾಳ್ವಾನ್, ನೈಯುಂಡಾಳ್ವಾನ್, ಊಕ್ಕಲಾಳ್ವಾನ್, ತಿರುಕ್ಕೋವಲೂರಾಳ್ವಾನ್, ತಿರುಮೋಹೂರಾಳ್ವಾನ್, ಕೋಯಿಲಾಳ್ವಾನ್, ಅರುಣಪುರತ್ತಾಳ್ವಾನ್, ಕಣ್ಣಿಯನೂರ್ ಶಿರಿಯಾಳ್ವಾನ್, ತಿರುಮಲ್ಲೈನಲ್ಲಾನ್, **ಕಿಡಾಂಬಿಯಾಚ್ಚಾನ್,** ವಂಗಿಪುರತ್ತಾಚ್ಚಾನ್, ಈಚ್ಚಂಬಾಡಿಯಾಚ್ಚಾನ್, ಕೊಂಗಿಲಾಚ್ಚಾನ್, ತಿರುಕ್ಕಣ್ಣಪುರತ್ತಾಚ್ಚಾನ್, **ಎಂಬಾರ್,** ಶಿರಿಯ ಗೋವಿಂದಪ್ಪೆರುಮಾಳ್, ವೀರವಲ್ಲಿಪ್ಪೆರುಮಾಳ್, ಕಿಡಾಂಬಪ್ಪೆರುಮಾಳ್ ಅಮ್ಮಂಗಿಪ್ಪೆರುಮಾಳ್, ಆಸೂರಿಪ್ಪೆರುಮಾಳ್, ಪಿಳ್ಳೈಯಪ್ಪನ್, ಪಿಳ್ಳೈತಿರುಮಲೆನಂಬಿ, ವಂಗಿಪ್ಪುರತ್ತುನಂಬಿ, ಶೊಟ್ಟೆನಂಬಿ, ಮುಡುಂಬೈನಂಬಿ, ಪರಾಂಕುಶನಂಬಿ, ತಿರುಕ್ಕುರುಂಗಡಿನಂಬಿ, ತೊಂಡನೂರ್‌ನಂಬಿ, ಅರುಣಪುರತ್ತುನಂಬಿ, ಮರುದೂರ್‌ನಂಬಿ, ಮಳೈಯಾರ್‌ನಂಬಿ, **ವಡುಹನಂಬಿ,** ಕುರುವಿನಂಬಿ, ಪುಂಡರೀಕಾಕ್ಷರ್, **ಮುದಲಿಯಾಂಡಾನ್,** ಕಂದಾಡೈಯಾಂಡಾನ್, ಮಾರುದಿಯಾಂಡಾನ್, ಮಧುರೈಯಾಡಾನ್, ಇಯ್ಯುಣ್ಣಿಯಾಂಡಾನ್, **ಸೋಮಯಾಜಿಯಾಂಡಾನ್,** ಜಿಯ್ಯರಾಂಡಾನ್, ಈಶಾಂಡಾನ್, ಪೆರಿಯಾಂಡಾನ್, ಶಿರಿಯಾಂಡಾನ್, ಅಮ್ಮಂಗಿಯಾಂಡಾನ್, **ಆಳವಂದಾರಾಂಡಾನ್,** ಶುಂದರತ್ತೋಳುಡೈಯರ್, ಉಕ್ಕಲಮ್ಮಾಳ್, ವೈತ್ತಮಾನಿದಿಯಾರ್, ಪಿಳ್ಳೈಯುರುಂದೈಯುಡೈಯಾರ್, ಶೊಟ್ಟೈಯಮ್ಮಾಳ್, ಪರುತ್ತಿಕ್ಕೊಲ್ಲೈಯಮ್ಮಾಳ್, **ಪರಾಶರಭಟ್ಟರ್,** ಮುಡುಂಬೈಯಮ್ಮಾಳ್, ಶ್ರೀರಾಮಪಿಳ್ಳೈಭಟ್ಟರ್, ಶಿರುಪ್ಪಳ್ಳಿ ದೇವರಾಜಭಟ್ಟರ್, ಪಿಳ್ಳೈಯುರೈಂದೈಯುಡೆಯಾರ್, ಪಿಳ್ಳೈತಿರುವಾಯ್ಮೊಳಿ ಅರೈಯರ್, ಪಿಳ್ಳೈರಾಜಮಹೇಂದ್ರಪ್ಪೆರುಮಾಳ್ ಅರೈಯರ್, ಅಧಿಕಾರಿಪ್ಪಿಳ್ಳೈ, ತಿರುನಗರಿಪ್ಪಿಳ್ಳೈ, ಕೊಮಾಂಡೂರುಪಿಳ್ಳೈ, ಅನಂತ ಸೋಮಯಾಜಿಯಾರ್, ಕಾಂಚೀ ಸೊಮಯಾಜಿಯಾರ್.

ಈ ಪೀಠಾಧಿಪತಿಗಳ ಹಾಗೂ ಇವರ ಶಿಷ್ಯಪ್ರಶಿಷ್ಯರ ಖಂಡನ, ಮಂಡನ, ಪರೀಕ್ಷಣ, ವಿಮರ್ಶನಗಳ ಫಲವಾಗಿ, ರಾಮಾನುಜ ಸಿದ್ಧಾಂತಕ್ಕೆ ವೈಶಾಲ್ಯತೆ, ನಿಷ್ಕೃಷ್ಟತೆಗಳು ಉಂಟಾಗಿ, ಇವರೆಲ್ಲರ ಪ್ರಾಮಾಣಿಕ ಪ್ರಯತ್ನದಿಂದ ಶ್ರೀವೈಷ್ಣವ ಮತವು ಬಹುಬೇಗ ಹರಡಿತು.

ರಾಮಾನುಜರ ಕಾಲದಿಂದಲೇ ಉಭಯ ವೇದಾಂತಿಗಳೆನಿಸಿದ್ದ ಅವರ ಶಿಷ್ಯರಲ್ಲಿ, ಎರಡು ಪ್ರಭೇದ ಅಥವಾ ಸಂಪ್ರದಾಯಗಳು ಬೆಳೆದು ಬರತೊಡಗಿದುವು. ರಾಮಾನುಜರ ಅಭಿಪ್ರಾಯ, ಮತ, ಶಾಸ್ತ್ರ, ವ್ಯಾಸಂಗ, ಇವುಗಳ ಬಗ್ಗೆ, ಹಿರಿಯ ಆಚಾರ್ಯರುಗಳಲ್ಲೇ ಭೇದ ಭಿನ್ನತೆಗಳು ಹೆಚ್ಚಾದುದೇ ಈ ವ್ಯತ್ಯಾಸಕ್ಕೆ ಕಾರಣ. ರಾಮಾನುಜರ ಪಾದಗಳನ್ನೇ ಆಶ್ರಯಿಸಿ, ಅವರ ಜ್ಞಾನ ಪುತ್ರರೆಂದು ಪ್ರಖ್ಯಾತರಾದ ತಿರುಕ್ಕುರಗೈಪ್ಪಿರಾನ್ ಪಿಳ್ಳಾನ್ ಮೂಲಕ ಎಂಗಳಾಳ್ವಾನ್, ನಡಾದೂರಾಳ್ವಾನ್, ನಡಾದೂರಮ್ಮಾಳ್, ಕಿಡಾಂಬಿ ಅಪ್ಪುಳ್ಳಾರ್, ವೇದಾಂತ ದೇಶಿಕರೇ ಆದಿಯಾಗಿ ಪ್ರವರ್ತಿತವಾದ ಪರಂಪರೆ ಒಂದು. ಈ ಆಚಾರ್ಯರು ಸಂಸ್ಕೃತ ವೇದ, ಶ್ರೀಭಾಷ್ಯ, ಪೂಜೆಯ ವೇಳೆ ಘಂಟಾನಾದ, ಇವುಗಳಿಗೆ ಪ್ರಾಮುಖ್ಯತೆ ನೀಡಿ, **ವಡಗಲೆ** ಸಂಪ್ರದಾಯದವರೆನಿಸಿಕೊಂಡರು ; ರಾಮಾನುಜರ ಅತ್ಯಂತ ಪ್ರಿಯಶಿಷ್ಯರಾದ ಕೂರತ್ತಾಳ್ವಾನ್, ಮುದಲಿಯಾಂಡಾನ್, ಎಂಬಾರ್, ಪರಾಶರಭಟ್ಟರ್, ನಂಜೀಯರ್, ನಂಪಿಳ್ಳೈ, ಪೆರಿಯವಾಚ್ಚಾನ್‌ಪಿಳ್ಳೈ, ವಡಕ್ಕುತ್ತಿರುವೀಧಿಪಿಳ್ಳೈ, ಪಿಳ್ಳೈ ಲೋಕಾಚಾರ್ಯ, ತಿರುವಾಯ್ಮೊಳಿಪಿಳ್ಳೈ, ಮಣವಾಳ ಮಾಮುನಿ ಇವರೇ ಆದಿಯಾಗಿ ಪ್ರವರ್ತಿತವಾದ ಪರಂಪರೆ ಇನ್ನೊಂದು. ಇವರೆಲ್ಲರೂ ಆಳ್ವಾರರ ತಮಿಳು ಪ್ರಬಂಧಕ್ಕೇ ಪ್ರಾಮುಖ್ಯತೆ ಕೊಟ್ಟು **ತೆಂಗಲೆ** ಸಂಪ್ರದಾಯದವರೆನಿಸಿಕೊಂಡರು.

ರಾಮಾನುಜರ ಕಾಲದಲ್ಲಿ ಸಂಸ್ಕೃತವೇದ, ತಮಿಳು ಪ್ರಬಂಧ ಎರಡಕ್ಕೂ ಸಮಾನತೆ, ಗೌರವಗಳಿದ್ದು, ಈಗಲೂ ದೇವಸ್ಥಾನಗಳಲ್ಲಿ ಎರಡರ ಪಾರಾಯಣ ನಡೆಯುತ್ತಿದೆ. ವೇದೋಪನಿಷತ್ತುಗಳ ಭಾವವನ್ನು, ಶ್ರೀಭಾಷ್ಯವು ಸಂಸ್ಕೃತದಲ್ಲೂ, ಪ್ರಬಂಧವು ತಮಿಳಿನಲ್ಲಿಯೂ ತಿಳಿಸಿಕೊಟ್ಟಿರುವುದರಿಂದ, ಎರಡರ ವಿಷಯ–ಭಾವನೆಗಳೂ ಒಂದೇ ಆಗಿದೆ. ಆದರೂ ದೇವರ ಉತ್ಸವ ಕಾಲದಲ್ಲಿ, ಮುಂದುಗಡೆಯಲ್ಲಿ ಪ್ರಬಂಧ ಹೇಳುವುದರಿಂದ ಅದು ಶ್ರೇಷ್ಠ, ಹಿಂದುಗಡೆಯಲ್ಲಿ ವೇದವನ್ನು ಹೇಳುವುದರಿಂದ ಅದು ಶ್ರೇಷ್ಠವಲ್ಲ, ಎಂದು ಕೆಲವರಿಗೆ ಅನಿಸಿತು.

ವಡಗಲೆ–ತೆಂಗಲೆ ಸಂಪ್ರದಾಯಗಳಲ್ಲಿ **ಹದಿನೆಂಟು ವ್ಯತ್ಯಾಸಗಳಿವೆ :**

1) ತಮಿಳು ಪಕ್ಷಪಾತಿಯಾದ ತೆಂಗಲೆಯವರು ಪ್ರಬಂಧವೇ ಶ್ರೇಷ್ಠ, ಮುಖ್ಯ ಎಂದು ಹೇಳಿ, ಸಂಸ್ಕೃತ ಕೃತಿಗಳಲ್ಲಿ ಶ್ರದ್ಧೆ ಇಡದೆ ಅವನ್ನು ಅಲಕ್ಷಿಸಿದರು; ಆದರೆ ವಡಗಲೆಯವರು ಎರಡೂ ಪ್ರಮಾಣವೆಂದು ಅಂಗೀಕರಿಸಿ, ಪ್ರಬಂಧಕ್ಕಿಂತಲೂ ಸಂಸ್ಕೃತ ಕೃತಿಗಳ ಅಧ್ಯಯನವೇ ಮುಖ್ಯವೆಂದರೂ, ಪ್ರಬಂಧವನ್ನು ಕಡೆಗಣಿಸಲಿಲ್ಲ.

2) ಲಕ್ಷ್ಮಿಗೆ ವಿಭುತ್ವವಿದೆ. ಶ್ರೀ ವಿಶಿಷ್ಟವಾದ ತತ್ತ್ವ ಒಂದೇ. ಅವಳು ಈಶ್ವರ ಕೋಟಿಯಲ್ಲಿ ಸೇರಿ, ಸೃಷ್ಟಿಸ್ಥಿತಿಲಯ ಕಾರ್ಯದಲ್ಲಿ, ಪಾಪವನ್ನು ನಾಶಮಾಡುವುದರಲ್ಲಿ, ಮೋಕ್ಷನೀಡುವುದರಲ್ಲಿ, ವಿಷ್ಣುವಿಗೆ ಸಮಾನಳು ಎಂಬುದು, ವಡಗಲೆಯವರ ಅಭಿಪ್ರಾಯ ; ಲಕ್ಷ್ಮಿಯು ಜೀವಕೋಟಿಯಲ್ಲಿ ಒಬ್ಬಳು, ಅಣುವೇ ಹೊರತು ವಿಭುವಲ್ಲ, ಅವಳು ವಿಷ್ಣುವಿನ ಸೇವಕಿ. ಜೀವಿಗಳಿಗೋಸ್ಕರ ಅವಳು ವಿಷ್ಣುವಿನೊಂದಿಗೆ ವಾದಿಸಿದರೂ, ಮೋಕ್ಷಕೊಡಲಾರಳು. ಆದುದರಿಂದ ನಾರಾಯಣನೇ ಮುಖ್ಯ ಎಂಬುದು ತೆಂಗಲೆಯವರ ಅಭಿಪ್ರಾಯ.

3) ಭಗವಂತನ ಕೃಪೆಯು, ಪೂರ್ಣವಾಗಿ, ನಿರ್ಹೇತುಕವಾಗಿ, ಪುರುಷಾರ್ಥವನ್ನು ಕೊಡುತ್ತದೆ ಎಂದರು ತೆಂಗಲೆಯವರು ; ಅವನು ಭಕ್ತಿ ಪ್ರಪತ್ತಿಗಳ ವ್ಯಾಜವನ್ನು ಅವಲಂಬಿಸಿಯೇ ದಯೆ ತೋರುತ್ತಾನೆ ಎಂದರು ವಡಗಲೆಯವರು.

4) ಭಕ್ತ, ಪ್ರಪನ್ನರಿಗೆ ಮೋಕ್ಷಾನುಭವದಲ್ಲಿ ಭೇದ ಉಂಟೆಂದು ತೆಂಗಲೆಯವರು ಹೇಳಿದರೆ, ಮುಕ್ತಿಯಲ್ಲಿ ತಾರತಮ್ಯವಿಲ್ಲವೆಂದು ವಡಗಲೆಯವರು ಹೇಳುತ್ತಾರೆ.

5) ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ, ಆಚಾರ್ಯಾಭಿಮಾನ, ಇವೆಲ್ಲ ಮೋಕ್ಷೋಪಾಯದ ಸ್ವತಂತ್ರ ಮಾರ್ಗಗಳೆಂದು ತೆಂಗಲೆಯವರು ಹೇಳಿದರೆ, ಕರ್ಮ, ಜ್ಞಾನಗಳು ಭಕ್ತಿಯೋಗದ ಅಂಗಗಳು, ಇವು ಮೂರೂ ಪ್ರಪತ್ತಿಗೆ ಪೂರಕವಾದವುಗಳು, ಆಚಾರ್ಯಾಭಿಮಾನವು ಪ್ರಪತ್ತಿಯ ಭೇದ ಎಂದು ವಡಗಲೆಯವರು ಹೇಳುತ್ತಾರೆ.

6) ಭಗವಂತನು ಪ್ರಪನ್ನರ ದೋಷಗಳನ್ನು ವಾತ್ಸಲ್ಯದಿಂದ ಸ್ವೀಕರಿಸುತ್ತಾನೆಂದು ತೆಂಗಲೆಯವರೂ, ಭಕ್ತರ ದೋಷಗಳನ್ನು ಪರಮಾತ್ಮನು ನೋಡುವುದಿಲ್ಲವೆಂದು ವಡಗಲೆಯವರೂ, ಹೇಳುತ್ತಾರೆ.

7) ಭಗವಂತನು ಭಕ್ತರ ದುಃಖದಲ್ಲಿ ತಾನು ದುಃಖಿಸಿ, ತನ್ನ ದಯೆಯನ್ನು ತೋರಿಸುತ್ತಾನೆಂದು ತೆಂಗಲೆಯವರ ಅಭಿಪ್ರಾಯವಾದರೆ, ದಯಾಮಯನಾದ ಭಗವಂತನು, ಭಕ್ತರ ದುಃಖವನ್ನು ಸಹಿಸಲಾರದವನಾದುದರಿಂದ, ದುಃಖದ ಕಾರಣವನ್ನು ನಿವಾರಿಸಲು ಆಶಿಸುತ್ತಾನೆನ್ನುವುದು ವಡಗಲೆಯವರ ಅಭಿಪ್ರಾಯ.

8) ಪಂಚಸಂಸ್ಕಾರದ ನಂತರ (ತಾಪ, ಪುಂಡ್ರ, ನಾಮ, ಮಂತ್ರ, ಯಾಗ) ಮೋಕ್ಷಸಾಧನೆಯಾಗಿ ಪ್ರಪತ್ತಿ ಸಂಸ್ಕಾರದ ಅವಶ್ಯಕತೆಯಿಲ್ಲ ಎಂದು ತೆಂಗಲೆಯವರು ಹೇಳಿದರೆ, ರಕ್ಷೆಯ ಅಪೇಕ್ಷೆಯನ್ನು ವ್ಯಕ್ತಪಡಿಸುವ ಪ್ರಪತ್ತಿ ಸಂಸ್ಕಾರವು, ಆಚಾರ್ಯರ ಮೂಲಕ ಆಗಬೇಕೆಂದು ವಡಗಲೆಯವರು ಹೇಳುತ್ತಾರೆ.

9) ಸರ್ವಧರ್ಮಪರಿತ್ಯಾಗಿಯಾಗಿ, ಭಕ್ತಿಯಲ್ಲಿ ವಿಶ್ವಾಸಸಮಾಂದ್ಯವುಳ್ಳವನು ಪ್ರಪತ್ತಿಗೆ ಅಧಿಕಾರಿ. ನಿತ್ಯನೈಮಿತ್ತಿಕ ಕರ್ಮಗಳು ಅವಶ್ಯ ಕರ್ತವ್ಯಗಳಲ್ಲವಾದುದ ರಿಂದ, ಪ್ರಪನ್ನನು ಅವುಗಳನ್ನು ತ್ಯಜಿಸಿದಾಗ ಮಾತ್ರ ಪ್ರಪತ್ತಿಯು ಲಭಿಸುತ್ತದೆ ಎಂದು ತೆಂಗಲೆಯವರು ಹೇಳುತ್ತಾರೆ ; ಜ್ಞಾನ ವಿರಕ್ತಿವುಳ್ಳವನು, ವಿಳಂಬವನ್ನು ಸಹಿಸುವವನು, ಭಕ್ತಿಗೆ ಅಧಿಕಾರಿ. ಆದರೆ ಅನನ್ಯ ಗತಿಯವ, ಅಕಿಂಚನ, ಅಜ್ಞಾನಿ, ದುರ್ಬಲ, ವಿಳಂಬ ಸಹಿಸದವ, ಪ್ರಪತ್ತಿಗೆ ಅಧಿಕಾರಿ. ಪ್ರಪತ್ತಿಗೆ ಯಾವ ಜಾತಿ ಯವನಾದರೂ ಅರ್ಹ. ಆದರೂ ವರ್ಣಾಶ್ರಮ ಧರ್ಮದ ನಿತ್ಯ ನೈಮಿತ್ತಿಕ ಕರ್ಮ ಗಳನ್ನು, ಕರ್ಮದ ಫಲತ್ಯಾಗನೊಂದಿಗೆ, ಮಾಡಬೇಕು ಎಂದು ವಡಗಲೆಯವರು ಹೇಳುತ್ತಾರೆ.

10) ಕೈಂಕರ್ಯಾನುಷ್ಠಾನ ಮುಖ್ಯವೆಂದು ತೆಂಗಲೆಯವರೂ, ಕರ್ಮಾನು ಷ್ಠಾನ ಮುಖ್ಯವೆಂದು ವಡಗಲೆಯವರೂ, ವಾದಿಸುತ್ತಾರೆ.

11) ನಾವು ಭಗವಂತನಿಗೆ ಶೇಷಭೂತರಾಗಿರುವುದರಿಂದ, ನಮಗೆ ಅವನ ಉಪಾ ಸನೆ ವಿಹಿತವಲ್ಲವೆಂದು ತೆಂಗಲೆಯವರೂ, ಉಪಾಸನೆ ವಿಹಿತವಾದುದೆಂದು ವಡಗಲೆ ಯವರೂ, ಅಭಿಪ್ರಾಯಪಡುತ್ತಾರೆ.

12) ಪ್ರಪನ್ನನಿಗೆ, ಅವನು ಯಾವ ಜಾತಿಯವನಾದರೂ, ದೇವರಂತೆ ಗೌರವ ಕೊಡಬೇಕೆಂದು ತೆಂಗಲೆಯವರು ಹೇಳಿದರೆ, ಪ್ರಪನ್ನನಾದರೂ ಜಾತಿ ಹೋಗದು ಎಂದು ವಡಗಲೆಯವರು ಹೇಳುತ್ತಾರೆ.

13) ಪ್ರಪನ್ನನು ಬುದ್ಧಿಪೂರ್ವಕವಾಗಿ ಪಾಪಮಾಡಿದರೂ, ಭಗವಂತನ ದಯೆಗೆ ಪಾತ್ರನಾಗಿರುವ ಕಾರಣ, ಪ್ರಾಯಶ್ಚಿತ್ತದ ಅವಶ್ಯಕತೆಯಿಲ್ಲ ಎನ್ನುವುದು ತೆಂಗಲೆಯವರ ನಂಬಿಕೆ ; ಬುದ್ಧಿಪೂರ್ವಕವಾಗಿ ಪಾಪ ಸಂಭವಿಸಿದರೆ, ತನ್ನ ಶಕ್ತಿಗನು ಸಾರವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇಬೇಕು. ಏಕೆಂದರೆ ಮುಂದಾಗುವ ಪಾಪಗಳಿಗೆ ಮೊದಲೇ ಪ್ರಪತ್ತಿಮಾಡಲು ಸಾಧ್ಯವಿಲ್ಲ ಎಂಬುದು ವಡಗಲೆಯವರ ನಂಬಿಕೆ.

14) ಭಗವಂತನ ಕೃಪೆಯು ತಾನಾಗಿ ಒದಗುವುದರಿಂದ, ಅದಕ್ಕಾಗಿ ಭಕ್ತನಿಗೆ ಯಾವ ಯೋಗ್ಯತೆ ಅಥವಾ ಪ್ರಯತ್ನದ ಆವಶ್ಯಕತೆಯಿಲ್ಲ ಎಂದು ನಮ್ಮಾಳ್ವಾರರು ಹೇಳಿದ್ದಾರೆ. ಆದರೆ ಭಕ್ತನು ಒಳ್ಳೆಯ ಕರ್ಮ ಮಾಡಿದಾಗಲೇ ಭಗವತ್ಕೃಪೆ ಒದಗು ವುದು, ಸತ್ಕರ್ಮದ ಆವಶ್ಯಕತೆ ಇಲ್ಲದಿದ್ದಲ್ಲಿ ಮಾನವರೆಲ್ಲರೂ ಒಟ್ಟಿಗೇ ಮೋಕ್ಷ ಹೊಂದುತ್ತಿದ್ದರು, ಆಗ ಭೂಮಿಯ ಮೇಲೆ ಪಾಪಿಗಳೇ ಇರುತ್ತಿರಲಿಲ್ಲ, ಎಂದು ರಾಮಾನುಜರು ಹಾಗೂ ಮತ್ತಿತರ ಆಚಾರ್ಯರು ಹೇಳಿದ್ದರು. ಆದರೂ ಸಹ ಮಾರ್ಜಾಲ ಕಿಶೋರ ನ್ಯಾಯವು ಅಂದರೆ ಭಗವದನುಗ್ರಹಕ್ಕೆ ಭಕ್ತನ ಪ್ರಯತ್ನದ

ಅವಶ್ಯಕತೆಯಿಲ್ಲ, ಆಚಾರ್ಯರಲ್ಲಿ ಪ್ರಪತ್ತಿ ಮಾಡಿದರೆ ಸಾಕು, ಎನ್ನುವುದು ತೆಂಗಲೆಯವರಿಗೆ ಸರಿ ಎನಿಸಿತು ; ಮರ್ಕಟ ಕಿಶೋರ ನ್ಯಾಯವು ಅಂದರೆ ಕರ್ಮಾನುಷ್ಠಾನ ಮತ್ತು ಕರ್ತವ್ಯಗಳ ನಿರ್ವಹಣೆಯಿಂದ, ಪ್ರಪತ್ತಿ ಅಥವಾ ನ್ಯಾಸವನ್ನು ಮಾಡುವುದು ಅಂದರೆ ಭಗವದನುಗ್ರಹಕ್ಕೆ ಭಕ್ತನ ಪ್ರಯತ್ನ ಅವಶ್ಯಕ, ಎನ್ನುವುದು ವಡಗಲೆಯವರಿಗೆ ಸರಿ ಎನಿಸಿತು.

15) ಆತ್ಮನು ಮೋಕ್ಷ ಹೊಂದಿದರೆ, ಅದು ಭಗವಂತನಿಗೆ ಲಾಭವೆಂದು ತೆಂಗಲೆಯವರೂ, ಅದು ಆತ್ಮನಿಗೇ ಲಾಭವೆಂದು ವಡಗಲೆಯವರೂ ಹೇಳುತ್ತಾರೆ.

16) ಭಗವಂತನು ಇಚ್ಛಿಸಿದರೆ ನಿತ್ಯರು, ಮುಕ್ತರು, ಸೃಷ್ಟಿ ಸ್ಥಿತಿ ಲಯ ಕಾರ್ಯಗಳಲ್ಲಿ ಭಾಗವಹಿಸಬಹುದೆಂದು ತೆಂಗಲೆಯವರು ಹೇಳಿದರೆ, ಅವರಿಗೆ ಈ ಅಧಿಕಾರವಿಲ್ಲ ಎಂದು ವಡಗಲೆಯವರು ಹೇಳುತ್ತಾರೆ.

17) ಲಿಂಗ, ಜಾತಿ ಭೇದವಿಲ್ಲದೆ ಎಲ್ಲರಿಗೂ ತಿರುಮಂತ್ರವನ್ನು, ಪ್ರಣವ ದೊಂದಿಗೆ ಉಪದೇಶ ಮಾಡಬಹುದೆಂದು ತೆಂಗಲೆಯವರ ಅಭಿಪ್ರಾಯ ; ಪ್ರಣವ ದೊಂದಿಗೆ ಕೆಲವರಿಗೂ, ಪ್ರಣವ ವಿಲ್ಲದೆ ಕೆಲವರಿಗೂ, ಉಪದೇಶಿಸಬೇಕೆಂಬುದು ವಡಗಲೆಯವರ ಅಭಿಪ್ರಾಯ.

18) ಮನೆಯಲ್ಲಿ ದೇವರ ಪೂಜೆ ಮಾಡುವಾಗ, ವಡಗಲೆಯವರಿಗೆ ಸಂಸ್ಕೃತ ಹೆಚ್ಚಾಗಿದ್ದು ಘಂಟಾನಾದವಿರಬೇಕು ; ತೆಂಗಲೆಯವರಿಗೆ ತಮಿಳು ಹೆಚ್ಚಾಗಿದ್ದು ಘಂಟೆಯ ಅವಶ್ಯಕತೆಯಿರುವುದಿಲ್ಲ.

19) ನಾಸಾದಿ (ನಾಸಾಗ್ರೇ) ಕೇಶಪರ್ಯಂತಂ ಪುಂಡ್ರಃ—ಎಂಬುದನ್ನು ಬೇರೆ ಬೇರೆ ರೀತಿಯಲ್ಲಿ ಅರ್ಥಮಾಡಿಕೊಂಡುದರಿಂದ, ವಡಗಲೆಯವರು U ರೀತಿಯಲ್ಲೂ, ತೆಂಗಲೆಯವರು Y ರೀತಿಯಲ್ಲೂ, ಹಣೆಯ ಮೇಲೆ ನಾಮವನ್ನು ಧರಿಸುತ್ತಾರೆ. (ದೇವಮೂರ್ತಿಯ ಮೇಲೆ ಯಾವ ರೀತಿಯ ನಾಮವಿರಬೇಕೆಂಬುದನ್ನು ತೀರ್ಮಾನಿಸಲು, ವರಿಷ್ಠ ನ್ಯಾಯಾಲಯಕ್ಕೂ ಹೋಗಿ ಬಂದಿದ್ದಾರೆ)

20) ಶ್ರಾದ್ಧ ಕಾಲದಲ್ಲಿ ಸಿದ್ಧಪಡಿಸಿದ ಭೋಜನ ವಸ್ತುಗಳನ್ನು, ತೆಂಗಲೆಯವರು ಮೊದಲು ದೇವರಿಗೆ, ಆಮೇಲೆ ನಿತ್ಯರು, ಆಚಾರ್ಯರಿಗೆ ಅರ್ಪಿಸಿ, ಕೊನೆಯಲ್ಲಿ ಬ್ರಾಹ್ಮಣರಿಗೆ ಅರ್ಪಿಸುತ್ತಾರೆ ; ವಡಗಲೆಯವರು ಅದನ್ನು ಮೊದಲು ದೇವರಿಗೆ, ಆಮೇಲೆ ಬ್ರಾಹ್ಮರಿಗೆ ಅರ್ಪಿಸುತ್ತಾರೆ ; ಶ್ರೀಪಾದ ತೀರ್ಥವನ್ನು ಹೊಂದಲು, ತೆಂಗಲೆಯವರಿಗೆ ನಿಯಮವಿಲ್ಲ, ವಡಗಲೆಯವರಿಗೆ ಕೆಲವು ನಿಯಮಗಳುಂಟು.

21) ಸೀರೆಯನ್ನು ಉಡುವಾಗ, ವಡಗಲೆ ಹೆಂಗಸರ ಸೆರಗು ಎಡಭುಜದ ಮೇಲೆ ಬರುತ್ತವೆ ; ತೆಂಗಲೆಯ ಹೆಂಗಸರಲ್ಲಿ ಅದು ಬಲಭುಜದ ಮೇಲೆ ಬರುತ್ತದೆ.

22) ವಿಧವೆಯರಿಗೆ ಕೇಶಮುಂಡನ ಉಂಟೆಂದು ವಡಗಲೆಯುವರೂ, ಇಲ್ಲ ವೆಂದು ತೆಂಗಲೆಯುವರೂ ತಿಳಿದು ಅನುಷ್ಠಾನ ಮಾಡುತ್ತಾರೆ.

23) ದೇವರಿಗೆ ಅಥವಾ ಹಿರಿಯರಿಗೆ, ತೆಂಗಲೆಯುವರು ಒಂದೇಸಲ ನಮಸ್ಕಾರ ಮಾಡುತ್ತಾರೆ. ಈ ನಮಸ್ಕಾರವು ದೊಡ್ಡವರು–ಚಿಕ್ಕವರಲ್ಲಿ ಪರಸ್ಪರ ಉಂಟು ; ವಡಗಲೆಯುವರು ಎರಡು ಅಥವಾ ಹೆಚ್ಚು ಸಲ ನಮಸ್ಕರಿಸುತ್ತಾರೆ, ದೊಡ್ಡವರು ಚಿಕ್ಕವರಿಗೆ ನಮಸ್ಕರಿಸುವುದಿಲ್ಲ.

ಮುಖ್ಯವಾಗಿ ಉತ್ತರ ಭಾರತದ ಆರ್ಯರ ಭಾಷೆಯೆನಿಸಿದ ಸಂಸ್ಕೃತದಲ್ಲಿರುವ ವೇದಶಾಸ್ತ್ರಗಳು ಮುಖ್ಯ, ವೈದಿಕ ಕರ್ಮ ಮತ್ತು ಉಪಾಸನೆಗಳೇ ಉತ್ತಮ ಸಾಧನ, ಎಂದು ವಡಗಲೆಯುವರು ನಂಬಿದರು ; ದಕ್ಷಿಣ ಭಾರತದ ದ್ರಾವಿಡರ ಭಾಷೆ ಎನಿಸಿದ ತಮಿಳಿನಲ್ಲಿರುವ ನಾಲಾಯಿರ ದಿವ್ಯ ಪ್ರಬಂಧವು ಮುಖ್ಯ, ಆಗಮುಗಳಿಗನು ಸಾರವಾದ ದೇವತಾರ್ಚನೆಯೇ ವಿಹಿತವಾದುದು, ಪ್ರಪತ್ತಿಯೇ ಮುಖ್ಯ ಸಾಧನ, ಎಂದು ತೆಂಗಲೆಯುವರು ನಂಬಿದರು. ಹೀಗೆ ಆಳ್ವಾರುಗಳು ನಿರೂಪಿಸಿದ ಪ್ರಪತ್ತಿ, ಲಕ್ಷ್ಮಿಯ ಸ್ಥಾನ, ಕರ್ಮ ಸಿದ್ಧಾಂತ, ಮುಕ್ತಿಯನಂತರ ಜೀವಾತ್ಮರುಗಳ ಸ್ಥಾನ ಮಾನ, ಮುಂತಾದ ಹದಿನೆಂಟು ಅಂಶಗಳ ಬಗ್ಗೆ ಉಂಟಾದ ಮೂಲಭೂತ ವ್ಯತ್ಯಾಸವೇ, ಶ್ರೀವೈಷ್ಣವ ಮತವು ಈರೀತಿ ಎರಡು ಕವಲಾಗಿ ಒಡೆಯಲು ಕಾರಣವಾಯಿತು. ಈ ಅಷ್ಟಾದಶ ಭೇದಗಳು ಈ ಶ್ಲೋಕದಲ್ಲಿ ಸಂಗ್ರಹೀತವಾಗಿವೆ.

"ಭೇದಃಸ್ವಾಮಿಕೃಪಾ ಫಲಾನ್ಯಗತಿಷು ಶ್ರೀವ್ಯಾಪ್ತ್ಯುಪಾಯತ್ವಯೋಃ
ತದ್ವಾತ್ಸಲ್ಯದಯಾನಿರುಕ್ತಿ ವಚಸೋ ನ್ಯಾಸೇಚ ತತ್ಕರ್ತರಿ ||
ಧರ್ಮತ್ಯಾಗ ವಿರೋಧಯೋಃ ಸ್ವವಿಹಿತೇ ನ್ಯಾಸಾಂಗ ಹೇತುತ್ವಯೋಃ
ಪ್ರಾಯಶ್ಚಿತ್ತ ವಿಧೌತದೀಯ ಭಜನೇಽಣುವ್ಯಾಪ್ತಿ ಕೈವಲ್ಯಯೋಃ ||"

ಒಟ್ಟಿನಲ್ಲಿ ವಡಗಲೆ–ತೆಂಗಲೆ ಸಂಪ್ರದಾಯವೆಂಬುದು ಸರಿಯಲ್ಲ. ಈ ಸಂಪ್ರದಾಯ ಅಥವಾ ಪಕ್ಷವು, ಕೆಲವು ಜನರ ಹುಚ್ಚಿನಿಂದ ಆಗಿದೆಯೇ ಹೊರತು, ಸಿದ್ಧಾಂತ ಗ್ರಂಥಗಳ ಅಧ್ಯಯನದಿಂದ ಆದುದಲ್ಲ. ಕೆಲವು ಭಿನ್ನಾಭಿಪ್ರಾಯಗಳಿದ್ದರೂ, ಎರಡು ಪಂಗಡದವರೂ ರಾಮಾನುಜರ ಶ್ರೀಭಾಷ್ಯ, ನಮ್ಮಾಳ್ವಾರರ ಪ್ರಬಂಧ ಎರಡಕ್ಕೂ ಸಮಾನ ಗೌರವ ಕೊಡುತ್ತೇವೆಂದು ಹೇಳಿ, ತಮ್ಮನ್ನು ಉಭಯ ವೇದಾಂತಿಗಳೆಂದು ಕರೆದುಕೊಳ್ಳಲು ಹೆಮ್ಮೆ ಪಡುತ್ತಾರೆ. ಶರೀರಾತ್ಮ ಭಾವವೆಂಬ ಪ್ರಧಾನ ಪ್ರತಿತಂತ್ರ ಸಿದ್ಧಾಂತದಲ್ಲಿ, ಇಬ್ಬರಲ್ಲಿಯೂ ಪೂರ್ಣವಾದ ಒಮ್ಮತವಿದೆ. ಎರಡೂ ಶಾಖೆಗಳಲ್ಲಿ ಪ್ರವರ್ತಿತವಾದ ಸಿದ್ಧಾಂತವೂ ಒಂದೇ ರೀತಿಯಾಗಿದೆ. ರಾಮಾನುಜರ ದಿವ್ಯಾಜ್ಞೆಯನ್ನು ಶಿರಸಾವಹಿಸಿ, ಎರಡೂ ಪರಂಪರೆಗಳಲ್ಲಿನ ಆಚಾರ್ಯರು, ಶ್ರೀಭಾಷ್ಯ ಮತ್ತು ಭಗವದ್ವಿಷಯ ಗ್ರಂಥಗಳೆರಡನ್ನೂ ಉಪದೇಶ ಮೂಲಕವಾಗಿಯೂ, ವ್ಯಾಖ್ಯಾನ ಗ್ರಂಥಳಗ ನಿರ್ಮಾಣ ಮಾಡುವುದರ ಮೂಲಕವಾಗಿಯೂ, ಲೋಕದಲ್ಲಿ ಹರಡಿದ್ದಾರೆ.

ಶ್ರೀಭಾಷ್ಯದ ವ್ಯಾಖ್ಯಾನವು ಶ್ರುತಪ್ರಕಾಶಿಕೆಯಲ್ಲಿಯೂ, ತಿರುವಾಯ್ಮೊಳಿ ವ್ಯಾಖ್ಯಾನವು ಈಡು ಮುಪ್ಪತ್ತಾರಾಯಿರಪ್ಪಡಿಯಲ್ಲಿಯೂ, ಚೆನ್ನಾಗಿ ಬಂದಿದೆ. ಈ ಎರಡು ಗ್ರಂಥಗಳ ಯೋಜನೆಯಲ್ಲಿ ಭೇದವಿದ್ದರೂ, ತಾತ್ಪರ್ಯದಲ್ಲಿ ಭೇದವಿಲ್ಲ, ಎಂಬುದು ಮತ್ಸರವಿಲ್ಲದೆ ಅಧ್ಯಯನ ಮಾಡಿದರೆ ತಿಳಿದು ಬರುತ್ತದೆ.

ನಾಥಮುನಿಗಳ ವಂಶದ ವಡಗಲೆ ಎನ್ನುವ ಪಂಗಡಕ್ಕೆ ಸೇರಿದ ಪಿಳ್ಳಾನ್ ರವರೇ, ತಿರುವಾಯ್ಮೊಳಿಗೆ ಆರಾಯಿರಪ್ಪಡಿ ಎಂಬ ವ್ಯಾಖ್ಯಾನವನ್ನು ಬರೆದ ಮೊದಲಿಗರು. ಹಾಗೆಯೇ ವಡಗಲೆಯ ವೇದಾಂತ ದೇಶಿಕರು ತಮಿಳು ಪ್ರಬಂಧಕ್ಕೆ ಮಾಡಿದಷ್ಟು ಸೇವೆಯನ್ನು, ಯಾವ ತೆಂಗಲೆ ಆಚಾರ್ಯರೂ ಮಾಡಿರುವುದಿಲ್ಲ. ವೇದ–ಪ್ರಬಂಧಗಳು ಶ್ರೀವೈಷ್ಣವರ ಎರಡು ಕಣ್ಣುಗಳು. ತೆಂಗಲೆ ಆಚಾರ್ಯರುಗಳಾದ ಕೂರೇಶ, ಎಂಬಾರ್, ಪರಾಶರಭಟ್ಟ, ನಂಜೀಯರ್, ನಂಪಿಳ್ಳೈ, ಪೆರಿಯವಾಚ್ಚಾನ್ ಪಿಳ್ಳೈ, ಪಿಳ್ಳೈ ಲೋಕಾಚಾರ್ಯ, ಮಣವಾಳ ಮಾಮುನಿ, ಎಲ್ಲರಿಗೂ ತಮಿಳಿನೊಂದಿಗೆ ಸಂಸ್ಕೃತವೂ ಚೆನ್ನಾಗಿ ತಿಳಿದಿದ್ದಿತು. ಅವರು ಸಂಸ್ಕೃತದಲ್ಲಿಯೂ ಗ್ರಂಥಗಳನ್ನು ಬರೆದಿದ್ದಾರೆ. ಮಣಿಪ್ರವಾಳವನ್ನೇ (ಸಂಸ್ಕೃತ–ತಮಿಳು ಮಿಶ್ರ) ಅನುಸರಿಸಿದ್ದಾರೆ. ಆಳ್ವಾರರುಗಳು ತಮಿಳಿನಲ್ಲಿ ಮಾತ್ರ ಹಾಡಿ ರಚಿಸಿದರೂ, ತಮಿಳಿಗೆ ಪ್ರಾಮುಖ್ಯತೆ ಕೊಟ್ಟ ಆಚಾರ್ಯರುಗಳಾದ ನಾಥಮುನಿ, ಯಾಮುನಮುನಿ ಮತ್ತು ರಾಮಾನುಜ ಮುನಿ ಎಂಬ ಮುನಿತ್ರಯರೂ, ಗ್ರಂಥ ರಚಿಸಿರುವುದು ಕೇವಲ ಸಂಸ್ಕೃತದಲ್ಲಿಯೇ ಹೊರತು ತಮಿಳಿನಲ್ಲಿ ಅಲ್ಲ. ಪೂರ್ವಾಚಾರ್ಯರು ತಮ್ಮ ಪ್ರವಚನ ಮತ್ತು ಕೃತಿಗಳಲ್ಲಿ, ಎರಡೂ ಪಂಗಡಗಳ ಆಚಾರ್ಯರ ಜೀವನ ಮತ್ತು ಕೃತಿಗಳಿಂದ ಉದಾಹರಿಸುತ್ತಿದ್ದರು. ಇವೆಲ್ಲವನ್ನೂ ಜ್ಞಾಪಕದಲ್ಲಿಟ್ಟುಕೊಂಡರೆ, ಈ ವಡಗಲೆ-ತೆಂಗಲೆ ಕಚ್ಚಾಟವು ಸ್ವಲ್ಪಮಟ್ಟಿಗಾದರೂ ಕಮ್ಮಿಯಾಗಬಹುದು. ಇದಕ್ಕೆ ನಾಯಕರು ಪ್ರಯತ್ನಿಸಬೇಕು.

ಮುದಲಿಯಾಂಡಾನ್ ವಂಶದ ಕಂದಾಡೆಯವರು ಮತ್ತು ಅನಂದಾಂ ಪಿಳ್ಳೈಯವರು, ತೆಂಗಲೆ ಸಂಪ್ರದಾಯಕ್ಕೆ ಸೇರಿದವರು. ಮೊದಲು ಪಿಳ್ಳೈ ಲೋಕಾಚಾರ್ಯರು ಮುಖ್ಯರೆನಿಸಿದ್ದು, ಈಗ ಮಣವಾಳ ಮಾಮುನಿಗಳು ಮುಖ್ಯರಾಗಿರುವ, ತೆಂಗಲೆ ಸಂಪ್ರದಾಯದ ಪ್ರಮುಖ ಮಠಗಳು,ಕಂಚಿ ಮತ್ತು ಮೇಲುಕೋಟೆಗಳಲ್ಲಿವೆ; ತಾತಾಚಾರ್ಯರು, ನಲ್ಲಾನ್ ಚಕ್ರವರ್ತಿಗಳು, ಆಂಡವನ್ ಆಶ್ರಮ, ಅಹೋಬಿಲಮಠ, ಪರಕಾಲ ಮಠ, ಇವರೆಲ್ಲ ವಡಗಲೆ ಸಂಪ್ರದಾಯಕ್ಕೆ ಸೇರಿದವರು. ವೇದಾಂತ ದೇಶಿಕರು ಮುಖ್ಯರಾಗಿರುವ ವಡಗಲೆ ಸಂಪ್ರದಾಯಕ್ಕೆ ಸೇರಿದ ಮಠಗಳು, ಶ್ರೀರಂಗ, ಅಹೋಬಿಲ, ಮೈಸೂರುಗಳಲ್ಲಿವೆ. ರಾಮಾನುಜರ ಕಾಲದಿಂದಲೇ ಬಂದ ಸೋಮಯಾಜಿಯಾಂಡಾನ್ ಪರಂಪರೆಯು,ತೆಂಗಲೆ-ವಡಗಲೆ ಎರಡೂ ಸಂಪ್ರದಾಯಕ್ಕೆ ಸೇರಿದೆ.

ಹೀಗೆ ತೆಂಗಲೆ ಜೀಯರ್ ಮತ್ತು ವಡಗಲೆ ದೇಶಿಕ ಎರಡೂ ಮುಖ್ಯ ಸಂಪ್ರದಾಯಗಳು, ರಾಮಾನುಜ ಸಿದ್ಧಾಂತದ ಎರಡು ಕಣ್ಣುಗಳೋಪಾದಿಯಲ್ಲಿ ಬೆಳೆದು ಬಂದಿವೆ. ಈ ಮಠಗಳಲ್ಲಿನ ಸಂನ್ಯಾಸಿ ಆಚಾರ್ಯರುಗಳು, ರಾಮಾನುಜ ಮತವನ್ನು ರಕ್ಷಿಸಿ, ಬೆಳೆಸಿ, ಪ್ರಚಾರಮಾಡುತ್ತಿದ್ದಾರೆ. ಈ ಪೀಠಗಳಿಗೆ ಸೇರಿದ ಆಚಾರ್ಯ ವಂಶದ ಅನೇಕರು, ನಿಷ್ಠಾವಂತ ಗೃಹಸ್ಥರು, ಸ್ವಯಮಾಚಾರ್ಯ ಪುರುಷರು ಎನಿಸಿಕೊಂಡು, ಪ್ರಾಚೀನಕಾಲದ ತತ್ತ್ವೋಪದೇಶ, ಗ್ರಂಥ ನಿರ್ಮಾಣ, ಸಮಾಶ್ರಯಣ,ಪ್ರವೃತ್ತಿಗಳನ್ನು ಮಾಡುತ್ತ, ರಾಮಾನುಜ ಸಿದ್ಧಾಂತದ ಸಂವರ್ಧನೆಗೆ ಹಾಗೂ ಶ್ರೀವೈಷ್ಣವ ಸಮಾಜದ ಉದ್ಧಾರಕ್ಕೆ ಶ್ರಮಿಸುತ್ತಿದ್ದಾರೆ.

ಸರಿಯಾದ ನಿರ್ವಾಹಕರ ಅಭಾವ ಮತ್ತು ಮುಹಮ್ಮದೀಯರ ಧಾಳಿಗಳಿಂದ, ಕೆಲವು ಪೀಠಗಳು ಲುಪ್ತವಾಗಿಹೋದುವು. ಆಚಾರ್ಯರುಗಳು, ವಿವಿಧ ಪ್ರಾಂತಗಳಲ್ಲಿ ಹೋಗಿ ನೆಲಸಿ, ಪರಸ್ಪರ ಸಂಪರ್ಕವನ್ನು ಕಳೆದುಕೊಂಡರು. ಇದರ ಪರಿಣಾಮವಾಗಿ ಸಂಪ್ರದಾಯಭೇದ ಬಹಳವಾಗಿವೆ. ಇದನ್ನು ಸರಿಪಡಿಸಿ, ಸಾರವನ್ನು ಹೊಂದಿ, ಜಳ್ಳನ್ನು ತಳ್ಳಿಹಾಕಿ, ಶ್ರೀವೈಷ್ಣವ ಮತವು ಒಂದಾಗಿ ಅಭಿವೃದ್ಧಿ ಹೊಂದುವಂತೆ ಮಾಡಬೇಕಾದುದು, ಎಲ್ಲ ಶ್ರೀವೈಷ್ಣವರ ಆದ್ಯ ಕರ್ತವ್ಯವಾಗಿದೆ. ಅದಕ್ಕಾಗಿ ಮುಖ್ಯವಾದ ಪರಂಪರಗಳಲ್ಲಿನ, ಮುಖ್ಯ ಆಚಾರ್ಯರ, ಜೀವನ-ಬೋಧನೆ-ಕೃತಿಗಳ ಪರಿಚಯವನ್ನು ಮಾಡಿಕೊಳ್ಳುವುದು ವಿಹಿತವಾದುದು.

---

# ಅಧ್ಯಾಯ ೧೧
# ರಾಮಾನುಜರ ಶಿಷ್ಯ ಪರಂಪರೆ

## I. ರಹಸ್ಯಾರ್ಥ ಪರಂಪರೆ

### 1. ಕಿಡಾಂಬಿಯಾಚ್ಚಾನ್ (1057)

ಇವರಿಗೆ ಮಾಹಾನಸಿಕ, ಆತ್ರೇಯ ಪ್ರಣತಾರ್ತಿಹರ, ಎಂಬ ಹೆಸರೂ ಇದ್ದಿತು.

ಇವರು ಪೆರಿಯನಂಬಿಗಳ ಆಶಯದಂತೆ, ರಾಮಾನುಜರು ಭಿಕ್ಷೆಗೆ ಹೋಗುವುದನ್ನು ತಡೆದು, ಅವರಿಗಾಗಿ ಅಡಿಗೆಯ ಕೆಲಸವನ್ನು ನಿರ್ವಹಿಸಿದ ಅವರ ಮುಖ್ಯ ಶಿಷ್ಯರು. ರಾಮಾನುಜರಿಂದ ಕಲಿತ ರಹಸ್ಯಾರ್ಥ ಪ್ರತಿಪಾದನೆಯಲ್ಲಿ, ರಸವತ್ತಾಗಿ ಕಾಲಕ್ಷೇಪ ಮಾಡುವುದರಲ್ಲಿ ಹಾಗೂ ಶ್ರೀಭಾಷ್ಯಾದಿಗಳಲ್ಲಿ ನಿಷ್ಣಾತರಾಗಿದ್ದರು. ಇವರ ವಿದ್ವತ್ಪರಿಪೂರ್ಣವಾದ ವಂಶವು, ರಾಮಾನುಜ ಪಂಥಕ್ಕೆ ಉತ್ತಮ ಆಚಾರ್ಯರನ್ನು ಒದಗಿಸಿದೆ.

ಇವರು ರಾಮಾನುಜರ ಅಪೇಕ್ಷೆಯಂತೆ, ಮಧುರೆಯ ಬಳಿಯ ಕೃಷ್ಣಾಚಲ ಅಥವಾ ತಿರುಮಾಲಿರುಂಶೋಲೈಗೆ ಹೋಗಿ, ಅಲ್ಲಿನ ಸುಂದರಬಾಹು ದೇವರಿಗೆ ನೂರು ಕೊಡ ಬೆಣ್ಣೆ ಮತ್ತು ನೂರು ಕೊಡ ಕ್ಷೀರಾನ್ನವನ್ನು ಅರ್ಪಿಸಿ, ಗೋದಾದೇವಿಯ ಹರಕೆಯನ್ನು ಪೂರ್ಣಗೊಳಿಸಿದರು. ಇದರ ಫಲವಾಗಿ ರಾಮಾನುಜರಿಗೆ ಗೋದಾಗ್ರಜ, ಗೋದಾಭೀಷ್ಟಪ್ರಪೂರಕ ಎಂಬ ಬಿರುದುಗಳು ಬರುವಂತೆ ಮಾಡಿದರು.

### 2. ಕಿಡಾಂಬಿ ರಾಮಾನುಜ ಅಪ್ಪಿಳ್ಳಾರ್ (1108)

ಇವರೂ, ತಂದೆ ಕಿಡಾಂಬಿಯಾಚ್ಚಾನ್‌ರಂತೆಯೇ, ಸಕಲ ಶಾಸ್ತ್ರಗಳನ್ನು ಅಧಿಕರಿಸಿ, ರಾಮಾನುಜರ ದಿವ್ಯಾಜ್ಞೆಯನ್ನು ಅಭಿವೃದ್ಧಿಗೊಳಿಸುತ್ತ ವಿರಾಜಿಸಿದರು.

### 3. ಕಿಡಾಂಬಿ ಶ್ರೀರಂಗರಾಜ ಅಪ್ಪುಳ್ಳಾರ್ (1163)

ಕಿಡಾಂಬಿ ರಾಮಾನುಜ ಅಪ್ಪಿಳ್ಳಾರ್‌ರವರ ಮಗನಾದ ಇವರಿಗೆ ಪದ್ಮನಾಭ ಎಂದೂ ಹೆಸರಿದ್ದಿತು. ಎಂಗಳಾಳ್ವಾರರ ಸಮಕಾಲೀನರಾಗಿದ್ದ ಇವರು, ತಂದೆ–ತಾತರಂತೆ ಪ್ರಕಾಶಿಸುತ್ತ, ಶ್ರೀಭಾಷ್ಯಾದಿ ಗ್ರಂಥ ಮತ್ತು ರಹಸ್ಯಾರ್ಥಗಳ ಕಾಲಕ್ಷೇಪ ನಡೆಸುತ್ತ, ಸಾತ್ವಿಕ ಜೀವನವನ್ನು ನಡೆಸಿದರು.

ಇವರ ಮಗನೇ ಪ್ರಸಿದ್ಧರಾದ ಕಿಡಾಂಬಿ ರಾಮಾನುಜ ಅಪ್ಪುಳ್ಳಾರ್ ಅಥವಾ ಆತ್ರೇಯ ರಾಮಾನುಜ. ಇವರ ಮಗಳೇ ಪ್ರಸಿದ್ಧ ವೇದಾಂತ ದೇಶಿಕರ ತಾಯಿಯಾದ ತೋತಾರಮ್ಮ.

# II. ಶ್ರೀ ಭಾಷ್ಯ ಪರಂಪರೆ

## 1. ತಿರುಕ್ಕುರುಗೈಪ್ಪಿರಾನ್ ಪಿಳ್ಳಾನ್ (1061–1161)

ತುಲಾಯಾಂ ವೇಂಕಟಾದ್ರೌತು ಪೂರ್ವಾಷಾಢಾ ಸಮುದ್ಭವಂ ।
ಕುರುಕೇಶಂ ಪ್ರಚಂಡಾಂಶಂ ವಂದೇ ಶ್ರೀಶೈಲಪೂರ್ಣಜಂ ॥ ೧ ॥

ತಾತಾಚಾರ್ಯ ಪರಂಪರೆಯ ಶ್ರೇಷ್ಠ ಆಚಾರ್ಯರು. ಯಾಮುನರ ಅಂತಿಮ ಇಚ್ಛೆಗಳಲ್ಲಿ ಒಂದಾದ, ನಮ್ಮಾಳ್ವಾರರ ಹೆಸರನ್ನು ಶಾಶ್ವತವಾಗಿ ಉಳಿಸುವ ಸಲುವಾಗಿ, ಶ್ರೀಶೈಲಪೂರ್ಣರ ಮಗನಾದ ಇವರಿಗೆ ರಾಮಾನುಜರು ಕುರುಕೇಶ ಎಂಬ ಹೆಸರನ್ನು ಇಟ್ಟರು. ಇವರು, ತಂದೆಯ ಇಚ್ಛೆಯಂತೆ ರಾಮಾನುಜರ ಶಿಷ್ಯರಾದರು.

ರಾಮಾನುಜರಲ್ಲಿ ತುಂಬಾ ಭಕ್ತಿಶ್ರದ್ಧೆಗಳಿದ್ದ, ಧರ್ಮಗ್ರಂಥಗಳಲ್ಲಿ ಅಪಾರ ಪಾಂಡಿತ್ಯವಿದ್ದ, ಇವರು, ರಾಮಾನುಜರ ನಂತರ ದರ್ಶನ ಸ್ಥಾಪಕ, ಸಿಂಹಾಸನಾಧಿಪತಿಗಳಲ್ಲಿ ಮೊದಲಿಗರಾಗಿ ಬಾಳಿ ಬೆಳಗಿದ ಮಹಾತ್ಮ. ರಾಮಾನುಜರ ಜ್ಞಾನಪುತ್ರರೆನಿಸಿಕೊಂಡ ಭಾಗ್ಯಶಾಲಿ.

ಕಾಶ್ಮೀರದ ಶಾರದಾ ದೇವಿಯಿಂದ ಶ್ರೀಭಾಷ್ಯಕಾರರೆನಿಸಿಕೊಂಡ ರಾಮಾನುಜರಿಗೆ, ಆಕೆಯಿಂದ ದೊರೆತ ಶ್ರೀ ಲಕ್ಷ್ಮೀಹಯವದನ ಮಂಗಳ ಮೂರ್ತಿಯು, ಇವರಿಗೆ ದೊರಕಿತು. ಅದು ಇವರಿಂದ ಪುಂಡರೀಕಾಕ್ಷರಿಗೆ ದೊರಕಿತು.

ತಿರುಮಲೈನಲ್ಲಿ ಹುಟ್ಟಿದ ಇವರು, ಸಕಲ ವೇದಾಂತ ಶಾಸ್ತ್ರ ನಿಷ್ಣಾತ, ದ್ರಾವಿಡ ವೇದ ಪಾರಂಗತ, ಆಚಾರ್ಯನಿಷ್ಠ ಆಗಿದ್ದು, ರಾಮಾನುಜರ ಆಜ್ಞೆಯಂತೆ, ಶ್ರೀಭಾಷ್ಯ ಮತ್ತು ಭಗವದ್ವಿಷಯಗಳೆರಡರಲ್ಲಿಯೂ ಕಾಲಕ್ಷೇಪ ನಡೆಸಿ, ಉಭಯ ವೇದಾಂತ ಸಿಂಹಾಸನಾಧೀಶ್ವರ ಎನಿಸಿದರು.

ರಾಮಾನುಜರ ಆಜ್ಞೆಯಂತೆ, ಶಠಗೋಪರ ಸಹಸ್ರಗೀತೆ ಅಥವಾ ತಿರುವಾಯ್ಮೊಳಿಗೆ **ಆರಾಯಿರಪ್ಪಡಿ** ಎಂಬ ಮಣಿಪ್ರವಾಳ ರೂಪವಾದ 6000 ಪದ್ಯಗಳ ವ್ಯಾಖ್ಯಾನವನ್ನು 1122ರ ವೇಳೆಗೆ ಬರೆದರು. ಇದರಲ್ಲಿ ಶ್ರೀಭಾಷ್ಯದಲ್ಲಿರುವ ಭಾವನೆಗಳೆಲ್ಲವೂ ಅಡಗಿದೆಯೆಂದು ಅನೇಕರು ಹೊಗಳಿದ್ದಾರೆ. ಇದನ್ನು ರಾಮಾನುಜರೇ ಮೆಚ್ಚಿ ಭಗವದ್ವಿಷಯ ಎಂದು ಕರೆದರು. ಇವರು ದಿವ್ಯ ಪ್ರಬಂಧಗಳಿಗೆ ವ್ಯಾಖ್ಯಾನ ಬರೆಯುವ ಕೆಲಸವನ್ನು ಪ್ರಾರಂಭಿಸಿ, ಆಮೂಲಕ ಇತರ ಆಚಾರ್ಯರು ವಿವಿಧ ರೀತಿಯಲ್ಲಿ ವ್ಯಾಖ್ಯಾನ ರಚಿಸಲು ಮಾರ್ಗದರ್ಶನ ನೀಡಿದ್ದಾರೆ.

## 2. ಎಂಗಳಾಳ್ವಾನ್ (1106)

ತಿರುವಳ್ಳುರೈನಲ್ಲಿ ಜನಿಸಿದ ಇವರಿಗೆ ವಿಷ್ಣುಚಿತ್ತ ಎಂಬ ಹೆಸರೂ ಇದ್ದಿತು. ಕುರುಕೇಶರ ಶಿಷ್ಯರು.ವಿಷ್ಣು ಪುರಾಣದ ಮೇಲೆ "ಶ್ರೀ ವಿಷ್ಣು ಚಿತ್ತೀಯಂ" ಎಂಬ ಉತ್ತಮ

ವ್ಯಾಖ್ಯಾನವನ್ನು ರಚಿಸಿದ್ದಾರೆ. ಜೊತೆಗೆ ಪ್ರಮೇಯ ಸಂಗ್ರಹ, ಸಂಗತಿಮಾಲಾ ಎಂಬೆರಡು ಕೃತಿಗಳನ್ನು ರಚಿಸಿದ್ದಾರೆ. ರಾಮಾನುಜರ ಗದ್ಯತ್ರಯದಲ್ಲಿರುವ ಪ್ರಪತ್ತಿ ತತ್ತ್ವವನ್ನು, ಇವರು ತಮ್ಮ ಗದ್ಯವ್ಯಾಖ್ಯಾನದಲ್ಲಿ ಚೆನ್ನಾಗಿ ವಿವರಿಸಿದ್ದಾರೆ.

## 3. ನಡಾದೂರಾಳ್ವಾನ್

ವಿಷ್ಣುಚಿತ್ತರ ಶಿಷ್ಯರಾದ ಇವರಿಗೆ ವರದ ವಿಷ್ಣುಮಿಶ್ರ ಎಂಬ ಹೆಸರೂ ಇದ್ದಿತು. ರಾಮಾನುಜರ ಸೋದರಿ ಕಮಲಾದೇವಿಯ ಮಗನಾದ ಇವರು, ಒಂದು ಪೀಠದ ಸಿಂಹಾಸನಾಧಿಪತಿಯಾಗಿದ್ದರು. ವಿಶಿಷ್ಟಾದ್ವೈತದ ತರ್ಕ ಮತ್ತು ನ್ಯಾಯ ಸಿದ್ಧಾಂತ ಗಳನ್ನು ಮಂಡಿಸಿ, ರಾಮಾನುಜ ದರ್ಶನವನ್ನು ಅಭಿವೃದ್ಧಿಪಡಿಸಿದ ಗೌರವಾನ್ವಿತ ವಿದ್ವಾಂಸರಲ್ಲಿ ಒಬ್ಬರು. ನ್ಯಾಯದಲ್ಲಿ ಬರುವ ಪ್ರತ್ಯಕ್ಷ, ಅನುಮಾನ, ವಾದ, ಜಲ್ಪ, ಜಾತಿ ಎಲ್ಲವೂ ಚೆನ್ನಾಗಿ ಪ್ರತಿಪಾದಿತವಾಗಿರುವ ಇವರ 'ಮಾನಯಾಥಾತ್ಮ್ಯ ನಿರ್ಣಯ'ವು ಶ್ರೇಷ್ಠ ಕೃತಿ. ಇವರ ಸಮಕಾಲೀನರಾಗಿದ್ದ ಸುದರ್ಶನ ಸೂರಿಗಳ ಶ್ರುತ ಪ್ರಕಾಶಿಕೆಯ ಮೇಲೆ, ಇವರು ಬರೆದಿರುವ ಟೀಕೆಯೂ ಇನ್ನೊಂದು ಮುಖ್ಯವಾದ ಕೃತಿ.

## 4. ನಡಾದೂರಮ್ಮಾಳ್ (1165–1275)

ಚೈತ್ರೇ ಚಿತ್ರೋದ್ಭವಾಂ ಕಾಂಚ್ಯಾ ದೇವರಾಜ ಗುರೋಸ್ಸುತಂ ||
ಸುಭದ್ರಾಂಶಂ ಗುರೂತ್ತಂಸಂ ವಾತ್ಸ್ಯಂವರದಮಾಶ್ರಯೇ || ೧ ||

ನಡಾದೂರಾಳ್ವಾರರ ಮೊಮ್ಮಗನೂ, ದೇವರಾಜಪ್ಪೆರುಮಾಳರ ಮಗನೂ ಆದ ಇವರಿಗೆ, ವಾತ್ಸ್ಯ ವರದಾಚಾರ್ಯರೆಂದು ಹೆಸರು. ಕಂಚಿಯಲ್ಲಿಹುಟ್ಟಿದ ಇವರು ವೇದ ವೇದಾಂತಾದಿ ಸಕಲ ಶಾಸ್ತ್ರಗಳಲ್ಲಿ ಪ್ರವೀಣರಾಗಿದ್ದರು. ಕಿಡಾಂಬಿ ರಾಮಾನುಜ ಅಪ್ಪಿ ಳ್ಳಾರ್, ಸುದರ್ಶನಾಚಾರ್ಯ, ವಡಕ್ಕುತ್ತಿರುವೀಧಿಪಿಳ್ಳೈ ಈ ಮೂವರೂ ಇವರ ಮುಖ್ಯ ಶಿಷ್ಯರು. ದೇವರನ್ನು ತಾಯಿಯಂತೆ ಕಾಪಾಡಿ ಅಮ್ಮಾಳ್ ಎನಿಸಿಕೊಂಡರು.

ಕಂಚಿಯ ವರದರಾಜಸ್ವಾಮಿ ದೇವಾಲಯದ ಸಭಾಂಗಣದಲ್ಲಿ, ಇವರು ರಾಮಾನುಜ ದರ್ಶನದಮೇಲೆ ಪ್ರವಚನಮಾಡುತ್ತಿರುವಾಗ, ಬಾಲಕ ವೇದಾಂತ ದೇಶಿಕರು ತಮ್ಮ ಸೋದರಮಾವನೊಂದಿಗೆ ಅಲ್ಲಿಗೆ ಬಂದು ಆಲಿಸುತ್ತಿದ್ದರು. ತನ್ನ ಅದ್ಭುತ ಮೇಧಾಶಕ್ತಿಯನ್ನು ಒಮ್ಮೆ ವ್ಯಕ್ತಪಡಿಸಿದ ಬಾಲಕ ವೆಂಕಟನಾಥನ ತೇಜೋ ವಿಶೇಷವನ್ನು ಕಂಡು ತುಂಬಾ ಸಂತೋಷಗೊಂಡು

"ಉತ್ಪ್ರೇಕ್ಷ್ಯತೇ ಬುಧಜನೈರುಪಪತ್ತಿಭೂಮ್ನಾ
ಘಂಟಾ ಹರೇಃ ಸಮಜನಿಷ್ಟಜಡಾತ್ಮ ನೀತಿ |
ಪ್ರತಿಷ್ಠಾಪಿತ ವೇದಾಂತಃ ಪ್ರತಿಕ್ಷಿಪ್ತ ಬಹಿರ್ಮತಃ
ಭೂಯಾಸ್ತ್ರೈವಿದ್ಯ ಮಾನ್ಯಸ್ತ್ವಂ ಭೂರಿ ಕಲ್ಯಾಣ ಭಾಜನಂ ||"

ಅಂವರೆ ವಿಶಿಷ್ಟಾದ್ವೈತ ವೇದಾಂತ ಮತವನ್ನು ಪ್ರತಿಷ್ಠಾಪಿಸಿ, ಪ್ರಚಾರಮಾಡಿ ಎಲ್ಲರಿಂದಲೂ ಸನ್ಮಾನಿತನಾಗು ಎಂದು ಆಶೀರ್ವದಿಸಿ, ತಮ್ಮ ವಾಕ್ಸಿದ್ಧಿ ಫಲವನ್ನು ಪೂರ್ಣವಾಗಿ ಲೋಕಕ್ಕೆ ತೋರಿಸಿ ಕೊಟ್ಟಿದ್ದಾರೆ.

ಶ್ರೀಭಾಷ್ಯದ ಮೇಲೆ ಅದ್ಭುತವಾದ ವಿವರಣೆಯನ್ನು ನೀಡುತ್ತಿದ್ದ ಇವರನ್ನು 'ರಾಮಾನುಜ ಸಿದ್ಧಾಂತದ ಅತಿ ಶ್ರೇಷ್ಠ ಮೊದಲ ಪ್ರತಿಪಾದಕ' ಎಂದು ಇವರ ಶಿಷ್ಯ ಸುದರ್ಶನಾಚಾರ್ಯರು ಈ ಶ್ಲೋಕದಲ್ಲಿ ಕೊಂಡಾಡಿದ್ದಾರೆ.

'ವಂದೇಹಂ ವರದಾರ್ಯಂತಂ ವತ್ಸಾಭಿಜನ ಭೂಷಣಂ ।
ಭಾಷ್ಯಾಮೃತ ಪ್ರದಾನಸ್ಯ ಸಂಜೀವಯತಿ ಮಾಮಪಿ ॥'

ಇವರನ್ನು ಆದರ್ಶ ಗುರುವೆಂದು ಗೌರವಿಸಿ, ವೇದಾಂತ ದೇಶಿಕರೂ ಇವರಿಗೆ ತಮ್ಮ ಕೃತಿಗಳಲ್ಲಿ ಕೃತಜ್ಞತೆಗಳನ್ನು ಅರ್ಪಿಸಿದ್ದಾರೆ.

ತತ್ತ್ವಸಾರ, ತತ್ತ್ವ ನಿರ್ಣಯ, ಆರಾಧನಕಾರಿಕಾ, ಪರತ್ವಾದಿಪಂಚಕ, ಪರಮಾರ್ಥಸ್ತುತಿ, ಪ್ರಪನ್ನ ಪಾರಿಜಾತ, ಪ್ರಮೇಯಮಾಲಾ, ಸಾರಾರ್ಥ ಚತುಷ್ಟಯ, ಇವು ವಾತ್ಸ್ಯವರದಾಚಾರ್ಯರ ಕೃತಿಗಳು.

## 5. ಸುದರ್ಶನಾಚಾರ್ಯ (1200–1275)

ಕೂರೇಶರ ಎರಡನೆಯ ಮಗ ಶ್ರೀರಾಮ ಪಿಳ್ಳೈ ಅಥವಾ ವೇದವ್ಯಾಸಭಟ್ಟರ ಮೊಮ್ಮಗನೂ, ನಡುವಿಲ್ ತಿರುವೀಧಿಪಿಳ್ಳೈ ಅಥವಾ ದಿಗ್ವಿಜಯಭಟ್ಟರ ಮಗನೂ ಆದ ಇವರು ಪ್ರಸಿದ್ಧ ವಿದ್ವಾಂಸರು. ಇವರಿಗೆ ಸುದರ್ಶನ ಭಟ್ಟ, ಸುದರ್ಶನ ಸೂರಿ, ವೇದಾಚಾರ್ಯ ಭಟ್ಟ, ವ್ಯಾಸಾರ್ಯ, ಶ್ರುತಪ್ರಕಾಶಿಕಾಚಾರ್ಯ ಎಂಬ ಹೆಸರುಗಳಿದ್ದುವು. ಇವರು ವಾತ್ಸ್ಯವರದಾಚಾರ್ಯರ ಶಿಷ್ಯರು ಹಾಗೂ ವೇದಾಂತ ದೇಶಿಕರ ಹಿರಿಯ ಸಮಕಾಲೀನರು ಆಗಿದ್ದು, ಶ್ರೀರಂಗದ ಸಿಂಹಾಸನಾಧಿಪತಿಗಳಾಗಿದ್ದರು.

ರಾಮಾನುಜರ ಶ್ರೀಭಾಷ್ಯಕ್ಕೆ, ಕಾಲಕ್ಷೇಪ ಸಮಯದಲ್ಲಿ ಗುರುಗಳಾದ ವಾತ್ಸ್ಯ ವರದಾಚಾರ್ಯರು ಹೇಳಿದ ಅರ್ಥ ವಿಶೇಷಗಳನ್ನು ಸಂಗ್ರಹಿಸಿ, ಗುರುಗಳ ಕಟಾಕ್ಷಕ್ಕೆ ಪಾತ್ರರಾಗಿ, ಇವರು ಬರೆದ ಶ್ರುತಪ್ರಕಾಶಿಕೆ ಎಂಬ ವ್ಯಾಖ್ಯಾನ ರೂಪವಾದ ವಿವರಣ ಗ್ರಂಥವು, ವಿಶಿಷ್ಟಾದ್ವೈತದ ಆಧಾರ ಗ್ರಂಥ. ಶ್ರುತಪ್ರದೀಪಿಕಾ, ತಾತ್ಪರ್ಯ ದೀಪಿಕಾ, ಶರಣಾಗತಿಗದ್ಯಭಾಷ್ಯ, ಸುಬಾಲೋಪನಿಷದ್ವ್ಯಾಖ್ಯಾನ, ಸಂಧ್ಯಾವಂದನ ಭಾಷ್ಯ, ಕ್ಷಮಾಷೋಡಶಿ–ಇವೂ ಇವರ ಇತರ ಕೃತಿಗಳು.

ಇವರ ಶ್ರುತಪ್ರಕಾಶಿಕೆ ಎಂಬ ಗ್ರಂಥ ಮತ್ತು ಇಬ್ಬರು ಮಕ್ಕಳನ್ನು, ಮಹಮ್ಮದೀಯರ ಧಾಳಿಯಿಂದ ರಕ್ಷಿಸಿದವರು ವೇದಾಂತದೇಶಿಕರು.

## 6. ಕಿಡಾಂಬಿ ಅಪ್ಪುಳ್ಳಾರ್ (1220–1295)

ಚೈತ್ರಾರ್ದ್ರಾ ಸಂಭವಂ ಕಾಂಚ್ಯಾಂ ರಂಗರಾಜ ಗುರೋಃಸ್ಸುತಂ ।
ಸುಪ್ರತಿಷ್ಠಾಂಶಮಾತ್ರೇಯಂ ರಾಮಾನುಜ ಗುರುಂಭಜೇ ॥ ೧ ॥

ಶ್ರೀ ರಂಗರಾಜ ಅಪ್ಪುಳ್ಳಾರ್‌ರವರ ಮಗನಾದ ಇವರಿಗೆ ಆತ್ರೇಯ ರಾಮಾನುಜ ಎಂಬ ಹೆಸರೂ ಇದ್ದಿತು.

ಇವರು ರಾಮಾನುಜರ ನೇರ ಶಿಷ್ಯರಾದ ಕಿಡಾಂಬಿಯಾಚ್ಚಾನ್ ಪರಂಪರೆಯಲ್ಲಿ ಬಂದಿದ್ದ ರಹಸ್ಯಾರ್ಥಗಳನ್ನು ತಮ್ಮ ತಂದೆಯಬಳಿಯಲ್ಲಿಯೂ, ತಿರುಕ್ಕುರುಗೈಪ್ಪಿರಾನ್ ಪಿಳ್ಳಾನ್ ಪರಂಪರೆಯಲ್ಲಿ ಬಂದಿದ್ದ ಶ್ರೀಭಾಷ್ಯಾದಿ ಭಗವದ್ವಿಷಯಗಳನ್ನು ವಾತ್ಸ್ಯ ವರದಾಚಾರ್ಯರಲ್ಲಿಯೂ ಕಲಿತರು. ಇದರಿಂದ ಇದುವರೆಗೆ ಇಬ್ಭಾಗವಾಗಿದ್ದ ಎರಡು ಆಚಾರ್ಯ ಪರಂಪರೆಗಳಿಂದ ಹರಿದು ಬಂದ ಆಚಾರ್ಯ ರಾಮಾನುಜರ ಪೂರ್ಣ ಕಟಾಕ್ಷವು ಇವರಿಗೆ ಲಭ್ಯವಾಯಿತು.

ಲೋಕೋತ್ತರವಾದ ಸೂಕ್ಷ್ಮಬುದ್ಧಿಯುಳ್ಳವರೂ, ಸಕಲ ಶಾಸ್ತ್ರ ನಿಷ್ಣಾತರೂ, ನಿರತಿಶಯ ವಾತ್ಸಲ್ಯಪೂರ್ಣರೂ, ಶ್ರೇಷ್ಠ ವಿದ್ವಾಂಸರೂ ಆಗಿದ್ದ ಇವರು, ತಮ್ಮ ಪಾಂಡಿತ್ಯ ಪ್ರೌಢಿಮೆಯಿಂದ ವೇದಾಂತ ಗೋಷ್ಠಿಗೆ ಚೂಡಾಮಣಿಗಳೆನಿಸಿ, ಸದಾಚಾರ್ಯ ಧುರೀಣರಾಗಿ ಬಾಳಿ ಬೆಳಗಿದರು. ಇವರಿಗೆ ಪ್ರಣತಾರ್ತಿಹರ, ವೇದಾಂತೋದಯನಾಚಾರ್ಯ, ಮಾಹಾನಸಾಚಾರ್ಯ, ವಾದಿಹಂಸಾಂಬುವಾಹಾಚಾರ್ಯ, ಎಂಬ ಬಿರುದುಗಳಿದ್ದುವು.

ವೇದಾಂತ ಮತ್ತು ಮೀಮಾಂಸಾ ದರ್ಶನದಲ್ಲಿ ಉತ್ತಮ ಪಂಡಿತರಾದ ಇವರ ಕೃತಿ ನ್ಯಾಯ ಕುಲಿಶವು, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅತಿ ಮುಖ್ಯವಾದ ಆಧಾರ ಗ್ರಂಥ. ದಿವ್ಯಸೂರಿಪ್ರಭಾವದೀಪಿಕಾ, ಸರ್ವದರ್ಶನ ಶಿರೋಮಣಿ, ಮೋಕ್ಷಸಿದ್ಧಿ– ಇವರ ಇತರ ಕೃತಿಗಳು.

ತಮ್ಮ ಗುರುಗಳಾದ ನಡಾದೂರಮ್ಮಾಳ್‌ರವರ ಆದೇಶದಂತೆ, ತಮ್ಮ ಸೋದರಿಯ ಮಗ ವೇದಾಂತ ದೇಶಿಕರಿಗೆ, ತಮ್ಮ ಜ್ಞಾನಾನುಭವಗಳನ್ನೆಲ್ಲಾ ಹೇಳಿ ಕೊಟ್ಟು ಅವರು ಪ್ರಸಿದ್ಧಿಗೆ ಬರಲು ಕಾರಣರಾದರು.

## 7. ವರದ ನಾರಾಯಣ ಭಟ್ಟಾರಕ

ಇವರು ವರದ ವಿಷ್ಣುಮಿಶ್ರರ ಕಿರಿಯ ಸಮಕಾಲೀನರು. ವಿಶಿಷ್ಟಾದ್ವೈತದ ಶ್ರೇಷ್ಠ ಬರಹಗಾರರು. ಶ್ರೀಭಾಷ್ಯದ ವಿವರಣೆಯನ್ನು ನೀಡುವ, ವೇದಾಂತ ನ್ಯಾಯ ಸುದರ್ಶನ, ಪ್ರಜ್ಞಾ ಪರಿತ್ರಾಣ ಇವರ ಮುಖ್ಯ ಕೃತಿಗಳು. ವಕುಳ ಭೃತ್ಯಕಿಂಕರ

ಎಂದು ಕರೆದುಕೊಂಡಿರುವ ಇವರ ಅಭಿಪ್ರಾಯಗಳು ಆಧಾರಭೂತವೆಂದು ವೇದಾಂತ ದೇಶಿಕರು ಒಪ್ಪಿಕೊಂಡಿದ್ದಾರೆ.

## 8. ನಾರಾಯಣಾರ್ಯ

ಮೀಮಾಂಸಾ ಸೂತ್ರ ವಿವರಣ, ನೀತಿಮಾಲಾ, ಗೀತಾಭಾಷ್ಯಗಳನ್ನು ಬರೆದಿರುವ ಇವರ ಪ್ರಭಾವವೂ ವೇದಾಂತ ದೇಶಿಕರ ಮೇಲೆ ಆಗಿದೆ.

## 9. ಸೇನೇಶ್ವರಾಚಾರ್ಯ

ಇವರು ವಿಶಿಷ್ಟಾದ್ವೈತದ ಅತಿ ಶ್ರೇಷ್ಠ ಆಚಾರ್ಯರಲ್ಲಿ ಒಬ್ಬರು. ಬ್ರಹ್ಮಸೂತ್ರದ ಮೇಲಣ ಭಾಷ್ಯವನ್ನು ಕುರಿತು ರಚಿಸಿರುವ ಇವರ ಶಾರೀರಕ ನ್ಯಾಯ ಕಲಾಪ ಸಂಗ್ರಹವು, ಸುದರ್ಶನಾಚಾರ್ಯರ ಶ್ರುತಪ್ರಕಾಶಿಕೆ, ವರದ ನಾರಾಯಣ ಭಟ್ಟಾರಕರ ವೇದಾಂತ ನ್ಯಾಯ ಸುದರ್ಶನ, ಇವೆರಡಕ್ಕಿಂತಲೂ ಉತ್ತಮವಾಗಿದೆ ಎಂಬುದು ಕೆಲವರ ಅಭಿಪ್ರಾಯ.

## 10. ವೇದಾಂತ ದೇಶಿಕ (1268–1369)

ನಭಸ್ಯಮಾಸಿಶ್ರೋಣಾಯಾ ಮನಂತಾರ್ಯ ಗುರೂದ್ಭವಂ ।
ಶ್ರೀ ವೇಂಕಟೇಶ ಘಂಟಾಂಶಂ ವೇದಾಂತ ಗುರುಮಾಶ್ರಯೇ ॥ ೧ ॥
ಶ್ರೀಮಾನ್ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯವರ್ಯೋಮೇ ಸನ್ನಿಧತ್ತಾಂ ಸದಾಹೃದಿ ॥ ೨ ॥
ಕವಿತಾರ್ಕಿಕ ಸಿಂಹಾಯ ಕಲ್ಯಾಣ ಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತ ಗುರವೇ ನಮಃ ॥ ೩ ॥

"ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ" ಎಂಬ ಉಕ್ತಿಗನುಸಾರವಾಗಿ, ನಾಥಮುನಿ, ಯಾಮುನಮುನಿ, ರಾಮಾನುಜಮುನಿ ಎಂಬ ಮುನಿತ್ರಯರ ವಿಶಿಷ್ಟಾದ್ವೈತ ಸಿದ್ಧಾಂತದ ರಕ್ಷಣೆ, ವ್ಯವಸ್ಥೆ, ಪ್ರವಚನ, ಪ್ರಚಾರಗಳಿಗಾಗಿ, ತಮ್ಮ ಜೀವನವನ್ನೇ ಮುಡುಪಾಗಿಟ್ಟ ಮಹಾತ್ಮರಿವರು.

ಕಂಚಿಯ ಬಳಿಯ ತೂಪ್ಪಿಲ್ ಕುಲತಿಲಕರೆನಿಸಿದ, ಅನಂತ ಸೋಮಯಾಜಿಗಳ ಮಗ ಪುಂಡರೀಕಾಕ್ಷರ ಮಗ ಅನಂತಸೂರಿಗಳು ಇವರ ತಂದೆ. ತಂದೆ, ತಾತ

ಇಬ್ಬರೂ ಸಿಂಹಾಸನಾಧಿಪತಿಗಳಾಗಿದ್ದರು. ತಾಯಿ ತೋತಾರಮ್ಮ, ಆತ್ರೇಯ ರಾಮಾನುಜರ ಸೋದರಿ. ಇಂತಹ ಶ್ರೇಷ್ಠ ವಂಶದಲ್ಲಿ, ತಿರುಪತಿ ದೇವಾಲಯದ ಘಂಟೆಯ ಅವತಾರವೆನಿಸಿದ ವೆಂಕಟನಾಥ ಅಥವಾ ತೂಪ್ಪಿಲ್ ಪಿಳ್ಳೈಯವರು. ವೇದಾಂತದೇಶಿಕ, ನಿಗಮಾಂತ ಮಹಾದೇಶಿಕ ಎಂದೇ ಪ್ರಖ್ಯಾತರಾಗಿದ್ದಾರೆ. ಸರ್ವ ತಂತ್ರ ಸ್ವತಂತ್ರ, ಕವಿತಾರ್ಕಿಕಸಿಂಹ, ವೇದಾಂತಾಚಾರ್ಯ ಎಂಬ ಬಿರುದುಗಳು ಆ ಕಾಲದಲ್ಲಿ ಇವರಿಗೆ ಮಾತ್ರ ಮೀಸಲಾಗಿದ್ದುವು.

ದೇವರಲ್ಲಿ ಭಕ್ತಿ, ಜ್ಞಾನದಲ್ಲಿ ಆಸಕ್ತಿ, ಅಹಂಕಾರವಿಲ್ಲದ ಪ್ರೀತಿಯ ಹೃದಯ, ಹಣ, ಗೌರವ, ಅಧಿಕಾರಗಳಲ್ಲಿ ನಿರಾಸಕ್ತಿ, ಹಮ್ಮು, ಬಿಮ್ಮು ಇಲ್ಲದ ಕರ್ತವ್ಯ ನಿಷ್ಠೆ, ಗುರಿ ಸಾಧಿಸುವುದರಲ್ಲಿ ಏಕಾಗ್ರತೆ, ಕ್ಷಮಾಗುಣ, ಗುರುಹಿರಿಯರಲ್ಲಿ ವಿಧೇಯತೆ, ಮಿತ್ರ-ಶತ್ರು, ಮಾನ-ಅವಮಾನ, ನೋವು–ನಲಿವು, ಬಡತನ–ಸಿರಿತನ ಎಂಬೀ ದ್ವಂದ್ವಗಳಲ್ಲಿ ಸಮಾಧಾನಚಿತ್ತತೆ–ಇವೆಲ್ಲ ಇವರಿಗೆ ವಂಶಪಾರಂಪರ್ಯವಾಗಿ ಬಂದ ಸದ್ಗುಣಗಳು.

ಇವರ ಹಿರಿಯ ಸಮಕಾಲೀನರಾಗಿದ್ದ ವಾತ್ಸ್ಯ ವರದಾಚಾರ್ಯ, ಸುದರ್ಶನಾಚಾರ್ಯ, ವಡಕ್ಕುತ್ತಿರುವೀಧಿಪಿಳ್ಳೈ ಈ ಮೂವರು ಪ್ರಸಿದ್ಧ ಆಚಾರ್ಯರೂ, ಇವರ ಪ್ರತಿಭೆಯನ್ನು ಗುರುತಿಸಿ, ಮೆಚ್ಚುಗೆಯನ್ನು ಸೂಚಿಸಿ, ಆಶೀರ್ವದಿಸಿದ್ದರು.

ಸೋದರಮಾವ ಆತ್ರೇಯ ರಾಮಾನುಜರೇ ಇವರ ಮೊದಲ ಗುರು. ಎರಡೂ ಪರಂಪರೆಗಳಿಂದ ಬಂದ ಜ್ಞಾನಾನುಭವಗಳನ್ನು, ಇತರ ಸಾಮಾನ್ಯ ಶಾಸ್ತ್ರಗಳೊಂದಿಗೆ ಕಲಿಸಿ, ಇವರು ಉಭಯ ವೇದಾಂತ ಪ್ರವರ್ತನಾಚಾರ್ಯರಾಗಲು ನೆರವಾದರು.

ಅದ್ಭುತ ಜ್ಞಾಪಕಶಕ್ತಿ, ತೀವ್ರ ವಿಮರ್ಶಕಬುದ್ಧಿ, ಆಳ ಹಾಗೂ ವಿಸ್ತಾರವಾದ ಜ್ಞಾನ, ಮೇರೆ ಇಲ್ಲದ ಕವಿತಾ ಸಾಮರ್ಥ್ಯ, ಅತ್ಯುನ್ನತ ಮಟ್ಟದ ಕ್ರಿಯಾಶಕ್ತಿ, ಶ್ರೇಷ್ಠ ತಾರ್ಕಿಕ ಬುದ್ಧಿ, ಶಾಸ್ತ್ರವಾದದಲ್ಲಿ ತೀವ್ರ ಆಸಕ್ತಿ, ಶಾಸ್ತ್ರಗಳ ವ್ಯಾಖ್ಯಾನದಲ್ಲಿ ಮೂಲಗಾಮಿಶಕ್ತಿ, ಇದ್ದ ಇವರು, ತಮ್ಮ ಇಪ್ಪತ್ತನೆಯ ವರ್ಷದ ವೇಳೆಗೆ ವೇದ, ವೇದಾಂಗ, ತರ್ಕ, ವ್ಯಾಕರಣ, ದರ್ಶನ, ಸ್ಮೃತಿ, ಪುರಾಣ, ಶ್ರೀಭಾಷ್ಯಾದಿ ಸಂಪ್ರದಾಯ ಗ್ರಂಥಗಳಲ್ಲಿ, ಅತಿಶಯವಾದ ಪಾಂಡಿತ್ಯವನ್ನು ಗಳಿಸಿದ್ದರು. ಸಂಸ್ಕೃತ ಹಾಗೂ ತಮಿಳು ಭಾಷೆಗಳಲ್ಲಿದ್ದ ಪೂರ್ವಾಚಾರ್ಯರ ಕೃತಿಗಳನ್ನೆಲ್ಲ ಓದಿ ಅರ್ಥಮಾಡಿಕೊಂಡಿದ್ದರು.

ಗರುಡಮಂತ್ರ, ಹಯಗ್ರೀವ ಮಂತ್ರಗಳಿಂದ, ಶ್ರೀಲಕ್ಷ್ಮೀಹಯಗ್ರೀವ ಸ್ವಾಮಿಯನ್ನು ಒಲಿಸಿಕೊಂಡರು. ರಾಮಾನುಜರಿಂದ ಪಿಳ್ಳಾನ್‌ರವರಿಗೆ ಬಂದ ಲಕ್ಷ್ಮೀಹಯವದನನ ದಿವ್ಯ ಮಂಗಳಮೂರ್ತಿ, ಇವರಿಗೆ ಇವರ ತಾತನ ಮೂಲಕ ಲಭಿಸಿತು. ಇದರ ಫಲವಾಗಿ ಇವರು ಸರ್ವವಿದ್ಯಾಪ್ರವೀಣರಾದರೆಂದು ಪ್ರತೀತಿ.

ಯಾತ್ರೆ ಹೋಗಿ, ದಿವ್ಯಕ್ಷೇತ್ರಗಳು ಹಾಗೂ ಅಲ್ಲಿನ ದೇವತಾಮೂರ್ತಿಗಳನ್ನು ಸಂದರ್ಶಿಸಿ ಬಂದು, ಎಲ್ಲ ದೇಶ, ಕಾಲ, ಜನರಿಗೆ ಅನುಕೂಲಿಸುವ ನೂರಾರು ಸ್ತೋತ್ರಗಳನ್ನು ರಚಿಸಿದರು. ತತ್ತ್ವ, ಶಾಸ್ತ್ರ, ರಹಸ್ಯ, ಪ್ರಬಂಧ, ಕಾವ್ಯ, ನಾಟಕಗಳನ್ನೂ, ವಿವಿಧ ರೀತಿಯ ಜನರಿಗಾಗಿ ರಚಿಸಿದರು.

ತತ್ತ್ವಟೀಕಾ, ಅಧಿಕರಣ ಸಾರಾವಳಿ, ತತ್ತ್ವಮುಕ್ತಾ ಕಲಾಪ, ನ್ಯಾಯ ಪರಿಶುದ್ಧಿ, ನ್ಯಾಯಸಿದ್ಧಾಂಜನ, ತಾತ್ಪರ್ಯಚಂದ್ರಿಕಾ, ಈಶಾವಾಸ್ಯಭಾಷ್ಯ, ಶತ ದೂಷಣಿ, ಸೇಶ್ವರಮೀಮಾಂಸ, ಸ್ತೋತ್ರರತ್ನಭಾಷ್ಯ, ದ್ರಮಿಡೋಪನಿಷತ್ ತಾತ್ಪರ್ಯ ರತ್ನಾವಳಿ, ಯಾದವಾಭ್ಯುದಯ, ಹಂಸಸಂಸೇಶ, ಪಾದುಕಾಸಹಸ್ರ, ಸಂಕಲ್ಪ ಸೂರ್ಯೋದಯ, ರಹಸ್ಯತ್ರಯಸಾರ, ಸಂಪ್ರದಾಯ ಪರಿಶುದ್ಧಿ, ಪಾಂಚ ರಾತ್ರ ರಕ್ಷಾ, ನಿಕ್ಷೇಪರಕ್ಷಾ, ಸಚ್ಚರಿತ್ರರಕ್ಷೆ, ನ್ಯಾಸವಿಂಶತಿ, ನ್ಯಾಸದಶಕ, ನ್ಯಾಸ ತಿಲಕ, ಶರಣಾಗತಿ ಪಂಚಾಶತ್, ದಯಾಶತಕ, ದಶಾವತಾರ ಸ್ತೋತ್ರ, ವರದ ರಾಜ ಪಂಚಾಶತ್, ದಯಾಶತಕ, ದಶಾವತಾರ ಸ್ತೋತ್ರ, ವರದರಾಜ ಪಂಚಾಶತ್, ದೇವನಾಯಕ ಪಂಚಾಶತ್, ಗೋಪಾಲವಿಂಶತಿ, ಯತಿರಾಜ ಸಪ್ತತಿ—ಇವು ಇವರ ನೂರಿಪ್ಪತ್ತು ಕೃತಿಗಳಲ್ಲಿ ಅತಿ ಮುಖ್ಯವಾದುವು. ಒಬ್ಬರು ತಮ್ಮ ಆಯುಸ್ಸಿನಲ್ಲಿ ಇಷ್ಟು ಸಾಹಿತ್ಯವನ್ನು ರಚಿಸಿರುವುದು ಅತ್ಯಾಶ್ಚರ್ಯಕರವಾದ ವಿಷಯ. ಭಗವನ್ನಾಮಸ್ಮರಣ, ವಿಶಿಷ್ಟಾದ್ವೈತ ತತ್ತ್ವ ಚಿಂತನ—ಇವುಗಳಲ್ಲಿಯೇ ಸದಾ ಕಾಲ ಕಳೆದಿರಬಹುದೆಂದು ಕಾಣಬರುತ್ತದೆ.

ಹೀಗೆ ತಮ್ಮ ವಿವಿಧ ರೀತಿಯ ಸಾಹಿತ್ಯ ರಚನೆಯಿಂದ, ವೇದಾಂತದೇಶಿಕರು ಶ್ರೀವೈಷ್ಣವ ತತ್ತ್ವದ ಕಲ್ಪನೆ ಮತ್ತು ಆದರ್ಶಗಳನ್ನು ಲೋಕಮಾನ್ಯವಾಗುವಂತೆ ಮಾಡಿ, ಆಳ್ವಾರಾಚಾರ್ಯರು ಸಾರಿದ ಧರ್ಮ ಮತ್ತು ತತ್ತ್ವಗಳನ್ನು ರಕ್ಷಿಸಿ, ವಿಶದೀಕರಿಸಿ, ಪ್ರಚಾರ ಮಾಡಿದರು; ರಾಮಾನುಜ ಸಂಪ್ರದಾಯದ ಮಹತ್ವ ಮತ್ತು ತತ್ತ್ವ ನಿರೂಪಣೆಯನ್ನು ಆಕರ್ಷಕ ರೀತಿಯಲ್ಲಿ ವಿವರಿಸಿ, ವ್ಯಾಖ್ಯಾನ ಮಾಡಿದರು ; ತತ್ತ್ವಶಾಸ್ತ್ರವನ್ನು ಉತ್ತಮ ಕವಿತೆ ಹಾಗೂ ನಾಟಕಗಳ ಮೂಲಕ ತಿಳಿಸಿಕೊಟ್ಟರು ; ದಿವ್ಯ ದೇಶಗಳಲ್ಲಿ ಆರಾಧಿಸಲ್ಪಡುತ್ತಿರುವ, ಪರಮಾತ್ಮನ ದಿವ್ಯ ಮಂಗಳ ವಿಗ್ರಹ ಪರ ವಾದ, ಶ್ರೇಷ್ಠ ಸ್ತೋತ್ರಗಳ ಮೂಲಕ ವೇದಾಂತ ವಿಷಯವನ್ನು ಪ್ರತಿಪಾದನೆ ಮಾಡಿದುದಲ್ಲದೆ, ಭಕ್ತಿಯನ್ನೂ ಪ್ರಚೋದಿಸಿದರು ; ರಾಮಾನುಜ ಸಿದ್ಧಾಂತದಲ್ಲಿ ಮುಖ್ಯವಾದ, ವಿಶ್ವಧರ್ಮವೆನಿಸಿದ, ಪ್ರಪತ್ತಿಶಾಸ್ತ್ರ ಅಥವಾ ಶರಣಾಗತಿತತ್ತ್ವವನ್ನು, ಶಾಸ್ತ್ರ, ಸಂಪ್ರದಾಯ, ಅನುಷ್ಠಾನಗಳಿಗೆಲ್ಲ ಸರಿಹೊಂದುವಂತೆ ಸಮರ್ಥಿಸಿ, ಪ್ರತಿ ಪಾದನೆ ಮಾಡಿರುವುದು ಅವರ ಅಮೂಲ್ಯ ಕಾಣಿಕೆ, ಅಮೋಘ ಕೊಡುಗೆ.

ಹೀಗೆ ಭಾರತೀಯತತ್ತ್ವಶಾಸ್ತ್ರದ ಇತಿಹಾಸಕ್ಕೆ, ಅವಲೋಕನ, ಟೀಕೆ, ಪುನರು ಜ್ಜೀವನ ಎಂಬ ಮೂರೂ ರೀತಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ಶ್ರೇಷ್ಠ ಅದ್ವೈತಾ ಚಾರ್ಯರಾದ ಅಪ್ಪಯ್ಯ ದೀಕ್ಷಿತರು, ತೆಂಗಲೆ ಪೊಡ್ಡಯ್ಯಾಚಾರ್ಯರು, ಪ್ರತಿವಾದಿ

ಭಯಂಕರ ಅಣ್ಣನ್, ವೆಂಕಟಾಧ್ವರಿಕವಿ ಎಲ್ಲರೂ ಇವರನ್ನು ಹಾಡಿ ಹೊಗಳಿದ್ದಾರೆ. ಇವರ ಪಾಂಡಿತ್ಯ, ಪ್ರತಿಭೆ, ವಾಕ್ಚಾತುರ್ಯ, ವಿವೇಕ, ವಿರಕ್ತಿ, ವಿನಯಗಳ ಬಗ್ಗೆ ಇವರ ವಿರೋಧಿಗಳೂ ಮೆಚ್ಚಿ ಹೊಗಳಿದ್ದಾರೆ. ಇಂತಹ ವಿಚಾರ, ಆಚಾರ, ಉಚ್ಚಾರಗಳ ಏಕತೆಯಿಂದ ಶ್ರೀವೈಷ್ಣವರಿಗೆ ಹಾಗೂ ಜಗತ್ತಿಗೆ ಪೂಜ್ಯರೆನಿಸಿ, ಆಸ್ತಿಕ ಜನರಿಗೆ ಸ್ಫೂರ್ತಿ, ಮಾರ್ಗದರ್ಶನ ನೀಡಿ, ಅವರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಕೆಲವು ಸಂಪ್ರದಾಯ ಭೇದದಿಂದಾಗಿರುವ ವಡಗಲೆ–ತೆಂಗಲೆ ಶಾಖೆಗಳನ್ನು, ಒಂದಾಗಿಸಲು ಶ್ರಮಿಸಿದ ವೇದಾಂತ ದೇಶಿಕರ ನಾಮಸ್ಮರಣೆ ಮತ್ತು ಪೂಜೆಗಳು ಶ್ರೀವೈಷ್ಣವ ದೇವಾಲಯಗಳಲ್ಲಿ ನಡೆಯುತ್ತವೆ. ದೇಶಿಕರ ಸಂಪ್ರದಾಯವನ್ನು, ಅಹೋಬಲಮಠ, ಆಂಡವನ್‌ಮಠ ಮತ್ತು ಪರಕಾಲ ಮಠಗಳು ಗೌರವಿಸಿ, ಅನುಷ್ಠಾನಮಾಡಿ, ವಿವರಿಸುತ್ತಿವೆ.

ದೇವಸ್ಥಾನದ ಘಂಟಾನಾದವು, ಅಲೆಯರೂಪದಲ್ಲಿ ನಾಲ್ಕೂ ದಿಕ್ಕುಗಳಲ್ಲಿರುವ ಶ್ರೋತೃಗಳನ್ನು ಆಲಸ್ಯದಿಂದ ಎಚ್ಚರಿಸಿ, ದೈವವನ್ನು ನೆನೆಯುವ ಹಾಗೆ ಮಾಡುವಂತೆ, ಘಂಟಾವತಾರವಾದ ನಿಗಮಾಂತ ದೇಶಿಕರ ಮಾತುಗಳು, ಕೃತಿಗಳು, ಶ್ರೋತೃಗಳ ಹಾಗೂ ಓದುಗರ ಮನಸ್ಸನ್ನು ಹೊಕ್ಕು, ಅವರನ್ನು ಚಿಂತನಶೀಲರನ್ನಾಗಿ ಮಾಡಿ, ಕ್ರಮೇಣ ಸನ್ಮಾರ್ಗಕ್ಕೆ ಸೆಳೆಯಬಲ್ಲ ಶಕ್ತಿಯನ್ನು ಹೊಂದಿದೆ.

## 11. ವರದನಾಥ (1317–1414)

ಶ್ರಾವಣೇಮಾಸಿರೋಹಿಣ್ಯಾಂ ಜಾತಂ ವೇಂಕಟದೇಶಿಕಾತ್ ।
ವಿಶ್ವಾಮಿತ್ರಾನ್ವಯಾಬ್ಧೀಂದುಂ ವರದಾರ್ಯ ಮಹಂಭಜೇ ॥ ೧ ॥

ವೇದಾಂತ ದೇಶಿಕರ ಮಗನಾದ ಇವರಿಗೆ ವೇದಾಂತಾಚಾರ್ಯ, ಕುಮಾರನಯನಾರಾಚಾರ್ಯ ಎಂಬ ಹೆಸರೂ ಇದ್ದಿತು. ಇವರು ಪರಕಾಲಮಠವನ್ನು ಸ್ಥಾಪಿಸಿದ ಬ್ರಹ್ಮತಂತ್ರ ಸ್ವಾಮಿಯೊಂದಿಗೆ, ತಂದೆಯಿಂದ ಶಿಕ್ಷಣ ಪಡೆದು, ಬಹುಬೇಗ ವಿಶಿಷ್ಟಾದ್ವೈತ ತತ್ತ್ವ ಹಾಗೂ ಶ್ರೀವೈಷ್ಣವ ಮತ ಇವುಗಳ ರಹಸ್ಯವನ್ನೆಲ್ಲ ಅರಿತುಕೊಂಡರು.

ದೇಶಿಕ ದರ್ಶನ, ದೇಶಿಕ ಧರ್ಮಗಳ ಪ್ರಚಾರಕ್ಕೆ ವಿಶೇಷವಾದ ಸೇವೆ ಸಲ್ಲಿಸಿದ್ದಾರೆ. ಶ್ರೇಷ್ಠ ವಿದ್ವಾಂಸರೆನಿಸಿ, ಹತ್ತಾರು ದಾರ್ಶನಿಕ ಗ್ರಂಥಗಳನ್ನೂ, ಸ್ತೋತ್ರಗಳನ್ನೂ ರಚಿಸಿದ್ದಾರೆ. ಶ್ರೀವೈಷ್ಣವ ದೇವಾಲಯಗಳಲ್ಲಿ ದೇಶಿಕರ ಪೂಜೆ ನಡೆಯುವಂತೆ ವ್ಯವಸ್ಥೆ ಮಾಡಿದವರು ಇವರೇ.

ತತ್ತ್ವತ್ರಯ ಚುಳುಕ ಸಂಗ್ರಹ, ರಹಸ್ಯತ್ರಯ ಚುಳುಕ, ರಹಸ್ಯತ್ರಯ ಸಾರಾರ್ಥ ಸಂಗ್ರಹ, ಅಧಿಕರಣ ಚಿಂತಾಮಣಿ, ಅಭೇದ ಖಂಡನ, ಅವಿದ್ಯಾ

ಖಂಡನ, ಪ್ರಪಂಚ ಮಿಥ್ಯತ್ವ ಖಂಡನ, ನ್ಯಾಯತಿಲಕ ವ್ಯಾಖ್ಯಾ, ತ್ಯಾಗಶಬ್ದಾರ್ಥ ನಿರ್ಣಯ, ತತ್ತ್ವಮುಕ್ತಾಕಲಾಪಶಾಂತಿ, ಪ್ರಪತ್ತಿಕಾರಿಕಾ, ವ್ಯಾವಹಾರಿಕ ಸತ್ಯತ್ವ ಖಂಡನ, ಮೀಮಾಂಸಪಾದುಕ ಪರಿತ್ರಾಣ, ಹರಿಣ ಸಂದೇಶ, ಕೋಕಿಲ ಸಂದೇಶ, ಚರಮ ಗುರು ನಿರ್ಣಯ, ಫಲಭೇದ ಖಂಡನ, ಆರಾಧನ ಸಂಗ್ರಹ, ಪ್ರಬಂಧಸಾರ, ನಿರೋಧಿ ಭಂಜಿನಿ, ಅಭಯಪ್ರಧಾನ ಸಾರ, ಆಹಾರ ನಿಯಮ, ಸಗುಣಬ್ರಹ್ಮ ಸಮರ್ಥನ, ವೇದಾಂತದೇಶಿಕ ಮಂಗಳಾ ಶಾಸನ, ದೇಶಿಕ ವಿಗ್ರಹ ಧ್ಯಾನ ಪದ್ಧತಿ, ದೇಶಿಕ ಪ್ರಾರ್ಥನಾಷ್ಟಕ ಪ್ರಪತ್ತಿ, ದಿನಚರಿ, ಅಂತಾದಿ—ಇವು ಇವರ ಕೃತಿಗಳು.

ವೇದಾಂತ ದೇಶಿಕರಂತಹ ಪ್ರತಿಭಾನ್ವಿತರ ವಿದ್ವತ್ಸಂತತಿಯು, ಇವರೊಂದಿಗೇ ಕೊನೆಗೊಂಡುದು ಬಹು ದುಃಖದಾಯಕವಾದುದು ಹಾಗೂ ಶ್ರೀವೈಷ್ಣವ ಕುಲಕ್ಕೆ ತುಂಬಲಾಗದಷ್ಟು ನಷ್ಟ ತಂದಿರುವಂಥದು.

## 12. ರಾಮಾನುಜದಾಸ

ಇವರು ಪಂಚಮತಭಂಜನ ತಾತಾಚಾರ್ಯರ ಹಾಗೂ ಅಪ್ಪಯ್ಯದೀಕ್ಷಿತರ ಸಮಕಾಲೀನರು. ಇವರಿಗೆ ಮಹಾಚಾರ್ಯ, ದೊಡ್ಡಯ್ಯಾಚಾರ್ಯ ಎಂದೂ ಹೆಸರಿದ್ದಿತು. ಇವರು ಅತಿ ಶ್ರೇಷ್ಠ ವಿದ್ವಾಂಸ, ಸಾಹಿತಿ, ಲೇಖಕ ಆಗಿದ್ದರು.

ಪಾರಾಶರ್ಯ ವಿಜಯ, ಬ್ರಹ್ಮವಿದ್ಯಾ ವಿಜಯ, ಸದ್ವಿದ್ಯಾ ವಿಜಯ, ಅದ್ವೈತ ವಿದ್ಯಾ ವಿಜಯ, ಗುರೂಪಸತ್ತಿ ವಿಜಯ, ಶ್ರುತಿ ತಾತ್ಪರ್ಯ ನಿರ್ಣಯ, ವೇದಾಂತ ವೈಭವ ಪ್ರಕಾಶಿಕೆ, ಬ್ರಹ್ಮಸೂತ್ರ ಭಾಷ್ಯೋಪನ್ಯಾಸ, ರಾಮಾನುಜ ಚರಿತ ಚುಲುಕ, ರಹಸ್ಯತ್ರಯ ಮೀಮಾಂಸಾ ಭಾಷ್ಯ, ಉಪನಿಷನ್ಮಂಗಳ ದೀಪಿಕಾ—ಇವು ಇವರ ಮುಖ್ಯ ಕೃತಿಗಳು. ಇವರು ರಚಿಸಿದ ಚಂಡಮಾರುತವು, ದೇಶಿಕರ ಶತ ದೂಷಣಿ ಗ್ರಂಥದ ಮೇಲಿನ ಉದ್ದಾಮ ವ್ಯಾಖ್ಯಾನ.

ಇವರ ಶಿಷ್ಯರಾದ ಶ್ರೀನಿವಾಸಾಚಾರ್ಯರು 16ನೇ ಶತಮಾನದಲ್ಲಿ ರಚಿಸಿದ ಯತೀಂದ್ರಮತ ದೀಪಿಕೆಯು ವಿಶಿಷ್ಟಾದ್ವೈತದ ಪ್ರಸಿದ್ಧ ಆಧಾರ ಗ್ರಂಥ.

## 13. ವೆಂಕಟಾಧ್ವರಿ

ಆತ್ರೇಯ ರಾಮಾನುಜರ ವಂಶಜರಾದ ಇವರು, ಪ್ರಸಿದ್ಧ ಶ್ರೀವೈಷ್ಣವ ಕವಿ ಹಾಗೂ ಲೇಖಕರು. ಪ್ರಪಂಚದ ಜನಜೀವನದ ಎಲ್ಲ ರಂಗಗಳ ಟೀಕೆ ಹಾಗೂ ಪ್ರಶಂಸೆಯನ್ನು ಒಳಗೊಂಡಿರುವ ಇವರ 'ವಿಶ್ವಗುಣಾದರ್ಶ ಚಂಪೂ' ಎಂಬ ಸುಪ್ರಸಿದ್ಧ ಗ್ರಂಥದಲ್ಲಿ, ಯಾಮುನ, ರಾಮಾನುಜರನ್ನು ಕೊಂಡಾಡಿದ್ದು, ವೇದಾಂತ

ದೇಶಿಕರ ವ್ಯಕ್ತಿತ್ವ, ಶೀಲ ಮತ್ತು ಕೃತಿಗಳ ಸಲುವಾಗಿ ಒಂದು ಅಧ್ಯಾಯವನ್ನೇ ಮೀಸಲಾಗಿ ಇಟ್ಟಿದ್ದಾರೆ. ಇವರ ಪ್ರಸಿದ್ಧ ಭಕ್ತಿಗೀತೆಯಾದ ಲಕ್ಷ್ಮೀ ಸಹಸ್ರದ ಮೇಲೆ, ವೇದಾಂತ ದೇಶಿಕರ ದಯಾಶತಕ ಮತ್ತು ಪಾದುಕಾಸಹಸ್ರಗಳ ಪ್ರಭಾವ ಬಿದ್ದಿರುವುದು ಸ್ಪಷ್ಟವಾಗಿ ಕಾಣಬರುತ್ತದೆ.

ಆಚಾರ್ಯ ಪಂಚಾಶತ್, ಉತ್ತರ ಚಂಪೂ, ವರದಾಭ್ಯುದಯ ಚಂಪೂ, ರಾಘವಯಾದವೀಯಂ, ವಿಧಿತ್ರಯ ಪರಿತ್ರಾಣಂ, ಪ್ರದ್ಯುಮ್ನಾನಂದಂ, ಮೀಮಾಂಸಾ ಮಕರಂದಂ–ಇವು ಇವರ ಕೃತಿಗಳು.

## 14. ಅಣ್ಣಮಾಚಾರ್ಯ (1408–1503)

ಪೋತನ, ಕಬೀರ, ನರಸಿ ಮೆಹತಾ, ವ್ಯಾಸರಾಯ, ಪುರಂದರದಾಸ, ಕನಕದಾಸ, ಮುಂತಾದ ವಿಷ್ಣುಭಕ್ತ ಸಾಧಿತಿಗಳು ಇವರ ಸಮಕಾಲೀನರು. ನಾರದರ ಅವತಾರವೆನಿಸಿದ ಇವರು, ಕಡಪ ಜಿಲ್ಲೆಯ ತಾಳ್ಳಪಾಕಗ್ರಾಮದಲ್ಲಿ ಜನಿಸಿದರು. ತಂದೆ ನಾರಾಯಣಸೂರಿ. ತಾಯಿ ಲಕ್ಕಮಾಂಬೆ.

ಸಂಸ್ಕೃತ, ತೆಲುಗು ಭಾಷೆಗಳಲ್ಲಿ ವಿದ್ವತ್ತು, ಸಾಮರ್ಥ್ಯಗಳನ್ನು ಪಡೆದಿದ್ದ ಇವರಿಗೆ, 16ನೆಯ ವಯಸ್ಸಿನಲ್ಲಿ ತಿರುಪತಿಯ ಶ್ರೀನಿವಾಸ ದೇವರದರ್ಶನವಾಗಿ, ಭಕ್ತಿ ಹುಟ್ಟಿ, ಕೀರ್ತನೆಗಳನ್ನು ರಚಿಸಲು ಪ್ರೇರಣೆ ಆಯಿತು. ಆಗ ಸ್ವಗ್ರಾಮದಿಂದ ತಿರುಪತಿಗೆ ಬಂದು, ಅಲ್ಲಿ ದೇಶಿಕ ಸಂಪ್ರದಾಯದ ಆಚಾರ್ಯರಲ್ಲಿ ಸಮಾಶ್ರಯಣ ಸಂಸ್ಕಾರವನ್ನು ಪಡೆದರು. ಆಮೇಲೆ ಅಹೋಬಿಲ ಮಠದ ಷಷ್ಠಿ ಪರಾಂಕುಶಸ್ವಾಮಿಗಳಲ್ಲಿ ಶ್ರೀವೈಷ್ಣವ ಸಿದ್ಧಾಂತವನ್ನು ಅಧ್ಯಯನ ಮಾಡಿದರು. ಮೊದಲು ಸ್ಮಾರ್ತರಾಗಿದ್ದ ಇವರು, ತಮ್ಮ ಹೆಸರನ್ನು ಅಣ್ಣಮಯ್ಯಂಗಾರ್ ಎಂದು ಕರೆದುಕೊಂಡರು. ಇವರು ಪುರಂದರದಾಸರನ್ನು ಭೇಟಿಯಾಗಿದ್ದರು. ತ್ಯಾಗರಾಜರು ಇವರಿಂದ ಸ್ಫೂರ್ತಿ ಪಡೆದರು

ಪುರಾಣಗಳ ಮತ್ತು ತಮಿಳುಪ್ರಬಂಧಗಳ ಜ್ಞಾನವಿದ್ದ ಇವರಿಗೆ, ಸಂಕೀರ್ತನಾಚಾರ್ಯ, ಪದಕವಿತಾ ಪಿತಾಮಹ, ದ್ರಾವಿಡಾಗಮ ಸಾರ್ವಭೌಮ ಎಂಬ ಬಿರುದುಗಳೂ ಇದ್ದುವು. ಇವರ ಕೀರ್ತನ ಸಾಹಿತ್ಯದಲ್ಲಿ ಭಕ್ತಿ, ವೈರಾಗ್ಯ, ಶೃಂಗಾರಗಳೂ, ಸಂಗೀತದಲ್ಲಿ ಭಾವ, ರಾಗ, ತಾಳಗಳೂ ಸೇರಿದ್ದು, ಇವರ ಕೃತಿಗಳಲ್ಲಿ ಸಂಗೀತ ಸಾಹಿತ್ಯಗಳೆರಡೂ ಮೂಡಿ ಬಂದಿವೆ. ಶ್ರೀನಿವಾಸ ದೇವರನ್ನು ನಾಯಕನನ್ನಾಗಿ ತನ್ನನ್ನು ನಾಯಕಿಯನ್ನಾಗಿ ಭಾವಿಸಿ, ಅವನನ್ನು ಅರಸಿ, ವರಿಸಿ, ಸೇವೆ ಮಾಡುವುದೇ ಬದುಕಿನ ಗುರಿ ಆಗಿರಬೇಕೆಂಬುದು, ಇವರ ಕೀರ್ತನೆಗಳಲ್ಲಿನ ಸಾರವಾಗಿದೆ.

ಭಕ್ತಿಯ ಬೆಂಬಲವಿದ್ದರೆ ಮಾತ್ರ ಉತ್ತಮ ಸಾಹಿತ್ಯ, ಸೊಗಸಾದ ಸಂಗೀತ, ಸೃಷ್ಟಿಯಾಗಲು ಸಾಧ್ಯ ಎಂದು ಇವರು ಹೇಳಿ, ಮಾಡಿ, ತೋರಿಸಿಕೊಟ್ಟಿರುತ್ತಾರೆ.

ಸುಮಾರು ಎಂಭತ್ತು ವರ್ಷಗಳ ಕಾಲ ಎಡಬಿಡದೆ ತಿರುಮಲೆಯ ಶ್ರೀನಿವಾಸ ಸ್ವಾಮಿಯನ್ನು, ತಮ್ಮ ನೂರಾರು ಕೀರ್ತನೆಗಳಿಂದ ಸೇವಿಸಿದರು. ಪ್ರಾಪಂಚಿಕ ಸಂಪತ್ತು ಹೆಚ್ಚಿದರೆ ಭಕ್ತಿ ಕಡಿಮೆಯಾಗಬಹುದೆಂದು ತಿಳಿದ ಇವರು, ಕಡೆಯ ತನಕ ವಿರಕ್ತರಾಗಿಯೇ ಇದ್ದರು. ನರಸ್ತುತಿ ಮಾಡಲಾರೆನೆಂದು ಹೇಳಿದ ಇವರು ಕೆಲಕಾಲ ಕಷ್ಟನಷ್ಟಗಳಿಗೆ ಗುರಿಯಾಗಿದ್ದರು.

ಇವರಂತೆಯೇ ಇವರ ಮಕ್ಕಳೂ ಶ್ರೀವೈಷ್ಣವ ಮತವನ್ನು ಅನುಸರಿಸಿ ಶ್ರೇಷ್ಠ ವಾಗ್ಗೇಯಕಾರರೆನಿಸಿದ್ದರು.

## 15. ರಾಜಗೋಪಾಲಾಚಾರಿ (1878–1972)

ನಲ್ಲಾನ್ ಚಕ್ರವರ್ತಿ ಪರಂಪರೆಯಲ್ಲಿ ಜನಿಸಿದ ಇವರು ಸಿ. ಆರ್., ರಾಜಾಜಿ ಎಂದೇ ಜನರಲ್ಲಿ ಪರಿಚಯಸ್ಥರಾಗಿದ್ದಾರೆ.

ಮದರಾಸಿನ ಸೇಲಂ ಜಿಲ್ಲೆಯ ಹೊಸೂರಿನಲ್ಲಿ ಹುಟ್ಟಿದ ಇವರು, ಶ್ರೇಷ್ಠ ವಿದ್ವಾಂಸರು, ಸುಸಂಸ್ಕೃತರು, ಧರ್ಮಬುದ್ಧಿಯುಳ್ಳವರು ಆಗಲು, ಅವರ ತಂದೆಯೇ ಕಾರಣ. ಹೆಚ್ಚಿನ ವಿದ್ಯಾಭ್ಯಾಸವು ಬೆಂಗಳೂರಿನಲ್ಲಿ ಆಯಿತು. ಕನ್ನಡ, ತಮಿಳು, ಸಂಸ್ಕೃತ, ತೆಲುಗು, ಇಂಗ್ಲೀಷ್ ಭಾಷೆಗಳನ್ನು ಕಲಿತಿದ್ದರು. ತಮಿಳು ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಇವರ ಹಾಗೆ ಬರೆಯಬಲ್ಲವರು ಅತಿ ವಿರಳ.

ಗಾಂಧೀಜಿಯ ಮುಖ್ಯ ಶಿಷ್ಯರಾಗಿ, ಅವರ ಸಿದ್ಧಾಂತವನ್ನು ಚೆನ್ನಾಗಿ ತಿಳಿದುಕೊಂಡಿದ್ದ ಇವರು, ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಅದ್ಭುತ ತ್ಯಾಗ, ಅಖಂಡ ದೇಶಸೇವೆ, ಸಮಾಜ ಸುಧಾರಣೆ ಮಾಡಿದರೂ, ಗರ್ವ, ಅಹಂಕಾರಗಳು ಇವರ ಬಳಿ ಸುಳಿಯಲಿಲ್ಲ. ಸ್ವತಂತ್ರವಿಚಾರವುಳ್ಳ ತರ್ಕಜೀವಿಯಾಗಿ, ಸಮಸ್ಯೆಗಳನ್ನು ನಿರ್ಭಯವಾದ ಹಾಗೂ ತೂಕವಾದ ಮಾತುಗಳಿಂದ ವಿಮರ್ಶೆ ಮಾಡುತ್ತಿದ್ದರು. ಅನ್ಯಾಯ, ಅನೈತಿಕತೆ, ಧರ್ಮಭ್ರಷ್ಟತೆ, ಸರ್ವಾಧಿಕಾರಿ ಪ್ರವೃತ್ತಿಗಳನ್ನು ಹೊಡೆದೋಡಿಸಲು ಬಹಳ ಶ್ರಮಿಸಿದ್ದಾರೆ.

ಧರ್ಮದ ಹಿರಿಮೆಯನ್ನು ಮರೆಯದೆ, ನೈತಿಕ ಮೌಲ್ಯಗಳನ್ನು ಬೆಳೆಸಿಕೊಳ್ಳಬೇಕೆಂದು ಸಾರಿದ ಈ ಆದರ್ಶ ಶ್ರೀವೈಷ್ಣವರು, ಆಧುನಿಕ ಸಮಸ್ಯೆಗಳಿಗೆಲ್ಲ ನಮ್ಮ ಪ್ರಾಚೀನ ಧರ್ಮ ಸಾಹಿತ್ಯವು ಪರಿಹಾರ ಸೂತ್ರವನ್ನು ಹೊಂದಿದೆಯೆಂದು ನಂಬಿದ್ದರು.

ಅತಿ ಸೂಕ್ಷ್ಮ ಹಾಗೂ ಗಹನ ಆದ ವಿಷಯಗಳನ್ನೂ, ಅತಿ ಸುಲಭ ಹಾಗೂ ಸೊಗಸು ಆಗಿ ವರ್ಣಿಸಿ, ವಿವರಿಸಬಲ್ಲ ಸಾಮರ್ಥ್ಯ ಇವರ ನಾಲಿಗೆ–ಲೇಖನಿಗಳೆರಡಕ್ಕೂ ಇದ್ದಿತೆಂದರೆ ಅತಿಶಯೋಕ್ತಿಯಾಗಲಾರದು. ಪೌರಸಭೆಯ ಅಧ್ಯಕ್ಷನಿಂದ, ಭಾರತದ ಕೊನೆಯ ಗವರ್ನರ್ ಜನರಲ್‌ವರೆಗೆ, ಅಧಿಕಾರದಲ್ಲಿ ಇದ್ದರೂ, ಸಾಹಿತ್ಯ ಸೃಷ್ಟಿಗೆ ಬಿಡುವುಮಾಡಿಕೊಂಡಿದ್ದರು. ಪ್ರಾಚೀನವಾದ ರಾಮಾಯಣ, ಮಹಾಭಾರತಗಳ ಪರಿಚಯವನ್ನು, ತಮಿಳು, ಇಂಗ್ಲೀಷ್ ಭಾಷೆಗಳಲ್ಲಿ ಜನತೆಗೆ ವಿನೂತನವಾಗಿ ಮಾಡಿಕೊಟ್ಟು, ಶ್ರೀರಾಮ–ಶ್ರೀಕೃಷ್ಣರ ಬಗ್ಗೆ ಜನರ ಹೃದಯದಲ್ಲಿ ಶ್ರದ್ಧಾಭಕ್ತಿಗಳನ್ನು ಉದ್ದೀಪನಗೊಳಿಸಿದರು. ಉಪನಿಷತ್ತು, ಭಗವದ್ಗೀತೆಗಳ ಮೇಲೂ ಬರೆದಿದ್ದಾರೆ.

ಭಾರತೀಯ ಆದರ್ಶ ಆದ, ಸರಳಜೀವನ–ಉಚ್ಚ ದರ್ಶನಗಳ ಪ್ರತೀಕವಾಗಿದ್ದ ಇವರು, ವಿನೂತನ ಪ್ರಗತಿ ಪ್ರಿಯ ಆಗಿದ್ದರೂ, ಸಮಾಜ ಸುಧಾರಕ ಎನಿಸಿದರೂ, ಹಳೆಯ ವ್ಯವಸ್ಥೆಯನ್ನು ಉಳಿಸಿಕೊಳ್ಳಬೇಕೆನ್ನುವ ಸಂಪ್ರದಾಯ ಪ್ರಿಯ ಸನಾತನಿಯೂ ಆಗಿದ್ದರೆಂದರೆ ಆಶ್ಚರ್ಯವಾಗದಿರದು.

---

# III. ಭಗವದ್ವಿಷಯ ಪರಂಪರೆ

ಈ ಪರಂಪರೆಯ ಆಚಾರ್ಯರು, ಸಾಮಾನ್ಯವಾಗಿ ರಾಮಾನುಜ ದರ್ಶನದ ಬಗ್ಗೆ ಸಂಸ್ಕೃತದಲ್ಲಿ ಹೆಚ್ಚಾಗಿ ಕೃತಿಗಳನ್ನು ರಚಿಸದೆ, ದಿವ್ಯಪ್ರಬಂಧ ಹಾಗೂ ತಿರುವಾಯ್ಮೊಳಿಗಳ ಮೇಲೆ ತಮಿಳಿನಲ್ಲಿ ಹೆಚ್ಚಾಗಿ ಬರೆದಿದ್ದಾರೆ.

## 1. ಶ್ರೀವತ್ಸಾಂಕಮಿಶ್ರ (1030-1133)

ಶ್ರೀವತ್ಸ ಚಿಹ್ನ ಮಿಶ್ರೇಭ್ಯೋ ನಮ ಉಕ್ತಿಮಧೀಮಹೇ ।
ಯದುಕ್ತಯಸ್ತ್ರಯಿಕಂಠೇ ಯಾಂತಿ ಮಂಗಳ ಸೂತ್ರತಾಂ ॥ ೧ ॥
ಶ್ರೀಮತ್ಕೂರಕುಲಾಧೀಶಂ ಶ್ರೀವತ್ಸಾಂಕ ಮುಪಾಸ್ಮಹೇ ।
ಅಗ್ರ್ಯಂ ಯತೀಂದ್ರ ಶಿಷ್ಯಾಣಾಂ ಆದ್ಯಂ ವೇದಾಂತ ವೇದಿನಾಂ ॥ ೨ ॥

ಚಕ್ರದ ಅಂಶ ಸಂಭೂತರು. ಶ್ರೀರಾಮನ ಅವತಾರ. ಆಗ ಲಕ್ಷ್ಮಣನಿಂದ ಪಡೆದ ಸೇವೆಯನ್ನೆಲ್ಲಾ, ಈಗ ಲಕ್ಷ್ಮಣನ ಅವತಾರವಾದ ರಾಮಾನುಜರಿಗೆ ಹಿಂತಿರುಗಿಸಿದರೆಂದು ಪ್ರತೀತಿ. ರಾಮಾನುಜರ ಪ್ರೀತಿಪಾತ್ರ, ಪ್ರತಿಭಾವಂತ, ಮುಖ್ಯ ಶಿಷ್ಯ ಹಾಗೂ ಆಜೀವ ಮಿತ್ರ.

ತಂದೆ ಅನಂತಭಟ್ಟ, ತಾಯಿ ಮಹಾದೇವಿ. ಕಂಚಿಯ ಬಳಿಯ ಕೂರಂ ಗ್ರಾಮದ ಯಜಮಾನನಾದ ಇವರಿಗೆ ಕೂರಾಧಿಪ, ಕೂರತ್ತಾಳ್ವಾನ್, ಕೂರೇಶ, ಎಂಬ ಹೆಸರುಗಳೂ ಇದ್ದುವು. ತನ್ನ ಐಶ್ವರ್ಯವನ್ನೆಲ್ಲಾ ದಾನಮಾಡಿ, ಪತ್ನಿ ಆಂಡಾಳಮ್ಮನೊಂದಿಗೆ ರಾಮಾನುಜರ ಮೊದಲ ಶಿಷ್ಯರಾಗಿ, ಅವರ ಸೇವೆಗಾಗಿ ಜೀವವನ್ನು ಸವೆಸಿದರು, ಹಾಗೂ ಯೋನಿತ್ಯಮಚ್ಯುತ ಎಂಬ ಶ್ಲೋಕದಿಂದ ಅವರನ್ನು ಕೊಂಡಾಡಿದ್ದಾರೆ.

ಸಕಲ ಶಾಸ್ತ್ರ ನಿಪುಣ, ಶ್ರೇಷ್ಠ ಕವಿ, ಮಹಾಪಂಡಿತ, ದೈವಭಕ್ತ, ಆಚಾರ್ಯ ನಿಷ್ಠ ಆಗಿದ್ದರು. ಅಪರೂಪವಾದ ಬೋಧಾಯನ ವೃತ್ತಿಯನ್ನು ಒಂದೇ ಒಂದು ಸಾರಿ ಮಾತ್ರ ಪರಿಶೀಲಿಸಿ, ತಮ್ಮ ಅಸಾಧಾರಣ ಜ್ಞಾಪಕಶಕ್ತಿಯಿಂದ ಬರೆದುಕೊಟ್ಟು ರಾಮಾನುಜರುಹೇಳಿದಂತೆಲ್ಲ ಶ್ರೀಭಾಷ್ಯವನ್ನು ಬರೆದುಕೊಟ್ಟು, ವ್ಯಾಸರಿಗೆ ಗಣೇಶನು ನೆರವಾದಂತೆ, ನೆರವಾದರು. ಇದರಿಂದ, ವಿಶಿಷ್ಟಾದ್ವೈತ ರೀತ್ಯ ವ್ಯಾಸರ ವೇದಾಂತ ಸೂತ್ರಗಳಿಗೆ ಭಾಷ್ಯವನ್ನು ಬರೆಸಬೇಕೆಂಬ ಯಾಮುನರ ಅಂತಿಮೇಚ್ಛೆಯನ್ನು ನೆರವೇರಿಸಲು, ರಾಮಾನುಜರಿಗೆ ಪೂರ್ಣ ಸಹಕಾರ ನೀಡಿದರು.

ರಾಮಾನುಜರನ್ನು ಚೋಳರಾಜನ ಬಾಧೆಯಿಂದ ಉಳಿಸುವ ಸಲುವಾಗಿ, ಅವರನ್ನು ಮೈಸೂರು ದೇಶಕ್ಕೆ ಕಳುಹಿಸಿ, ತಾವೇ ರಾಮಾನುಜರಾಗಿ, ಮಹಾಪೂರ್ಣ ರೊಂದಿಗೆ ಚೋಳರಾಜನ ಆಸ್ಥಾನಕ್ಕೆ ಹೋಗಿ, ಅಲ್ಲಿ ಶಿವ ಪಾರಮ್ಯದ ಶೈಥಿಲ್ಯವನ್ನೂ, ನಾರಾಯಣ ಪಾರಮ್ಯದ ಶಕ್ತಿಯನ್ನೂ ಸ್ಥಾಪಿಸಿ, ರಾಮಾನುಜ ಸಿದ್ಧಾಂತವನ್ನು ಊರ್ಜಿತಗೊಳಿಸಿದುದರ ಫಲವಾಗಿ, ಕಣ್ಣುಗಳನ್ನು ಕಳೆದುಕೊಂಡ ಮಹಾತ್ಯಾಗಿ.

ವೇದ, ಉಪನಿಷತ್ತು, ಪುರಾಣ, ಇತಿಹಾಸಗಳಿಂದ ಸಗುಣ ಬ್ರಹ್ಮನ ಉಪಾ ಸನೆಯ ಪರವಾಗಿ, ನಾರಾಯಣನ ಶ್ರೇಷ್ಠತೆಯ ಬಗ್ಗೆ, ಪ್ರಮಾಣ ಉಕ್ತಿಗಳನ್ನು ಉದಾಹರಿಸಿ, ಯಾದವಪ್ರಕಾಶರನ್ನು ರಾಮಾನುಜರ ಶಿಷ್ಯರಾಗಿಸಿದರು.

ಶ್ರೀ ವೈಕುಂಠ ಸ್ತವ, ಅತಿಮಾನುಷಸ್ತವ, ಸುಂದರಬಾಹುಸ್ತವ, ವರದ ರಾಜಸ್ತವ, ಶ್ರೀಸ್ತವ–ಎಂಬ ಪಂಚಸ್ತವಿ ಸ್ತೋತ್ರಗಳು ಇವರ ಮುಖ್ಯ ಕೃತಿಗಳು.

ಇವರ ಮಕ್ಕಳಾದ ಪರಾಶರ, ಶ್ರೀರಾಮಪಿಳ್ಳೈ ಅಥವಾ ವ್ಯಾಸಭಟ್ಟ ಇಬ್ಬರೂ ಪ್ರಸಿದ್ಧ ವಿದ್ವಾಂಸರು. ಇನ್ನೊಬ್ಬ ಮಗ ಅನಂತಾಚಾರ್ಯರು ರಚಿಸಿದ ಪ್ರಪನ್ನಾಮೃತವು ಸುಪ್ರಸಿದ್ಧವಾದ ಕೃತಿ.

## 2. ದಾಶರಥಿ

ಪಾದುಕೇಯತಿರಾಜಸ್ಯ ಕಥಯಂತಿ ಯದಾಖ್ಯಯಾ ।
ತಸ್ಯದಾಶರಥೇಃ ಪಾದೌ ಶಿರಸಾ ಧಾರಯಾಮ್ಯಹಂ ॥ ೧ ॥

ಇವರು ಶಂಖದ ಅಂಶ ಸಂಭೂತರು. ತಂದೆ ಪುರುಷಮಂಗಲದ ಅನಂತ ದೀಕ್ಷಿತರು. ತಾಯಿ ಲಕ್ಷ್ಮಿ, ರಾಮಾನುಜರ ತಂಗಿ. ಸೋದರಮಾವನಾದ ರಾಮಾನುಜರು ಸಂನ್ಯಾಸಿಯಾದುದನ್ನು ಕೇಳಿದೊಡನೆ, ಇವರು ಕೂರೇಶರೊಂದಿಗೆ ಅವರ ಮೊದಲ ಶಿಷ್ಯರಾದರು. ಇವರಿಗೆ ಮುದಲಿಯಾಂಡಾನ್ ಎಂಬ ಹೆಸರೂ ಇದ್ದಿತು. ತ್ರಿದಂಡಸ್ಥಾನೀಯರಾದ ದಾಶರಥಿ, ಪವಿತ್ರಸ್ಥಾನೀಯರಾದ ಕೂರೇಶ, ಇಬ್ಬರೂ ಸಂನ್ಯಾಸಿಯಾದ ರಾಮಾನುಜರೊಡನೆ ಯಾವಾಗಲೂ ಇರುತ್ತಿದ್ದರು. ರಾಮಾನುಜರಿಗೆ ಇವರ ಬಗ್ಗೆ ಅತಿಶಯವಾದ ಅಭಿಮಾನವಿದ್ದಿತು.

ರಾಮಾನುಜರು, ಚೋಳರಾಜನ ಬಾಧೆಯನ್ನು ತಪ್ಪಿಸಿಕೊಳ್ಳಲು, ಮೈಸೂರು ದೇಶಕ್ಕೆ ಬಂದು ಸಾಲಿಗ್ರಾಮದಲ್ಲಿ ತಂಗಿದ್ದಾಗ, ಇವರ ಪಾದಸ್ಪರ್ಶದ ನೀರನ್ನು ಕುಡಿದ ಆಲೂರಿನವರು, ಮೊದಲು ವಿರೋಧಿಯಾಗಿದ್ದು, ಆಮೇಲೆ ರಾಮಾನುಜರ ಶಿಷ್ಯರಾಗಿ ಅವರಿಗೆ ನೆರವು ನೀಡಿದರು.

ರಾಮಾನುಜರ ಆದೇಶದಂತೆ, ಪೆರಿಯ ನಂಬಿಗಳ ಕುಮಾರಿ ಅತ್ತುಳಾಯಿಯ ಗಂಡನ ಮನೆಯಲ್ಲಿ, ಸೇವಕನಾಗಿ ದುಡಿದ ಶ್ರೇಷ್ಠ ವಿದ್ವಾಂಸರು.

ಬೇಲೂರಿನ ಚನ್ನಕೇಶವ ದೇವಾಲಯದ ಜೀರ್ಣೋದ್ಧಾರ ಹಾಗೂ ಮೂರ್ತಿಯ ಪ್ರತಿಷ್ಠೆಯಲ್ಲಿ ಇವರ ಪಾತ್ರ ಹಿರಿದು.

## 3. ಎಂಬಾರ್ (1024-1129)

ರಾಮಾನುಜ ಪದಚ್ಛಾಯಾ ಗೋವಿಂದಾಹ್ವಾನ ಪಾಯಿನೀ ।
ತದಾಯತ್ತ ಸ್ವರೂಪಾಸೌ ಸಾಜೀಯಾನ್ಮದ್ವಿಶ್ವಮಸ್ಥಲೀ ॥ ೧ ॥

ಇವರು ಗರುಡನ ಅಂಶಭೂತರಾಗಿ ಕಂಚಿಯ ಬಳಿಯ ಮಧುರ ಮಂಗಲಂನಲ್ಲಿ ಜನಿಸಿದರು. ತಾಯಿ ದ್ಯುತಿಮತಿ. ತಂದೆ ಕಮಲನಯನ ಭಟ್ಟರು. ಇವರಿಗೆ ಮೊದಲು ಗೋವಿಂದಭಟ್ಟನೆಂಬ ಹೆಸರಿದ್ದಿತು. ರಾಮಾನುಜರ ಚಿಕ್ಕಮ್ಮನ ಮಗನಾದ ಇವರು, ರಾಮಾನುಜ ಪದಚ್ಛಾಯಾ ಎನಿಸಿ, ಅವರೊಂದಿಗೆ ಯಾದವಪ್ರಕಾಶರಲ್ಲಿ ಕಲಿಯುತ್ತಿದ್ದರು. ಸಂಸ್ಕೃತದಲ್ಲಿ ಶ್ರೇಷ್ಠ ಪಂಡಿತರು.

ಗುರುಗಳಾದ ಯಾದವಪ್ರಕಾಶರ ಪ್ರಭಾವಕ್ಕೆ ಒಳಗಾಗಿ ಇವರು ಬಹುಕಾಲ ಶಿವಭಕ್ತರಾಗಿದ್ದು, ಉಳ್ಳಂಗೈ ಕೊಣರ್ದನಾಯನಾರ್ ಎಂಬ ಹೆಸರಿನಲ್ಲಿ ಕಾಳಹಸ್ತಿಯ ದೇವಾಲಯವನ್ನು ವ್ಯವಸ್ಥೆಮಾಡಿ, ಅಲ್ಲಿ ಗಂಗೆಯಲ್ಲಿ ದೊರಕಿದ ಶಿವಲಿಂಗವನ್ನು ಸ್ಥಾಪಿಸಿ, ದೇವಾಲಯದ ಮುಖ್ಯಸ್ಥರಾಗಿ ಶಿವಸೇವೆಯಲ್ಲಿ ನಿರತರಾಗಿದ್ದರು.

ರಾಮಾನುಜರನ್ನು ಅಪಾಯದಿಂದ ಉಳಿಸಿದವರೂ ಇವರೇ. ಸಹಪಾಠಿಯಾಗಿದ್ದ, ಬುದ್ಧಿವಂತ, ಯೋಗ್ಯ ಆದ ಗೋವಿಂದನನ್ನು ಶ್ರೀವೈಷ್ಣವನಾಗಿ ಮಾಡಿ, ಸಿದ್ಧಾಂತದ ಪ್ರಚಾರಕ್ಕಾಗಿ ಉಪಯೋಗಿಸಿಕೊಳ್ಳಬೇಕೆಂಬುದು, ರಾಮಾನುಜರ ಉತ್ಕಟೇಚ್ಛೆ. ರಾಮಾನುಜರ ಪ್ರಾರ್ಥನೆಯಂತೆ ಶ್ರೀಶೈಲಪೂರ್ಣರು ತುಂಬಾ ಶ್ರಮಿಸಿ, ಪ್ರಭಾವ ಬೀರಿ, ಗೋವಿಂದನನ್ನು ಶ್ರೀವೈಷ್ಣವರಾಗಿ ಮಾಡಿದರು. ಇವರು ಮೊದಲು ತಿರುಪತಿಯಲ್ಲೂ, ಆಮೇಲೆ ಶ್ರೀರಂಗದಲ್ಲೂ ಇದ್ದರು.

ಇವರು ಆಚಾರ್ಯ ನಿಷ್ಠರು, ಪರಮ ಗುರುಭಕ್ತರು, ಜ್ಞಾನಭಕ್ತಿವೈರಾಗ್ಯಗಳ ಗಣಿ. ಅನ್ಯಾದೃಶವಾದ ಭೂತದಯಾಪರತೆ ಅವರಲ್ಲಿ ಇದ್ದಿತು. ಹಾವಿನ ಬಾಯಿಗೆ ಕೈಹಾಕಿ ಅಲ್ಲಿದ್ದ ಮುಳ್ಳನ್ನು ತೆಗೆದುಹಾಕುವಷ್ಟು ಅನುಕಂಪ ಅವರಲ್ಲಿದ್ದಿತು.

ರಾಮಾನುಜರ ಅಪೇಕ್ಷೆಯಂತೆ ಕೂರೇಶರ ಮಗ ಪರಾಶರರನ್ನು ಶಿಕ್ಷಿತರನ್ನಾಗಿ ಮಾಡಿದರು. ರಾಮಾನುಜರ ಸೋದರಿಯ ಮಗನಾದ ಶೋಮಾಶಿಯಾಂಡಾನ್ ಅಥವಾ ಸೋಮಯಾಜಿಯಾಂಡಾನ್‌ರವರ ಬಗ್ಗೆ ಗೌರವ ಭಾವನೆಯನ್ನು ಹೊಂದಿದ್ದರು.

ಮದುವೆಯಾಗಿದ್ದರೂ ಪ್ರಾಪಂಚಿಕ ವ್ಯಾಮೋಹವನ್ನು ತೊರೆದು ಸಂನ್ಯಾಸಿಯಾದುದು, ಅವರ ಅದ್ಭುತ ಆಧ್ಯಾತ್ಮ ಜೀವನ ಸಾಧನೆಯ ಒಂದು ಜ್ವಲಂತ ನಿದರ್ಶನ. ರಾಮಾನುಜರಿಗೆ ಸೇವೆ ಸಲ್ಲಿಸುವುದೇ ಅವರಿಗೆ ದೈವಸಾಕ್ಷಾತ್ಕಾರವೆನಿಸಿದ್ದಿತು.

## 4. ಗೋವಿಂದಜೀಯರ್

ಯದ್ವಾಚ ಸ್ಸಕಲಂ ಶಾಸ್ತ್ರಂ ಯತ್ಕ್ರಿಯಂ ವೈದಿಕೋವಿಧಿಃ ।
ಯತ್ಕಟಾಕ್ಷೋ ಜಗದ್ರಕ್ಷಾ ವಂದೇ ಶ್ರೀಮಾಧವಂ ಮುನಿಂ ॥

ಇವರು ಪೂರ್ವಾಶ್ರಮದಲ್ಲಿ ಯಾದವ ಪ್ರಕಾಶರು. ಅದ್ವೈತ ವೇದಾಂತದಲ್ಲಿ ಆಳವಾದ ಪಾಂಡಿತ್ಯ, ಶಾಸ್ತ್ರಜ್ಞಾನ, ಪಾಠಹೇಳುವುದರಲ್ಲಿ ಚತುರತೆ, ಇದ್ದ ಇವರಲ್ಲಿ ಕಲಿಯಲು, ಅನೇಕ ಶಿಷ್ಯರು ಓಡೋಡಿ ಬರುತ್ತಿದ್ದರು. ಇವರು ಬ್ರಹ್ಮಸೂತ್ರ ಮತ್ತು ಗೀತೆಗಳಿಗೆ ಬರೆದ ಭಾಷ್ಯವು ಶಂಕರ ಸಿದ್ಧಾಂತಕ್ಕೆ ಸ್ವಲ್ಪ ವ್ಯತ್ಯಾಸವಾಗಿದೆ.

ಪ್ರತಿಭಾಶಾಲಿ ಶಿಷ್ಯ ರಾಮಾನುಜರನ್ನು ಇವರು ಮೆಚ್ಚಿದರೂ, ಗುರುಗಳಾದ ಅದ್ವೈತಿ ಯಾದವಪ್ರಕಾಶರ ಜ್ಞಾನಪ್ರಧಾನವಾದ ಸರಣಿ, ಹಾಗೂ ವೇದ ಮಂತ್ರಗಳಿಗೆ ಅವರು ನೀಡುತ್ತಿದ್ದ ಅರ್ಥ, ವಿಶಿಷ್ಟಾದ್ವೈತಿ ಹಾಗೂ ಭಕ್ತಿ ಪ್ರೇಮ ಪ್ರಧಾನವಾದ ಶಿಷ್ಯ ರಾಮಾನುಜರಿಗೆ, ಸರಿಬೀಳುತ್ತಿರಲಿಲ್ಲ. ಮೊದಮೊದಲು ಸೌಜನ್ಯದಿಂದ ರಾಮಾನುಜರು ಗುರುಗಳ ಲೋಪದೋಷಗಳನ್ನು ಎತ್ತಿ ತೋರಿಸಲಿಲ್ಲ. ಸ್ವತಂತ್ರವಾಗಿ ವಿಚಾರ ಮಾಡಬಲ್ಲ ಶಿಷ್ಯನನ್ನು, ಸುಧಾರಣಾ ವಿರೋಧಿಯಾದ ಗುರುಗಳು ಮೆಚ್ಚಿಕೊಳ್ಳಲಾಗಲಿಲ್ಲ. ಆದುದರಿಂದ ಅವರ ಸಂಬಂಧ ಬಹುಕಾಲ ಇರಲಾಗಲಿಲ್ಲ. ತಮ್ಮ ಪ್ರತಿಷ್ಠೆಗೆ ಹಾಗೂ ಅದ್ವೈತ ದರ್ಶನಕ್ಕೆ, ರಾಮಾನುಜರಿಂದ ಅಪಾಯವಿದೆಯೆಂದು ತಿಳಿದ ಗುರುಗಳು ಭಯಪಟ್ಟರು: ತಮ್ಮ ಜೀವಕ್ಕೆ ಅಪಾಯ ಒದಗುತ್ತದೆಂಬ ಸೂಚನೆಯು ಗೋವಿಂದನಿಂದ ತಿಳಿದಾಗ, ರಾಮಾನುಜರು ವಿಧಿಯಿಲ್ಲದೆ ಗುರುವಿನ ಸಂಪರ್ಕದಿಂದ ಬಿಡುಗಡೆ ಹೊಂದಿದರು.

ಚೋಳರಾಜನ ಮಗಳನ್ನು ಹಿಡಿದಿದ್ದ ಬ್ರಹ್ಮರಾಕ್ಷಸನನ್ನು ಓಡಿಸಿದುದು, ವಿಂಧ್ಯಾರಣ್ಯದಿಂದ ಕಂಚಿಗೆ ಒಂದೇ ರಾತ್ರಿಯಲ್ಲಿ ಬಂದು ಸೇರಿದುದು, ಅವರು ಶ್ರುತಿಗೆ ನೀಡುತ್ತಿದ್ದ ಅರ್ಥ—ಇವುಗಳನ್ನು ಗಮನಿಸಿದ ಯಾದವಪ್ರಕಾಶರ ಮನಸ್ಸಿನಲ್ಲಿ, ರಾಮಾನುಜರು ಮಹಾಪುರುಷರಿರಬಹುದೆಂದು ಅನ್ನಿಸಿತು.

ಬುದ್ಧಿವಂತೆ, ವಿದ್ಯಾವಂತೆ, ವರದರಾಜಸ್ವಾಮಿಯ ಭಕ್ತೆ, ವಿಶಿಷ್ಟಾದ್ವೈತದಲ್ಲಿ ವಿಶ್ವಾಸಿ, ಆಗಿದ್ದ ತಮ್ಮ ತಾಯಿಯ ಪ್ರೇರೇಪಣೆ, ಸಲಹೆಗಳಿಂದ ಯಾದವ

ಪ್ರಕಾಶರು, ರಾಮಾನುಜರು ಹಾಗೂ ಅವರ ಶಿಷ್ಯ ಕೂರೇಶನೊಂದಿಗೆ ವಾದಮಾಡಿ, ಸೋಲನ್ನು ಒಪ್ಪಿಕೊಂಡು, ಕಾಂಚೀಪೂರ್ಣರ ಆದೇಶದಂತೆ ರಾಮಾನುಜರ ಶಿಷ್ಯ ರಾದರು. ಅವರಿಗೆ ಸಿದ್ಧಾಂತ ಪ್ರಚಾರದಲ್ಲಿ ಬೆಂಬಲ ನೀಡಿದರು.

ರಾಮಾನುಜರ ಇಚ್ಛೆಯಂತೆ ಶಾಸ್ತ್ರಗಳಲ್ಲಿ ಪೂರ್ವಾಪರ ವಿರೋಧ ಬರದಂತೆ, ಸಂನ್ಯಾಸಿಗಳ ಕರ್ತವ್ಯಗಳನ್ನು ಕುರಿತು ಬರೆದ ಇವರ 'ಯತಿಧರ್ಮಸಮುಚ್ಚಯ' ಉತ್ತಮ ಕೃತಿ.

## 5. ಅನಂತಾರ್ಯ (1053)

ಶ್ರೀಮದ್ರಾಮಾನುಜಾಚಾರ್ಯ ಶ್ರೀಪಾದಾಂಭೋರುಹದ್ವಯಂ ।
ಸದುತ್ತಮಾಂಗ ಸಂಧಾರ್ಯ ಮನಂತಾರ್ಯಮಹಂ ಭಜೇ ॥ ೧ ॥

ಇವರ ಮೊದಲ ಹೆಸರು ಆನಂದಾನ್ ಪಿಳ್ಳೈ. ಮೈಸೂರು ದೇಶದ ಶ್ರೀರಂಗ ಪಟ್ಟಣದ ಬಳಿಯ ಕಿರಂಗೂರು ಜನ್ಮಸ್ಥಳ. ರಾಮಾನುಜರ ಶಿಷ್ಯರಾಗಿ ಸಿಂಹಾ ಸನಾಧಿಪತಿಗಳಾಗಿದ್ದರು.

ರಾಮಾನುಜರ ಇಚ್ಛೆಯಂತೆ, ಕಾಡಿನ ಮಧ್ಯದಲ್ಲಿದ್ದು, ಭೂ ವೈಕುಂಠವೆನಿಸಿದ್ದ, ತಿರುಮಲೆಗೆ ಹೋಗಿ, ಅಲ್ಲಿ ತಮ್ಮ ಪತ್ನಿಯ ಸಹಾಯದಿಂದ ಕೆರೆಯೊಂದನ್ನು ನಿರ್ಮಿಸಿ, ಹೂತೋಟವನ್ನು ಬೆಳೆಸಿ, ಶ್ರೀನಿವಾಸ ದೇವರಿಗೆ ಮಾಲಾಕೈಂಕರ್ಯ ಮಾಡು ತ್ತಿದ್ದರು. ಆ ಕೆರೆಗೆ ಅನಂತಾರ್ಯರ ಕೆರೆ ಎಂದೂ, ಹೂತೋಟಕ್ಕೆ ರಾಮಾನುಜಂ ಎಂದೂ ಹೆಸರು ಬಂದಿತು. ಶ್ರೀನಿವಾಸದೇವರ ಗಲ್ಲಕ್ಕೆ ಪಚ್ಚೆ ಕರ್ಪೂರವನ್ನು ಹಚ್ಚುವ ಸೇವೆ ಇವರಿಂದ ಆರಂಭವಾಯಿತು.

ಶ್ರೀಶೈಲಪೂರ್ಣ, ಪರಾಶರಭಟ್ಟ, ನಂಜೀಯರ್ ಇವರ ಸಮಕಾಲೀನರು.

ತೀರ್ಥಯಾತ್ರೆ ಮಾಡಿಬಂದು, ಅರಿತಿದ್ದ ಶ್ರೀವೈಷ್ಣವ ತತ್ತ್ವಗಳನ್ನೂ ಚೆನ್ನಾಗಿ ಪ್ರಚಾರ ಮಾಡಿದರು. ಇವರು ದೇವರಿಗಿಂತ ಆಚಾರ್ಯರಿಗೇ ಹೆಚ್ಚು ಪ್ರಾಮುಖ್ಯತೆ ಕೊಟ್ಟಿದ್ದಾರೆ. 'ಮಂಗಳಾಶಾಸನದಶಕಂ' ಇವರ ಕೃತಿ.

ನಮ್ಮ ದೇಹ ಮನಸ್ಸುಗಳನ್ನು ಶುದ್ಧವಾಗಿಟ್ಟುಕೊಂಡು, ಶಾಂತಿ, ಭಕ್ತಿ ಇರುವ ಸ್ಥಳಗಳಲ್ಲಿ ವಾಸಿಸುತ್ತ, ಯೋಗ್ಯ ಗುರುವಿಗಾಗಿ ಕಾದಿದ್ದು, ಈ ಸಂಸಾರ ದಿಂದ ಬಿಡುಗಡೆ ಹೊಂದಬೇಕು. ಧರ್ಮಸಾಹಿತ್ಯದಲ್ಲಿ ಯೋಗ್ಯವಾದುದನ್ನು ಆರಿಸಿ ಗ್ರಹಿಸಬೇಕು. ನಮ್ಮಲ್ಲಿರುವ ತಪ್ಪುಗಳನ್ನು ತಿದ್ದಿಕೊಂಡು, ಹೊಗಳಿಕೆಗೆ ಆಸೆಪಡದೆ ಜೀವಿಸಬೇಕು—ಎಂದು ಉಪದೇಶಿಸುತ್ತಿದ್ದರು.

ಇವರ ಮಗ ರಾಮಾನುಜನೂ, ತಂದೆಯಂತೆ ತೋಟವನ್ನು ಬೆಳೆಸಿ ದೇವರ ಹೂ ಕೈಂಕರ್ಯವನ್ನು ಮಾಡುತ್ತಿದ್ದರು.

## 6. ಪರಾಶರ ಭಟ್ಟ (1073–1165)

ಶ್ರೀ ಪರಾಶರ ಭಟ್ಟಾರ್ಯ ಶ್ರೀರಂಗೇಶ ಪುರೋಹಿತಃ ।
ಶ್ರೀವತ್ಸಾಂಕಸುತ ಶ್ರೀಮಾನ್ ಶ್ರೇಯಸೇಽಸ್ತು ಭೂಯಸೇ ॥ ೧ ॥

ಶ್ರೀರಂಗದ ರಂಗನಾಥಸ್ವಾಮಿಯ ಪುರೋಹಿತರಾಗಿದ್ದರು. ತಂದೆ ಕೂರೇಶ, ತಾಯಿ ಆಂಡಾಳಮ್ಮ. ವಿಷ್ಣು ಪುರಾಣದ ಕರ್ತೃ ಪರಾಶರರ ಹೆಸರನ್ನು, ಶಾಶ್ವತಗೊಳಿಸಬೇಕೆಂಬ ಯಾಮುನರ ಅಂತಿಮೇಚ್ಛೆಯನ್ನು ನೆರವೇರಿಸಲೋಸುಗ, ರಾಮಾನುಜರು ಇವರಿಗೆ ಈ ಹೆಸರನ್ನು ಇಟ್ಟರು. ಆಮೇಲೆ ಇವರಿಂದ ವಿಷ್ಣು ಸಹಸ್ರನಾಮಕ್ಕೆ ವ್ಯಾಖ್ಯಾನವನ್ನು ಬರೆಸಿದರು.

ಇವರಿಗೆ ತಂದೆಯೇ ಮೊದಲ ಗುರುವಾದರೂ, ರಾಮಾನುಜರ ಇಚ್ಛೆಯಂತೆ ಎಂಬಾರ್‌ರವರಿಂದ ಉಪದೇಶ ಪಡೆದು ಅವರ ಶಿಷ್ಯರಾದರು. ಇವರ ಪತ್ನಿಯಾದ ಅಕ್ಕಚ್ಚಮ್ಮ, ಮಹಾಪೂರ್ಣರ ಸಂಬಂಧಿಯೊಬ್ಬರ ಮಗಳು.

ಸಂಸ್ಕೃತ ವಿದ್ವತ್ತಿಗೆ ಹಾಗೂ ಧರ್ಮಸಾಹಿತ್ಯಗಳಿಗೆ ಅಪಾರ ಸೇವೆ ಸಲ್ಲಿಸಿದ ಕುಟುಂಬದಲ್ಲಿ ಜನಿಸಿದ ಇವರು, ಚಿಕ್ಕ ವಯಸ್ಸಿನಲ್ಲಿಯೇ ಅತ್ಯಂತ ಮೇಧಾವಿಗಳೆಂದು ಪ್ರಸಿದ್ಧರಾಗಿದ್ದರು. ಜ್ಞಾನಿ, ಭಕ್ತ ಆದ ಇವರಲ್ಲಿ, ಶ್ರೀವೈಷ್ಣವ ಮತ ಮತ್ತು ಸಂಪ್ರದಾಯಗಳನ್ನು ಸ್ಥಿರವಾಗಿ ನಿಲ್ಲಿಸುವ ಶಕ್ತಿ ಇದೆ ಎಂದು ತಿಳಿದ ರಾಮಾನುಜರು, ತಾವೇ ಸ್ವತಃ ಇವರನ್ನು ಉತ್ತರಾಧಿಕಾರಿಯಾಗಿ ಮಾಡಿ, ಶ್ರೀ ವೈಷ್ಣವ ಮಠಗಳ, ರಂಗನಾಥ ದೇವಾಲಯದ ನಾಯಕರನ್ನಾಗಿ ಮಾಡಿದರು. ರಾಮಾನುಜರ ಅಣತಿಯಂತೆ ಶ್ರೀಶೈಲದ ಅನಂತಾರ್ಯರೊಂದಿಗೆ ಹೋಗಿ, ಅದ್ವೈತಿಯಾದ ವೇದಾಂತಿ ಮಾಧವದಾಸ ಎಂಬುವರನ್ನು ವಾದದಲ್ಲಿ ಸೋಲಿಸಿ ಶಿಷ್ಯರನ್ನಾಗಿ ಮಾಡಿಕೊಂಡರು.

ತಂದೆಯಂತೆಯೇ ತಮಿಳಿಗಿಂತ ಸಂಸ್ಕೃತದಲ್ಲಿಯೇ ಹೆಚ್ಚು ಪಾಂಡಿತ್ಯವಿದ್ದ ಇವರು, ಶ್ರೀರಂಗರಾಜಸ್ತವ, ಶ್ರೀಗುಣರತ್ನಕೋಶ, ಅಷ್ಟಶ್ಲೋಕೀ, ರಂಗನಾಥ ಸ್ತೋತ್ರ, ತತ್ತ್ವ ರತ್ನಾಕರ, ಅಧ್ಯಾತ್ಮಖಂಡದ್ವಯ ವಿವರಣ, ಕ್ರಿಯಾದೀಪ, ಪಾಂಚರಾತ್ರರಕ್ಷಾ ಸ್ತೋತ್ರ, ಜಿತಂತಾಸ್ತೋತ್ರ ಎಂಬ ಕೃತಿಗಳನ್ನು ರಚಿಸಿದ್ದಾರೆ. ವಿಷ್ಣು ಸಹಸ್ರನಾಮಕ್ಕೆ ಇವರು ಬರೆದ 'ಭಗವದ್ಗುಣದರ್ಪಣ'ವೆಂಬ ವ್ಯಾಖ್ಯಾನವು ಬಹು ಸ್ವಾರಸ್ಯವಾಗಿದೆ.

ಇವರ ಸೂಕ್ತಿಗಳಲ್ಲಿ ರಸಿಕತೆ ಹಾಗೂ ವಿಲಕ್ಷಣ ರಸಾನುಭವಗಳಿವೆ. ರಾಮಾನುಜರಿಂದ ಪಡೆದ ಲಕ್ಷ್ಮೀರಹಸ್ಯ ಜ್ಞಾನವೈಭವಗಳನ್ನು, ತಮ್ಮ ದಿವ್ಯ ಸೂಕ್ತಿಯಾದ ಶ್ರೀ ಗುಣರತ್ನಕೋಶವೆಂಬ ಸ್ತೋತ್ರದಲ್ಲಿ ಪ್ರಕಾಶಪಡಿಸಿದ್ದಾರೆ. ಕೈಶಿಕಿ ಪುರಾಣಕ್ಕೂ ವ್ಯಾಖ್ಯಾನ ಬರೆದರು.

ಯಾಮುನ, ರಾಮಾನುಜ ಇಬ್ಬರ ಸಮಕ್ಕೆ ನಿಲ್ಲುವಂತಹ ಆಚಾರ್ಯರೆನಿಸಿ, ತಮಿಳು–ಸಂಸ್ಕೃತ ಎರಡೂ ಭಾಷೆಗಳಲ್ಲಿ ಸಾಹಿತ್ಯವನ್ನು ರಚಿಸಿ ಶ್ರೀವೈಷ್ಣವ ಮತವನ್ನು ಸಂರಕ್ಷಿಸಿದರು. ಇವರ ಕೃತಿಗಳಿಂದ ವೇದಾಂತ ದೇಶಿಕರು ಹೆಚ್ಚು ಪ್ರಭಾವಿತರಾಗಿದ್ದಾರೆ.

ಇವರು ವಡಗಲೆ–ತೆಂಗಲೆ ಇಬ್ಬರಿಗೂ ಪ್ರಿಯರಾದ ಆಚಾರ್ಯರು ಆಗಿದ್ದು, ಎರಡು ಪಂಗಡಗಳಿಗೂ ಇವರ ಕೃತಿಗಳಲ್ಲಿ ಪ್ರೇಮ, ಆದರಗಳಿವೆ.

## 7. ನಂಜೀಯರ್ [1112–1213]

ನಮೋ ವೇದಾಂತ ವೇದ್ಯಾಯ ಜಗನ್ಮಂಗಳ ಹೇತವೇ ।
ಯಸ್ಯವಾಗಮೃತಾಸಾರ ಪೂರಿತಂ ಭುವನತ್ರಯಂ ॥ ೧ ॥

ಇವರು ಮೇಲುಕೋಟೆ ಅಥವಾ ತಿರುನಾರಾಯಣಪುರದ ಬಳಿಯ ಕಾಂಗೋಡನಹಳ್ಳಿಯಲ್ಲಿ ಜನಿಸಿದರು. ಷಡ್ದರ್ಶನಗಳಲ್ಲಿಯೂ ಪೂರ್ಣ ವಿದ್ವಾಂಸರಾದ ಇವರು, ಮೊದಲು ಮಾಧವಸೂರಿ ಎಂಬ ಹೆಸರಿನಿಂದ ವೇದಾಂತ ಜ್ಞಾನದಲ್ಲಿ ಪ್ರತಿಭಾಶಾಲಿ ಎನಿಸಿದ್ದರು. ಇವರನ್ನು 'ವೇದಾಂತಿ' ಎಂದೇ ಕರೆಯುತ್ತಿದ್ದರು.

ಅದ್ವೈತ ಸಿದ್ಧಾಂತದ ಪ್ರಸಿದ್ಧ ಆಚಾರ್ಯರೆನಿಸಿದ್ದ ಇವರು, ಪರಾಶರಭಟ್ಟರೊಡನೆ ಅನೇಕ ದಿನಗಳ ಕಾಲ ತರ್ಕದಲ್ಲಿ ವಾದಮಾಡಿ, ಅವರ ಪಾಂಡಿತ್ಯಕ್ಕೆ ತಲೆದೂಗಿ, ಅವರ ಶಿಷ್ಯರಾಗಿ ವಿಶಿಷ್ಟಾದ್ವೈತವನ್ನು ಅಂಗೀಕರಿಸಿದರು. ರಾಮಾನುಜರ ಶಿಷ್ಯರೂ, ಪರಾಶರಭಟ್ಟರ ಸಮಕಾಲೀನರೂ ಆಗಿದ್ದ ವಂಗಿವಾಗೀಶ್ವರ ಅಥವಾ ಶ್ರೀರಂಗನಾರಾಯಣಾಚಾರ್ಯರ ಪ್ರಭಾವವೂ ವೇದಾಂತಿಯನ್ನು ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಸೇರಿಸಲು ಕಾರಣವಾಗಿದೆ. ಇವರಲ್ಲಿ ಅಪಾರ ಪ್ರೇಮ ಹೊಂದಿದ್ದ ಪರಾಶರರು ಇವರನ್ನು ನಮ್ಮ ದೊಡ್ಡ ಸಂನ್ಯಾಸಿ ಅಥವಾ ನಂಜೀಯರ್ ಎಂದು ಕರೆದರು. ವಿಶಿಷ್ಟಾದ್ವೈತವನ್ನು ಒಪ್ಪಿದ ಮಾಧವಸೂರಿಗಳು ತಮ್ಮ ಹೆಸರನ್ನು ನಾರಾಯಣಮುನಿ, ರಂಗನಾಥಮುನಿ ಎಂದು ಬದಲಾಯಿಸಿಕೊಂಡು, ರಾಮಾನುಜ ದರ್ಶನದ ಪೂರ್ಣಜ್ಞಾನವನ್ನು ಪಡೆದು, ಅದರ ಶ್ರೇಷ್ಠ ಪ್ರತಿಪಾದಕರಾಗಿದ್ದರು

ಶ್ರೀವೈಷ್ಣವ ಮತದ ತತ್ತ್ವ, ತಂತ್ರ, ಪ್ರಪತ್ತಿ, ಪಾಂಚರಾತ್ರಪೂಜೆ, ಪಂಚಕಾಲ ಕೃತ್ಯ ತತ್ತ್ವ–ಎಲ್ಲದರ ಮೇಲೂ ಟೀಕೆಗಳನ್ನು ರಚಿಸಿದ್ದಾರೆ. ಗುರುಗಳಾದ ಪರಾಶರ ಭಟ್ಟರಿಂದ ತಿಳಿದ ಶ್ರೀತತ್ತ್ವಸಾರವನ್ನು, ತಮ್ಮ ಶ್ರೀಸೂಕ್ತ ಭಾಷ್ಯದಲ್ಲಿ ವಿವರಿಸಿದ್ದಾರೆ. ಪರಾಶರಭಟ್ಟರ ಆಜ್ಞೆಯಂತೆ ತಿರುವಾಯ್ಮೊಳಿಗೆ ತಮಿಳಿನಲ್ಲಿ ಒಂಬದನಾಯಿರಪ್ಪಡಿ ಎಂಬ 9000 ಪದ್ಯಗಳ ವ್ಯಾಖ್ಯಾನವನ್ನು ರಾಮಾಯಣ-

ಮಹಾಭಾರತಗಳಲ್ಲಿರುವಂತೆ ಅನುಷ್ಟುಪ್ ಛಂದಸ್ಸಿನಲ್ಲಿ ರಚಿಸಿದ್ದಾರೆ. ಇವರ ಕೃತಿಯಲ್ಲಿ ಕಿಡಾಂಬಿಯಾಚ್ಚಾನ್‌ರವರಲ್ಲಿ ಕೇಳಿ ತಿಳಿದ ಅರ್ಥವೇ ಇದೆ. ತಿರುವಾಯ್ಮೊಳಿಯ ವ್ಯಾಖ್ಯಾನವನ್ನು ನೂರು ಸಲ ಪ್ರವಚನ ಮಾಡಿದ ಮಹಾಪುರುಷರಿವರು.

ಶ್ರೀಸೂಕ್ತಭಾಷ್ಯವಲ್ಲದೆ, ಅಷ್ಟಶ್ಲೋಕೀವ್ಯಾಖ್ಯೆ, ಸ್ತೋತ್ರರತ್ನಟೀಕೆ, ಆರಾಧನ ಸಂಗ್ರಹಕಾರಿಕೆ, ಭಗವದ್ಗೀತಾರ್ಥ ಸಂಗ್ರಹ ವಿಭಾಗ, ಬ್ರಹ್ಮಸೂತ್ರಭಾವ ಪ್ರಕಾಶಿಕೆ—ಇವುಗಳನ್ನೂ ಬರೆದಿದ್ದಾರೆ. ಇವರ ಕೃತಿಗಳನ್ನು ವೇದಾಂತದೇಶಿಕರು ಉದಾಹರಿಸಿದ್ದಾರೆ. ಇವರಿಗೂ ವಡಗಲೆ—ತೆಂಗಲೆ ಎರಡೂ ಪಂಗಡದ ಶಿಷ್ಯರಿದ್ದರೆಂದು ತಿಳಿದು ಬರುತ್ತದೆ.

## 8. ನಂಪಿಳ್ಳೈ (1207–1302)

ವೇದಾಂತವೇದ್ಯಾಮೃತವಾರಿರಾಶೇಃ ।
ವೇದಾರ್ಥ ಸಾರಾಮೃತ ಪೂರಮಗ್ರ್ಯಂ ॥
ಆದಾಯ ವರ್ಷಂತಮಹಂಪ್ರಪದ್ಯೇ ।
ಕಾರುಣ್ಯಪೂರ್ಣಂ ಕಲಿವೈರಿ ದಾಸಃ ॥ ॥ ೧ ॥

ಕಲಿವೈರಿ, ಮೊದಲನೆ ಲೋಕಾಚಾರ್ಯ, ತಿರುಕ್ಕಲಿಕನ್ರಿದಾಸ, ನಂಬೂರ ವರದ ರಾಜಾಚಾರ್ಯ ಎಂಬ ಹೆಸರುಗಳಿದ್ದ ಇವರು, ನಂಜೀಯರ್‌ರವರ ಶ್ರೇಷ್ಠ ಶಿಷ್ಯರು. ನ್ಯಾಯ, ಮೀಮಾಂಸಾದಿ ಶಾಸ್ತ್ರಗಳಲ್ಲಿ ಹಾಗೂ ಸಂಪ್ರದಾಯ ಗ್ರಂಥಗಳಲ್ಲಿ ಉದ್ದಾಮ ಪಂಡಿತರಾಗಿದ್ದು, ಸಂಸ್ಕೃತ-ತಮಿಳು ಎರಡೂ ಭಾಷೆಗಳಲ್ಲಿ ಪ್ರೌಢಿಮೆ ಇದ್ದು, ಉಭಯ ವೇದಾಂತ ಉಪನ್ಯಾಸಕರೆನಿಸಿದ್ದರು. ವಿನಯವಂತರಾದ ಇವರ ವಾಗ್ವೈಖರಿ, ರಹಸ್ಯಾರ್ಥವನ್ನು ಸರ್ವಸಾಮರಸ್ಯದಿಂದ ವಿವರಿಸುವ ಕ್ರಮ, ಅನ್ಯಾದೃಶವಾಗಿದ್ದುವು. ದಿವ್ಯ ಪ್ರಬಂಧ, ಪುರಾಣ, ಇತಿಹಾಸಗಳಿಗೆಲ್ಲ ಬಹಳ ಸ್ವಾರಸ್ಯವಾದ ಅರ್ಥ ಹೇಳುತ್ತಿದ್ದ ಇವರ ಕಾಲಕ್ಷೇಪ ಗೋಷ್ಠಿಗೆ, ಸಾವಿರಾರು ಜನ ಶ್ರದ್ಧಾಭಕ್ತಿಗಳಿಂದ ಬಂದು ನೇರುತ್ತಿದ್ದರು.

ಇವರು ಬಹು ಆಚಾರ್ಯನಿಷ್ಠರು. ಪೂರ್ವಾಚಾರ್ಯರುಗಳು ನಿರ್ದಿಷ್ಟವಾಗಿ ರೂಪಿಸಿದ ತತ್ತ್ವಾರ್ಥಗಳನ್ನು ತಾವು ನಿಷ್ಕರ್ಷಿಸಿ, ಜನರಿಗೆ ವಿವರವಾಗಿ ಬೋಧಿಸಿ, ಬೋಧಿಸಿದಂತೆಯೇ ಅನುಷ್ಠಾನಮಾಡಿ ತೋರಿಸುತ್ತಿದ್ದರು. ಸಂಸ್ಕೃತದ ಗ್ರಂಥಗಳಿಗಿಂತ ತಮಿಳು ಪ್ರಬಂಧವೇ ಮೇಲು ಎಂದು ಇವರು ಹೇಳುತ್ತಿದ್ದರು. ಬಹುಶಃ ಇದೇ ವಡಗಲೆ-ತೆಂಗಲೆ ಭೇದವು ಹೆಚ್ಚಾಗಲು ಮತ್ತು ಉಭಯ ಸಿಂಹಾಸನಾಧಿಪತಿಯಾಗಿದ್ದ ವರದರಾಜಾಚಾರ್ಯರು ಶ್ರೀರಂಗವನ್ನು ಬಿಟ್ಟು ಕಂಚಿಗೆ ಹೋಗಲೂ ಕಾರಣವಾಯಿತು.

ಗುರುಗಳಾದ ನಂಜೀಯರ್, ಕಾಲಕ್ಷೇಪದಲ್ಲಿ ತಿರುವಾಯ್ಮೊಳಿಗೆ ಹೇಳಿದ ದಿವ್ಯಾರ್ಥಗಳನ್ನು ಬಹು ಶ್ರದ್ಧೆಯಿಂದ ಆಲಿಸುತ್ತಿದ್ದರು. ಗುರುಗಳ ಕೃತಿಯು ಕಳೆದುಹೋದಾಗ, ತಾವು ಕೇಳಿದುದನ್ನೆಲ್ಲ ಸೇರಿಸಿ, ಕೇವಲ ಜ್ಞಾಪಕ ಶಕ್ತಿಯಿಂದ ಗುರುಗಳಿಗಾಗಿ, ತಮ್ಮ ಸುಂದರವಾದ ಬರವಣಿಗೆಯಲ್ಲಿ ಒಂಬದಾಯಿರಪ್ಪಡಿ ವ್ಯಾಖ್ಯಾನವನ್ನು ರಚಿಸಿಕೊಟ್ಟರು.

ಸಕಲ ಶಾಸ್ತ್ರಪಾರಂಗತರೂ, ಮಹಾ ವಿದ್ವಾಂಸರೂ, ಮುದಲಿಯಾಂಡಾನ್ ರವರ ಮೊಮ್ಮಗನೂ ಆದ ಕಂದಾಡೈ ತೋಳಪ್ಪರ್‌ರವರು, ಜನಪ್ರಿಯರಾಗಿದ್ದ ನಂಪಿಳ್ಳೈರವರನ್ನು ಅಪಮಾನಗೊಳಿಸಿ, ಆಮೇಲೆ ಅವರ ಕ್ಷಮೆ ಬೇಡಿ, ಅವರ ಶಿಷ್ಯ ನಾಗಿ ಅವರನ್ನು ಲೋಕಾಚಾರ್ಯರೆಂದು ಹೊಗಳಿದ್ದಾರೆ.

ಈ ಪ್ರಪಂಚದಲ್ಲಿ ತನಗೆ ಒದಗಿದ ಸಂಪತ್ತು, ಕೇವಲ ತನ್ನ ಸ್ವಂತ ಅನುಭವ ಕ್ಕಾಗಿಯೇ ಇದೆ ಎನ್ನುವುದು ನರಕಪ್ರಾಯ; ಅದು ತನ್ನ ಸ್ವಂತ ವಿನಿಯೋಗದ ಜೊತೆಗೆ ಭಗವತ್ಸೇವೆಗಾಗಿಯೂ ಇದೆ ಎಂದೆಣಿಸುವುದು ಸ್ವರ್ಗಪ್ರಾಯ; ಆದರೆ ಅದು ಭಗವದ್ಭಾಗವತರ ಸೇವೆಗಾಗಿ ಮಾತ್ರವೇ ಇದೆ ಎಂದು ತಿಳಿಯುವುದು ಪರಮ ಪದಪ್ರಾಯ—ಎಂದು ಇವರು ಹೇಳುತ್ತಿದ್ದರು.

## 9. ಪೆರಿಯವಾಚ್ಚಾನ್ ಪಿಳ್ಳೈ (1226-1321)

ಇವರು ನಂಪಿಳ್ಳೈಯವರ ಶಿಷ್ಯರು. ಇವರಿಗೆ ಕೃಷ್ಣಸೂರಿ, ಅಭಯಪ್ರದ ರಾಜ ಎಂಬ ಹೆಸರುಗಳಿದ್ದುವು. ಇವರು ಆ ಕಾಲದ ಉತ್ತಮ ಬರಹಗಾರರಾಗಿದ್ದು ಅನೇಕ ಗ್ರಂಥ, ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಗುರುಗಳಲ್ಲಿ ಅಪಾರ ಗೌರವ ಹೊಂದಿದ್ದರು. ಗುರುಗಳ ವ್ಯಾಖ್ಯಾನವನ್ನು ಅನುಸರಿಸಿ ತಿರುವಾಯ್ಮೊಳಿಗೆ, ಇವರು ಇರುಪತ್ತು ನಾಲಾಯಿರಪ್ಪಡಿ ಎಂಬ 24,000 ಪದ್ಯಗಳ ಮನಮೋಹಕವಾದ ಟೀಕೆ ಯನ್ನು ಬರೆದಿದ್ದಾರೆ. ಮುಂದೆ ಬಂದ ಆಚಾರ್ಯರಿಗೆಲ್ಲ ಇದು ತುಂಬಾ ಸಹಾಯಕ ವಾಯಿತು.

ಇವರ ಕಾಲದಲ್ಲಿಯೂ ವಡಗಲೆ, ತೆಂಗಲೆ ಭೇದ ಇದ್ದರೂ, ಇವರನ್ನು ವ್ಯಾಖ್ಯಾನ ಚಕ್ರವರ್ತಿ, ಟೀಕಾಕಾರರು ಎಂದು ಎರಡು ಪಂಗಡದವರೂ ಹೊಗಳಿ ದ್ದಾರೆ. ಇವರು ಬಿಟ್ಟಿದ್ದ ಕೆಲವು ಪಾಶುರಗಳಿಗೆ, ವರವರಮುನಿಗಳು ವ್ಯಾಖ್ಯಾನ ಬರೆದಿದ್ದಾರೆ. ಇವರ ವ್ಯಾಖ್ಯಾನದಿಂದ, ಶೈವಭಕ್ತ ನಾಯನ್ಮಾರರ ತಮಿಳು ಪದ್ಯ ಗಳನ್ನು ಅರ್ಥಮಾಡಿಕೊಳ್ಳಲು, ಶೈವಭಕ್ತರಿಗೂ ಸಹಾಯವಾಯಿತೆಂದು ತಿಳಿದು ಬರುತ್ತದೆ.

# 10. ವಡಕ್ಕುತ್ತಿರುವೀಧಿಪಿಳ್ಳೈ [1226]

ಶ್ರೀಕೃಷ್ಣಪಾದಪಾದಾಬ್ಜೇ ನಮಾಮಿ ಶಿರಸಾಸದಾ ।
ಯತ್ಪ್ರಸಾದ ಪ್ರಭಾವೇನ ಸರ್ವಸಿದ್ಧಿರಭೂನ್ಮಮ ॥ ೧ ॥

ಇವರೂ ನಂಪಿಳ್ಳೈಯವರ ಶಿಷ್ಯರು. ಇವರಿಗೆ ಶ್ರೀಕೃಷ್ಣಪಾದ, ಸುಂದರ ವರಯೋಗಿ ಎಂಬ ಹೆಸರುಗಳಿದ್ದುವು. ಇವರು ಮಹಾ ವಿದ್ವಾಂಸರು ಹಾಗೂ ಪರಮ ವಿರಕ್ತರು.

ಕಾಲಕ್ಷೇಪ ಸಮಯದಲ್ಲಿ ನಂಪಿಳ್ಳೈಯವರು ತಿರುವಾಯ್ಮೊಳಿಗೆ ಹೇಳಿದ ಸ್ವಾರಸ್ಯವಾದ ಅರ್ಥವಿಶೇಷವನ್ನು ಸಂಗ್ರಹಿಸಿ, ಗುರುಗಳ ಅಪ್ಪಣೆಯಂತೆ ಇವರು ಬರೆದ ಈಡು ಮುಪ್ಪತ್ತಾರಾಯಿರಪ್ಪಡಿ ಎಂಬ 36,000 ಪದ್ಯಗಳ ವ್ಯಾಖ್ಯಾನ ಗ್ರಂಥವು ಅದ್ಭುತವಾದುದು. ಗಹನವಾದ ಪಾಶುರಗಳ ವಿವರಣೆಯಿರುವ ಈ ವ್ಯಾಖ್ಯಾನವು, ಬಹಳ ವ್ಯಾಪಕವೂ, ಪ್ರಭಾವಪೂರ್ಣವೂ ಆಗಿದ್ದು, ತಮಿಳಿನಲ್ಲಿರುವ ಇದು ಸಂಸ್ಕೃತದಲ್ಲಿರುವ ಶ್ರುತ ಪ್ರಕಾಶಿಕೆಗೆ ಸಮ, ಎನಿಸಿಕೊಂಡಿರುವ ಪವಿತ್ರ ಗ್ರಂಥ ವಾಗಿದೆ. ಅತ್ಯದ್ಭುತವಾದ ಈ ಈಡುಮುಪ್ಪತ್ತಾರಾಯಿರಪ್ಪಡಿ ವ್ಯಾಖ್ಯಾನ ಗ್ರಂಥವು ಕಾಲಕ್ಷೇಪ ರೂಪದಲ್ಲಿ ಪ್ರವಚನ ಮಾಡಿದುದಾದರೂ, ಇದು ಪ್ರಮಾಣ ಸಂಪ್ರದಾಯಾನುಸಾರವಾಗಿ ಅಪೂರ್ವವಾದ ಅರ್ಥವಿಶೇಷಗಳನ್ನು ಉಪದೇಶಿಸುವ ಗ್ರಂಥವಾಗಿದೆ.

ಇತರರ ನೋವು, ದುಃಖಗಳನ್ನು ತನ್ನದೆಂದೇ ಭಾವಿಸಬೇಕು. ಭಕ್ತರಿಗೆ ಸೇವೆ ಸಲ್ಲಿಸಬೇಕು. ನಾವು ಪರಮಾತ್ಮನೊಬ್ಬನಿಗೆ ಮಾತ್ರವೇ ಶೇಷಭೂತರು. ಶ್ರೀವೈಷ್ಣವರಲ್ಲಿ ಯಾವ ರೀತಿಯ ಭೇದವನ್ನೂ ಎಣಿಸಬಾರದು—ಎಂಬುದು ಈ ವ್ಯಾಖ್ಯಾನ ಗ್ರಂಥದ ಸಾರ. ಆಳ್ವಾರುಗಳ ತಮಿಳು ಪ್ರಬಂಧದಿಂದಲೂ ಅಗಾಧ ಜ್ಞಾನ ಸಿಗುತ್ತದೆ ಎಂಬುದಕ್ಕೆ ಇದು ಉದಾಹರಣೆ.

ಆಚಾರ್ಯನಿಷ್ಠೆಯು ಮುಖ್ಯ, ಭಾಗವತಾಪಚಾರಕೂಡದು, ಎಂಬುದೇ ಇವರ ಮುಖ್ಯ ಉಪದೇಶ. ಪಿಳ್ಳೈಲೋಕಾಚಾರ್ಯ ಮತ್ತು ಅಳಗಿಯ ಮಣವಾಳ ಪೆರುಮಾಳ್ ನಾಯನಾರ್ ಎಂಬ ಇಬ್ಬರು ಮಕ್ಕಳನ್ನೂ, ಸಕಲ ಶಾಸ್ತ್ರ ಪಾರಂಗತ ರಾಗಿಮಾಡಿ ಶ್ರೀವೈಷ್ಣವ ಮತಕ್ಕೆ ಸೇವೆ ಸಲ್ಲಿಸುವಂತೆ ಮಾಡಿದರು.

ಇವರ ಶಿಷ್ಯ ಪಿನ್ಬಳಗಿಯ ಪೆರುಮಾಳ್ ಜೀಯರ್‌ರವರು ತೆಂಗಲೆ ಸಂಪ್ರ ದಾಯದ ಗುರು ಪರಂಪರೆಯನ್ನು ಬರೆದಿಟ್ಟರು.

ಈಡುಮುಪ್ಪತ್ತಾರಾಯಿರಪ್ಪಡಿ ಗ್ರಂಥದ ಪ್ರವಚನ — ಕಾಲಕ್ಷೇಪಗಳು, ಶ್ರೀರಂಗದಲ್ಲಿನ ದೇವರೆದುರಿಗೆ ಮಣವಾಳ ಮಾಮುನಿಯಿಂದಲೂ, ಮೇಲುಕೋಟೆ

ಯಲ್ಲಿ ಮಣವಾಳ ಮಾಮುನಿಗಳ ಎದುರಿಗೆ ನಾಲೂರಾಚ್ಚಾನ್ ಪಿಳ್ಳೈಯಿಂದಲೂ ನಡೆಯಿತು.

## 11. ಪಿಳ್ಳೈ ಲೋಕಾಚಾರ್ಯ (1264–1327)

ಲೋಕಾಚಾರ್ಯಾಯ ಗುರವೇ ಕೃಷ್ಣಪಾದಸ್ಯಸೂನವೇ ।
ಸಂಸಾರಭೋಗಿ ಸಂದಷ್ಟ ಜೀವ ಜೀವಾತವೇ ನಮಃ ॥ ೧ ॥

ಇವರು ವಡಕ್ಕುತ್ತಿರುವೀಧಿಪಿಳ್ಳೈರವರ ಹಿರಿಯ ಮಗ. ಮೊದಲು ತಂದೆಯ ಬಳಿ ಕಲಿತು, ಆಮೇಲೆ ಶ್ರೀರಂಗದ ಪೀಠಾಧಿಪತಿಯಾಗಿದ್ದ ಪೆರಿಯವಾಚ್ಚಾನ್ ಪಿಳ್ಳೈಯವರ ಶಿಷ್ಯನಾಗಿ, ಗುರುಗಳ ನಂತರ ಅಲ್ಲಿಯ ಪೀಠಾಧಿಪತಿಯಾದರು. ವೇದಾಂತ ದೇಶಿಕರ ಸಮಕಾಲೀನರಾಗಿದ್ದು, ಇಬ್ಬರೂ ವೇದಾಂತ ಧರ್ಮವನ್ನು ರಕ್ಷಿಸಿ ಬೆಳೆಸಲು ಶ್ರಮಿಸಿದ್ದಾರೆ.

ಇವರಿಗೆ ವಾರಣಾದ್ರಿಶವೆಂಬ ಹೆಸರಿದ್ದಿತು. ಇವರು ನಮ್ಮಾಳ್ವಾರರ ಅವತಾರವೆಂದು ಕೆಲವರೂ, ಕಂಚಿಯ ವರದರಾಜಸ್ವಾಮಿಯ ಅವತಾರವೆಂದು ಕೆಲವರೂ ಹೇಳುತ್ತಾರೆ.

ಶ್ರೀರಂಗದಲ್ಲಿದ್ದ ಪೆರಿಯವಾಚ್ಚಾನ್ ಪಿಳ್ಳೈ, ಪಿಳ್ಳೈ ಲೋಕಾಚಾರ್ಯ ಮತ್ತು ಸುದರ್ಶನಾಚಾರ್ಯ ಮೂವರೂ ಸೇರಿ, ಅದ್ವೈತಿಗಳ ಪ್ರಭಾವವನ್ನು ತಡೆಯುವ ಸಲುವಾಗಿ, ತೆಂಗಲೆ–ವಡಗಲೆ ಭೇದವನ್ನು ಮರೆತು, ಕಂಚಿಯಲ್ಲಿದ್ದ ವೇದಾಂತ ದೇಶಿಕರನ್ನು ಶ್ರೀರಂಗಕ್ಕೆ ಆಹ್ವಾನಿಸಿದರು.

1310ರ ಮಲ್ಲಿಕ್ ಕಾಫೂರನ ದಾಳಿಯ ಕಾಲದಲ್ಲಿ ಶ್ರೀಭಾಷ್ಯ, ಶ್ರುತಪ್ರಕಾಶಿಕೆ ಗ್ರಂಥಗಳನ್ನೂ, ಸುದರ್ಶನಾಚಾರ್ಯರ ಮಕ್ಕಳಿಬ್ಬರನ್ನೂ, ವೇದಾಂತ ದೇಶಿಕರು ರಕ್ಷಿಸಿದಂತೆಯೇ, ಪಿಳ್ಳೈ ಲೋಕಾಚಾರ್ಯರು ಶ್ರೀರಂಗದ ರಂಗನಾಥಸ್ವಾಮಿ ವಿಗ್ರಹವನ್ನು ರಕ್ಷಿಸಿ ಮಡಿದರು. ವಡಗಲೆ ಸಂಪ್ರದಾಯದ ಮುಖ್ಯಸ್ಥರಾದ ವೇದಾಂತ ದೇಶಿಕರ ಅಭಿಪ್ರಾಯಗಳನ್ನೆಲ್ಲ, ತೆಂಗಲೆ ಸಂಪ್ರದಾಯದ ಮುಖ್ಯಸ್ಥರಾದ ಪಿಳ್ಳೈ ಲೋಕಾಚಾರ್ಯರು ಒಪ್ಪದಿದ್ದರೂ, ದೇಶಿಕರನ್ನು ಹೊಗಳಿ ಒಂದು ಶ್ಲೋಕವನ್ನು ರಚಿಸಿದ್ದಾರೆ.

ಆದರೂ ಇವರ ಕಾಲದಲ್ಲಿ ಭೇದಗಳು ಬಹು ಹೆಚ್ಚಿ, ತೆಂಗಲೆ–ವಡಗಲೆ ಸಂಪ್ರದಾಯಗಳು ಮತ್ತೆ ಒಂದಾಗಿ ಸೇರಲಾಗದಷ್ಟು ದೂರ ಸಿಡಿದು ನಿಂತಿವೆಯೆಂಬುದೇ ದುಃಖದಾಯಕವಾದ ಸಂಗತಿ.

ತನಿಪ್ರಣವಂ, ತನಿದ್ವಯಂ, ತನಿಚರಮಂ, ಪರಂದಪಡಿ, ಶ್ರಿಯಃಪತಿಪ್ಪಡಿ, ಯಾದೃಚ್ಛಿಕಪ್ಪಡಿ, ಮುಮುಕ್ಷುಪ್ಪಡಿ, ಸಂಸಾರಸಾಮ್ರಾಜ್ಯಂ, ಸಾರಸಂಗ್ರಹಂ, ಅರ್ಚಿರಾದಿ, ಅರ್ಥಪಂಚಕಂ, ತತ್ತ್ವತ್ರಯಂ, ತತ್ತ್ವಶೇಖರಂ, ಶ್ರೀ ವಚನ

ಭೂಷಣ, ಪ್ರಪನ್ನ ಪರಿತ್ರಾಣಂ, ಪ್ರಮೇಯಶೇಖರಂ, ನವವಿಧ ಸಂಬಂಧಂ, ನವ ರತ್ನಮಾಲೆ – ಎಂಬೀ ಅಷ್ಟಾದಶ ವೇದಾಂತಗ್ರಂಥಗಳನ್ನು ಮಣಿಪ್ರವಾಳ ಭಾಷೆಯಲ್ಲಿ ಬರೆದು, ರಾಮಾನುಜದರ್ಶನದ ಪ್ರಚಾರಕ್ಕೆ ಹಾಗೂ ಶ್ರೀವೈಷ್ಣವ ಕುಲಕ್ಕೆ ಮಹೋಪಕಾರ ಮಾಡಿದ್ದಾರೆ. ನಮ್ಮಾಳ್ವಾರರ ತಿರುವಾಯ್ಮೊಳಿಯ ಮೇಲೆ ಪನ್ನೀ ರಾಯಿರಪ್ಪಡಿ ಎಂಬ 12000 ಪದ್ಯಗಳ ಟೀಕೆಯನ್ನು ಬರೆದಿದ್ದಾರೆ.

ಚಿತ್ ಅಚಿತ್ ಈಶ್ವರ ಹಾಗೂ ಶ್ರೀತತ್ತ್ವಗಳ ಪ್ರತಿಪಾದನೆ ಮಾಡಿ, ಪ್ರಪತ್ತಿ ಮಾರ್ಗವನ್ನು ವಿಶದವಾಗಿ ಪ್ರತಿಪಾದಿಸಿ, ಆ ಮೂಲಕ ತೆಂಗಲೈ ಪಂಥದ ಸ್ಥಾಪಕ ರೆನಿಸಿದರು. ಆಚಾರ್ಯ ಪ್ರತಿಪತ್ತಿಯು ಪಂಚಮೋಪಾಯವೆಂದು ಹೇಳಿ ಅದಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದಾರೆ.

ಆಚಾರ್ಯರಲ್ಲಿ ವಿಧೇಯತೆಯಿಂದಿರುವುದು, ಭಕ್ತಿಯಿಂದ ದೇವರಿಗೆ ಹೂವು, ಹಣ್ಣು ಅರ್ಪಿಸುವುದು, ದೇವಾಲಯದ ಪ್ರದಕ್ಷಿಣೆ ನಮಸ್ಕಾರಗಳು, ಸಹಸ್ರನಾಮ ಜಪ, ಪ್ರಬಂಧ ಪಾರಾಯಣ, ಕಾಲಕ್ಷೇಪಗೋಷ್ಠಿಯಲ್ಲಿ ಸೇರುವುದು, ಭಕ್ತ–ಭಾಗವತಸೇವೆ–ಇವು ಶ್ರೀವೈಷ್ಣವನ ಮುಖ್ಯ ಕೈಂಕರ್ಯಗಳೆಂದು ಹೇಳಿದ್ದಾರೆ.

## 12. ಅಳಗಿಯ ಮಣವಾಳಪ್ಪೆರುಮಾಳ್ ನಾಯನಾರ್

ಇವರು ವಡಕ್ಕುತ್ತಿರುವೀಧಿ ಪಿಳ್ಳೈಯವರ ಕಿರಿಯ ಮಗ ಹಾಗೂ ಪಿಳ್ಳೈ ಲೋಕಾಚಾರ್ಯರ ತಮ್ಮ.

ಆಳ್ವಾರಾಚಾರ್ಯರುಗಳ ದಿವ್ಯಸೂಕ್ತಿಗಳಲ್ಲಿನ ಪದಗಳ ಜೋಡಣೆಯಿಂದಲೇ ರಚಿಸಿದ ಇವರ 'ಆಚಾರ್ಯ ಹೃದಯಂ' ಎಂಬ ಗ್ರಂಥವು, ನಮ್ಮಾಳ್ವಾರರ ತಿರುವಾಯ್ಮೊಳಿಯ ಸಾರಾರ್ಥವನ್ನು ಒಳಗೊಂಡಿದೆ. ಇದು ಬಹು ಕಠಿಣವಾಗಿದ್ದು ಅರ್ಥಮಾಡಿಕೊಳ್ಳುವುದು ಕಷ್ಟ. ತಿರುಪ್ಪಾವೈ, ಕಣ್ಣಿನುಣ್ ಶಿರುತ್ತಾಂಬು ಮುಂತಾದ ಕೆಲವು ಪ್ರಬಂಧಗಳಿಗೆ ವ್ಯಾಖ್ಯಾನವನ್ನೂ ಬರೆದಿದ್ದಾರೆ. ಇವರು ಅಣ್ಣನಿಗಿಂತ ಮೊದಲೇ ಪರಮ ಪದವನ್ನು ಹೊಂದಿದರು.

ಇವರ ಶಿಷ್ಯರಾದ ಶ್ರೀರಂಗಸೂರಿ ಅಥವಾ ಕಸ್ತೂರಿ ರಂಗಾಚಾರ್ಯರೆಂಬುವರು, ಕಾರ್ಯಾಧಿಕರಣವಾದ ಮತ್ತು ಕಾರ್ಯಾಧಿಕರಣತತ್ತ್ವ ಎಂಬ ಎರಡು ಗ್ರಂಥಗಳನ್ನು ಬರೆದು, ತೆಂಗಲೆ ಸಂಪ್ರದಾಯವನ್ನು ಸಮರ್ಥಿಸಿದ್ದಾರೆ.

## 13. ನಾಲೂರಾಚ್ಚಾನ್ ಪಿಳ್ಳೈ

ನಾಲೂರು ಪಿಳ್ಳೈ ಮಗನಾದ ಇವರು ಪಿಳ್ಳೈ ಲೋಕಾಚಾರ್ಯರ ಶಿಷ್ಯರಾಗಿದ್ದು, ಮೇಲುಕೋಟೆಯಲ್ಲಿ ಚಲುವನಾರಾಯಣನ ಕೈಂಕರ್ಯದಲ್ಲಿ ನಿರತ

ರಾಗಿದ್ದರು. ಇವರು ಶಿಷ್ಯರಾದ ಜನನ್ಯಾಚಾರ್ಯರ್, ತಿರುವಾಯ್ಮೊಳಿ ಆಚಾರ್ಯ, ತಿರುವಾಯ್ಮೊಳಿ ಪಿಳ್ಳೈಗಳಿಗೆ ಭಗವದ್ವಿಷಯ, ಈಡುಮುಪ [illegible] ಗ್ರಂಥಗಳನ್ನು ಉಪದೇಶಿಸಿದರು.

## 14. ಜನನ್ಯಾಚಾರ್ಯರ್

ನಾಲೂರಾಚ್ಚಾನ್ ಪಿಳ್ಳೈ ಶಿಷ್ಯರಾದ ಇವರು ಶ್ರೇಷ್ಠ ವಿದ್ವಾಂಸರೂ, ಭಾಷಣ ಚತುರರೂ ಆಗಿದ್ದರು. ಪಿಳ್ಳೈ ಲೋಕಾಚಾರ್ಯರ ಶಿಷ್ಯರೂ ಆಗಿದ್ದರು. ಈರಾಯಿರಪ್ಪಡಿ, ನಾಲಾಯಿರಪ್ಪಡಿ, ಶ್ರೀ ವಚನಭೂಷಣ, ಆಚಾರ್ಯರ್ ಹೃದಯ, ತಿರುಪ್ಪಾವೈ ಎಂಬ ವ್ಯಾಖ್ಯಾನ–ರಹಸ್ಯ ಗ್ರಂಥಗಳಲ್ಲಿ ನಿಪುಣರಾಗಿದ್ದರು. ಮೇಲುಕೋಟೆಯಲ್ಲಿ ಚಲುವನಾರಾಯಣಸ್ವಾಮಿಯ ಕೈಂಕರ್ಯದಲ್ಲಿ ನಿರತರಾಗಿದ್ದು, ಕಾಲಕ್ಷೇಪ ಗೋಷ್ಠಿಗಳನ್ನು ನಡೆಸುತ್ತಿದ್ದರು.

ಇವರಿಗೆ ಶ್ರೀಶಾನುದಾಸರ್, ಆಯಿದೇವರಾಜರ್, ತಿರುನಾರಾಯಣಪುರತ್ತು ಆಯ್ ಎಂಬ ಹೆಸರುಗಳಿದ್ದುವು. ಈ ಆಯ್‌ರವರ ಕಾಲಕ್ಷೇಪ ಗೋಷ್ಠಿಯು ಸುಪ್ರಸಿದ್ಧವೆನಿಸಿದ್ದು, ಸಾವಿರಾರು ಭಕ್ತರು ಸೇರುತ್ತಿದ್ದರು. ತಮ್ಮ ಜ್ಞಾನಾನುಭವಗಳನ್ನು ಪೆರಿಯ ನಂಬಿಗಳು ರಾಮಾನುಜರಿಗೆ ಕಲಿಸಿದಂತೆ, ಜನನ್ಯಾಚಾರ್ಯರು ಮಣವಾಳ ಮಾಮುನಿಗಳಿಗೆ ಕಲಿಸಿಕೊಟ್ಟರು. ಇವರ ತಿರುಮಾಳಿಗೆ ದೇವಸ್ಥಾನದ ಬೀದಿಯಲ್ಲಿದೆ.

## 15. ತಿರುವಾಯ್ಮೊಳಿ ಪಿಳ್ಳೈ

ನಮಃ ಶ್ರೀಶೈಲನಾಥಾಯ ಕುಂತೀನಗರ ಜನ್ಮನೇ ।
ಪ್ರಸಾದ ಲಬ್ಧ ಪರಮ ಪ್ರಾಪ್ಯ ಕೈಂಕರ್ಯಶಾಲಿನೇ ॥ ೧ ॥

ರಾಮಾನುಜದಾಸರ ಮೊಮ್ಮಗನೂ, ದೇವರಾಜನ ಮಗನೂ ಆದ ಇವರಿಗೆ, ನಮ್ಮಾಳ್ವಾರರ ತಿರುವಾಯ್ಮೊಳಿಯ ಬಗ್ಗೆ ಇದ್ದ ಪ್ರೀತಿ ಭಕ್ತಿಗಳಿಂದ ಈ ಹೆಸರು ಬಂದಿತು. ಇವರಿಗೆ ಶ್ರೀಶೈಲನಾಥ, ತಿರುಮಲೈಯಾಳ್ವಾರ್ ಎಂಬ ಹೆಸರುಗಳೂ ಇದ್ದುವು.

ಶ್ರೀರಂಗದಲ್ಲಿ ಪಿಳ್ಳೈ ಲೋಕಾಚಾರ್ಯರ, ಹಾಗೂ ಮೇಲುಕೋಟೆಯಲ್ಲಿ ನಾಲೂರಾಚ್ಚಾನ್ ಪಿಳ್ಳೈಯವರ, ಶಿಷ್ಯರಾಗಿದ್ದು ವೇದ, ವೇದಾಂಗ, ಪುರಾಣ, ಇತಿಹಾಸ, ದಿವ್ಯ ಪ್ರಬಂಧಗಳನ್ನೆಲ್ಲಾ ಚೆನ್ನಾಗಿ ಅಧ್ಯಯನಮಾಡಿದ್ದರು. ಪೀಠಾಧಿಪತಿಗಳಾಗಿದ್ದರು. ಚತುರ, ವಾಗ್ಮಿ, ಹಿರಿಯ ಲೇಖಕ ಆಗಿದ್ದು, ಪಿಳ್ಳೈ ಲೋಕಾ

ಚಾರ್ಯರ ಕೆಲವು ಗ್ರಂಥಗಳಿಗೆ ವ್ಯಾಖ್ಯಾನವನ್ನು ಬರೆದುದಲ್ಲದೆ, ಕೆಲವು ಸ್ವತಂತ್ರ ಗ್ರಂಥಗಳನ್ನೂ ಬರೆದಿದ್ದಾರೆ.

ಆಳ್ವಾರ್ ತಿರುನಗರಿಯಲ್ಲಿ ದರ್ಶನ ನಿರ್ವಾಹಕರಾಗಿದ್ದು, ಪ್ರಬಂಧ ಪ್ರವಚನ ದಲ್ಲಿ ಖ್ಯಾತಿ ಪಡೆದಿದ್ದರು. ಆಳ್ವಾರಾಚಾರ್ಯರುಗಳಲ್ಲಿ ಅಸದೃಶ ಪ್ರೀತಿ ಗೌರವ ಗಳನ್ನು ಹೊಂದಿದ್ದು, ಅವರ ದಿವ್ಯ ಆದೇಶಗಳಲ್ಲಿ ಅಪಾರ ಆಸಕ್ತಿ ವಹಿಸಿ, ಅವು ಗಳನ್ನು ಅತ್ಯುತ್ತಮ ರೀತಿಯಲ್ಲಿ ಪ್ರಚಾರ ಮಾಡಬೇಕೆಂಬ ಇವರ ಹಂಬಲವನ್ನು, ಇವರ ಶಿಷ್ಯ ಮಣವಾಳ ಮಾಮುನಿಗಳು ಪೂರೈಸಿದರು.

## 16. ಮಣವಾಳ ಮಾಮುನಿ [1370–1443]

ಶ್ರೀಶೈಲೇಶ ದಯಾಪಾತ್ರಂ ಧೀ ಭಕ್ತ್ಯಾದಿ ಗುಣಾರ್ಣವಂ ।
ಯತೀಂದ್ರ ಪ್ರವಣಂ ವಂದೇ ರಮ್ಯ ಜಾಮಾತರಂ ಮುನಿಂ ॥ ೧ ॥

ತಿರುನಲ್ವೇಲಿಯ ಆಳ್ವಾರ್ ತಿರುನಗರಿಯಲ್ಲಿ, ನಮ್ಮಾಳ್ವಾರ್ ಹುಟ್ಟಿದ ಊರಿ ನಲ್ಲಿಯೇ, ಜನಿಸಿದರು. ಶೊಟ್ಟೆ ಕುಲದ ಗೋಮಠ ತಿರುನಾವೀರುಡೈಯ ಪಿರಾನ್ ತಾತರಣ್ಣರ್ ಅರ್ಯೆಯಾರ್ ಇವರ ತಂದೆ. ಕೊಲ್ಲಿಕಾವಲಿದಾಸರ ಮಗಳು ಶ್ರೀರಂಗ ನಾಚ್ಚಿಯಾರ್ ಇವರ ತಾಯಿ. ಇವರಿಗೆ ಶ್ರೀಶೈಲೇಶದಯಾಪಾತ್ರ, ರಾಮಾನುಜರ್ ಪೊನ್ನಡಿ, ರಮ್ಯಜಾಮಾತೃ, ವರವರಮುನಿ, ಅಳಗಿಯ ಮಣವಾಳನ್, ವಿಶದ ವಾಕ್ ಶಿಖಾಮಣಿ, ಯತೀಂದ್ರ ಪ್ರವಣ, ಮುಪ್ಪತ್ತಾರಾಯಿರಪ್ಪಡಿ ಪೆರುಕ್ಕರ್ ಎಂಬ ಹೆಸರುಗಳೂ ಇದ್ದುವು.

ವೇದಾಂತ ದೇಶಿಕರು 1369ರಲ್ಲಿ ಪರಮಪದವನ್ನು ಹೊಂದಿದ ಮೇಲೆ, ಮರು ವರ್ಷವೇ ಮಣವಾಳರ ಜನನವಾದುದು ಒಂದು ಅತ್ಯಾಶ್ಚರ್ಯಕರವಾದ ಘಟನೆ. ಆದಿಶೇಷನ ಅವತಾರವಾದ ರಾಮಾನುಜರು, ತಾವು ಇದ್ದಾಗ ವಿಶಿಷ್ಟಾದ್ವೈತ ವೇದಾಂ ತಕ್ಕೆ ಮಾಡಲು ಆಗದಿದ್ದ ಕಾರ್ಯವನ್ನು, ಈ ಎರಡೂ ಅವತಾರಗಳ ಮೂಲಕ ಮಾಡಿದ ರೆಂಬ ಪ್ರತೀತಿ ಉಂಟು. ಸಂಸ್ಕೃತ ವೇದಾಂತಕ್ಕೆ ಮಾಡಿದ ಸೇವೆಯಿಂದ ರಾಮಾನುಜರು ಸೂರ್ಯನಂತೆ ದೇದೀಪ್ಯಮಾನರಾಗಿದ್ದರೆ, ತಮಿಳು ಪ್ರಬಂಧಗಳಿಗೆ ಮಾಡಿದ ಸೇವೆ ಯಿಂದ ವರವರ ಮುನಿಗಳು ಚಂದ್ರನಂತೆ ಆಹ್ಲಾದಕರರಾಗಿದ್ದಾರೆ. ವೇದಾಂತ ದೇಶಿಕರು ಸಂಸ್ಕೃತ–ತಮಿಳು ಎಂಬೀ ಉಭಯ ವೇದಾಂತಕ್ಕೆ ಸಲ್ಲಿಸಿರುವ ಅಗಾಧ ಸೇವೆಯನ್ನು ಮನಗಂಡ ಇವರು, ಅವರನ್ನು ಶ್ರೀವೈಷ್ಣವ ಮತದ ಗೌರವಾನ್ವಿತ ವ್ಯಕ್ತಿಯೆಂದು ಮೆಚ್ಚಿಗೆ ಸೂಚಿಸಿದ್ದಾರೆ.

ಸುಂದರವಾದ ರೂಪ, ತೀಕ್ಷ್ಣವಾದ ಬುದ್ಧಿ, ದೇವರ ಬಗ್ಗೆ ವಿಶೇಷ ಆಸಕ್ತಿ-ಭಕ್ತಿಗಳು ಇವರಲ್ಲಿದ್ದುವು. ವೇದ, ಶಾಸ್ತ್ರ, ಪ್ರಬಂಧಗಳಲ್ಲಿ ಮೊದಲ ಶಿಕ್ಷಣವು

ತಂದೆಯಿಂದಲೇ ದೊರಕಿತು. ಅಗಾಧ ಪಾಂಡಿತ್ಯವನ್ನು ಸಂಪಾದಿಸಿದರು. ಕಂಚಿಯಲ್ಲಿದ್ದು ಪ್ರವಚನ ಪ್ರವೀಣ, ಸತ್ಸಂಪ್ರದಾಯಶುದ್ಧ ಆಚಾರ್ಯ ಎನಿಸಿದ್ದ ಕಿಡಾಂಬಿ ನಾಯನಾರ್‌ರವರಲ್ಲಿ, ಶ್ರೀಭಾಷ್ಯಾದಿಗಳನ್ನು ಕಲಿತು ಕಾಲಕ್ಷೇಪ ನಡೆಸಿದರು.

ಆಳ್ವಾರ್ ತಿರುನಗರಿಯಲ್ಲಿ ದರ್ಶನ ನಿರ್ವಾಹಕರಾಗಿ, ಪ್ರಬಂಧ ಪ್ರವಚನದಲ್ಲಿ ಪ್ರಖ್ಯಾತರಾಗಿದ್ದ ತಿರುವಾಯ್ಮೊಳಿ ಪಿಳ್ಳೈಯವರ ಶಿಷ್ಯರಾಗಿ, ಅವರಿಂದ ರಹಸ್ಯಾರ್ಥಗಳನ್ನು ತಿಳಿದುಕೊಂಡರು. ದ್ರಾವಿಡ ವೇದ ಮತ್ತು ಪೂರ್ವಾಚಾರ್ಯರುಗಳ ರಹಸ್ಯಾರ್ಥಗಳನ್ನೇ ಮುಖ್ಯವಾಗಿ ಪ್ರಚಾರ ಮಾಡುವೆನೆಂದು, ಗುರುಗಳಿಗೆ ವಾಗ್ದಾನ ಮಾಡಿದರು.

ತಿರುನಾರಾಯಣಪುರದ ಆಯ್ ಅಥವಾ ಜನನ್ಯಾಚಾರ್ಯರಲ್ಲಿ ಆಚಾರ್ಯ ಹೃದಯವನ್ನು ಕಲಿತು, ಆಚಾರ್ಯ ಹಾಗೂ ಭಾಗವತ ಕೈಂಕರ್ಯಗಳಲ್ಲಿ ನಿಷ್ಠರಾಗಿರುತ್ತಿದ್ದರು.

ಕೆಲಕಾಲ ಗೃಹಸ್ಥರಾಗಿದ್ದು, ಶ್ರೀರಂಗದ ಶಠಗೋಪಜೀಯರ್‌ರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಮಣವಾಳಮಾಮುನಿ, ಪೆರಿಯ ಜೀಯರ್ ಎನಿಸಿ, ರಂಗನಾಥನ ಸೇವೆಗೆ ಜೀವ ಸವೆಸಿದರು. ತೆಂಗಲೆ ಪಂಥ ಅಥವಾ ಜೀಯರ್ ಸಂಪ್ರದಾಯದ ಮೂಲಪುರುಷರೆನಿಸಿದರು.

ಸರಳ, ಮಧುರ, ಗಾಂಭೀರ್ಯ, ಪಾಂಡಿತ್ಯಗಳಿಂದ ಕೂಡಿದ ಪ್ರವಚನ, ಕಾಲಕ್ಷೇಪಗಳಿಂದಲೂ, ವ್ಯಾಖ್ಯಾನ, ಸ್ವತಂತ್ರ ಗ್ರಂಥ, ಸ್ತೋತ್ರಗಳ ರಚನೆಯಿಂದಲೂ, ದೇವಾಲಯಗಳ ಜೀರ್ಣೋದ್ಧಾರಗಳಿಂದಲೂ, ರಾಮಾನುಜ ಸಿದ್ಧಾಂತ ಹಾಗೂ ಶ್ರೀವೈಷ್ಣವ ಸಮಾಜಗಳನ್ನು ಪುನರುತ್ಥಾನ ಮಾಡಿದರು.

ಶ್ರೀರಂಗದ ದೇವಾಲಯದಲ್ಲಿ ಈಡುಮುಪ್ಪತ್ತಾರಾಯಿರಪ್ಪಡಿ ವ್ಯಾಖ್ಯಾನದೊಂದಿಗೆ ತಿರುವಾಯ್ಮೊಳಿಯ ಕಾಲಕ್ಷೇಪ ಹೇಳುವಾಗ, ಇವರ ಅದ್ಭುತ ಜ್ಞಾನ, ರಹಸ್ಯಾರ್ಥ ವಿಮರ್ಶನ ಸಾಮರ್ಥ್ಯ, ವಾಕ್ಚಾತುರ್ಯಗಳನ್ನೆಲ್ಲ ನೋಡಿದ ಅನೇಕರು ಇವರ ಶಿಷ್ಯರಾದರು. ವಿವಿಧ ಕ್ಷೇತ್ರಗಳಿಗೂ ಹೋಗಿ ಬಂದು, ಅಲ್ಲಿನ ಶ್ರೀಮಂತ ಶಿಷ್ಯರ ನೆರವಿನಿಂದ, ಸಾವಿರಾರು ಶ್ರೀವೈಷ್ಣವ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದರು.

ಇವರ ಸಾಹಿತ್ಯ ರಚನೆಗಳು ಯಾವುವೆಂದರೆ :

ಪಿಳ್ಳೈಲೋಕಾಚಾರ್ಯರ ಮುಮುಕ್ಷುಪ್ಪಡಿ, ತತ್ತ್ವತ್ರಯ, ಶ್ರೀವಚನಭೂಷಣ ಈ ಮೂರೂ ಮುಖ್ಯ ಕೃತಿಗಳಿಗೆ, ಅಳಗಿಯ ಮಣವಾಳಪ್ಪೆರುಮಾಳ್ ನಾಯನಾರರ ಆಚಾರ್ಯ ಹೃದಯಕ್ಕೆ, ಪೆರಿಯವಾಚ್ಚಾನ್ ಪಿಳ್ಳೈಯವರು ರಚಿಸಿದ ಇರವತ್ತು ನಾಲಾಯಿರಪ್ಪಡಿಯಲ್ಲಿ ನಾಶವಾಗಿ ಲಬ್ಧವಿರದ 421 ಪಾಶುರಗಳಿಗೆ, ತಿರುವರಂಗತ್ತು ಮುದನಾರ್ ರಚಿಸಿದ ಇರಾಮಾನುಶನೂತ್ತಂದಾದಿಗೆ, ಅರುಳಾಳಪ್ಪೆರುಮಾಳ್

ರಚಿಸಿದ ಜ್ಞಾನಸಾರ ಮತ್ತು ಪ್ರಮೇಯಸಾರಗಳಿಗೆ, ವಿಳಾಂ ಶೋಲೈ ಪಿಳ್ಳೈ ಯವರ ಸಪ್ತಗಾಥಾಕ್ಕೆ—ಇವುಗಳಿಗೆ ವ್ಯಾಖ್ಯಾನ ಗ್ರಂಥಗಳನ್ನು ರಚಿಸಿದರು. ಇವರ ವ್ಯಾಖ್ಯಾನವಿಲ್ಲದಿದ್ದಲ್ಲಿ ಪಿಳ್ಳೈ ಲೋಕಾಚಾರ್ಯರ ಹಾಗೂ ಅವರ ಸೋದರರ ಗ್ರಂಥ ಗಳ ಪ್ರಯೋಜನವು ಶ್ರೀವೈಷ್ಣವರಿಗೂ ದೊರೆಯುತ್ತಿರಲಿಲ್ಲ. ಭಗವದ್ಗೀತೆಗೆ ತಾತ್ಪರ್ಯದೀಪವೆಂಬ ವ್ಯಾಖ್ಯಾನವನ್ನೂ ಬರೆದರು.

ಈಡು ಮುಪ್ಪತ್ತಾರಾಯಿರಪ್ಪಡಿಯಲ್ಲಿ ಬರುವ ಪ್ರಮಾಣ ವಚನಗಳಿಗೆ ಇರುವ ಆಧಾರ ಗ್ರಂಥಗಳ ಪಟ್ಟಿ ಎನಿಸಿದ್ದು, ಸಕಲ ಶಾಸ್ತ್ರಾರ್ಥಸಾರನಿಧಿಯಾದ ಪ್ರಮಾಣ ತ್ತಿರಟ್ಟು ಎಂಬ ಗ್ರಂಥವನ್ನು ರಚಿಸಿದರು. ತಿರುವಾಯ್ಮೊಳಿ ನೂತ್ತಂದಾದಿ, ತಿರುವಾ ರಾಧನಕ್ರಮ, ಉಪದೇಶ ರತ್ನಮಾಲೆ, ಯತಿರಾಜ ವಿಂಶತಿ, ಆರ್ತಿಪ್ರಬಂಧ, ದೇವ ರಾಜ ಮಂಗಲಂ, ಮುಕ್ತಕ ಮಂಗಲಂ ಎಂಬ ಸ್ವತಂತ್ರ ಕೃತಿಗಳನ್ನೂ ರಚಿಸಿದರು.

ಜ್ಞಾನ, ಕರ್ಮಗಳಿಗಿಂತ ಭಕ್ತಿಯೇ ಮುಖ್ಯ. ಸಮಾಜಕ್ಕೆ ಅನುಕೂಲ ನಾಗಿರಬೇಕು. ಜಾತಿ ಪದ್ಧತಿಯು ಆಧ್ಯಾತ್ಮಿಕ ಮಟ್ಟದಲ್ಲಿ ಇರಬಾರದು. ವಿಷಯು ಗಳ ದರ್ಶನ, ಸ್ಪರ್ಶ, ಭೋಗ ಇರಬಾರದು. ಅಹಂಕಾರವನ್ನು ಬಿಡಬೇಕು. ಧನ ವನ್ನು ಆಶಿಸಬಾರದು. ಭಾಗವತರನ್ನು ಭಗವತ್ಸಮಾನವಾಗಿ ನೋಡಬೇಕು. ಅಂಥ ವರಿಗೆ ಮೋಕ್ಷವು ಕರತಲಾಮಲಕವಾಗಿರುತ್ತದೆ—ಎಂದು ಹೇಳುತ್ತಿದ್ದರು.

ತಮ್ಮ ಸಂಪ್ರದಾಯವನ್ನು ರಕ್ಷಿಸಿ ಪ್ರಚಾರಮಾಡುವ ಸಲುವಾಗಿ, ಎಂಟು ಸ್ಥಳ ಗಳಲ್ಲಿ ಅಷ್ಟದಿಗ್ಗಜಗಳೆಂಬ ಎಂಟು ಜನ ದಕ್ಷ ಶಿಷ್ಯರನ್ನು ನೇಮಿಸಿದರು. ಅವರೇ ವಾನಮಾಮಲೈ, ಪಟ್ಟರ್ ಪಿರಾನ್, ತಿರುವೇಂಗಡ ರಾಮಾನುಜ, ಎರುಂಬಿ ಯಪ್ಪಾ, ಕೋಯಿಲ್ ಕಂದಾಡೈ ಅಣ್ಣನ್, ಅಪ್ಪಿಳ್ಳೈ, ಅಪ್ಪುಳ್ಳಾರ್, ಪ್ರತಿವಾದಿ ಭಯಂಕರ ಅಣ್ಣನ್ ಎಂಬ ಜೀಯರ್‌ಗಳು. ಇವರಲ್ಲದೆ ನವರತ್ನವೆಂದು ಹೆಸರಾದ ಇವರ ಶಿಷ್ಯರೂ, ರಾಮಾನುಜ ಮತದ ಪ್ರಚಾರದಲ್ಲಿ ಆಸಕ್ತಿ ವಹಿಸಿದ್ದರೆಂದು ತಿಳಿದು ಬರುತ್ತದೆ.

## ತಿರುವರಂಗತ್ತಮುದನಾರ್

ಶ್ರೀರಂಗೇ ಮೀನಹಸ್ತೇ ಜಾತಂ ರಂಗಾರ್ಯ ನಂದನಂ ।
ರಾಮಾನುಜ ಪದಾಸಕ್ತಂ ರಂಗನಾಥ ಗುರುಂ ಭಜೇ ॥

ಶ್ರೀರಂಗದ ರಂಗನಾಥಸ್ವಾಮಿ ದೇವಾಲಯದ ಅಧಿಕಾರಿ ವಂಶದಲ್ಲಿ ಹುಟ್ಟಿದ ಅಣಿಯು ರಂಗತ್ತಮುದನಾರ್ ಇವರ ತಂದೆ.

ಶ್ರೀರಂಗಾಮೃತಕವಿ ಅಥವಾ ಪೆರಿಯ ಕೋಯಿಲ್ ನಂಬಿಯು ರಂಗನಾಥ ಸ್ವಾಮಿಯ ಭಕ್ತ, ದೊಡ್ಡ ವಿದ್ವಾಂಸ, ಪ್ರತಿಭಾಶಾಲಿ. ಅನೇಕ ರಾಜರ ಆಸ್ಥಾನ

ವಿದ್ವಾಂಸನಾಗಿದ್ದ. ದೇವಾಲಯದ ಪ್ರಧಾನ ಪುರೋಹಿತನಾಗಿದ್ದು ಪೂಜಿಸುವ ಹಾಗೂ ಪುರಾಣ ಓದುವ ಸ್ವಾಮ್ಯ ಹೊಂದಿದ್ದ ಇವರು ಮೊದಲು ರಾಮಾನುಜರಿಗೆ ವಿರುದ್ಧವಾಗಿದ್ದರು. ಕೂರೇಶರು ಇವರನ್ನು ಪರಿವರ್ತಿಸಿ ಉಪದೇಶ ಮಾಡಿ ರಾಮಾನುಜರ ಶಿಷ್ಯರಾಗುವಂತೆ ಮಾಡಿದರು. ಇವರು ಆಚಾರ್ಯರ ನಾಮ ಸಂಕೀರ್ತನೆಯನ್ನು ಮಾಡುತ್ತ, ಅವರ ಮಹಿಮೆಯನ್ನು ಕೊಂಡಾಡುತ್ತಿದ್ದರು. ಅದರ ಫಲವೇ ತಮಿಳಿನಲ್ಲಿ 108 ಪದ್ಯಗಳ ಶ್ರೀರಾಮಾನುಜ ನೂತ್ತಂದಾದಿ ಅಥವಾ ಪ್ರಪನ್ನ ಗಾಯತ್ರಿ. ಮಧುರ ಕವಿ ಆಳ್ವಾರರು ನಮ್ಮಾಳ್ವಾರರನ್ನು ಸ್ತುತಿಸಿದಂತೆ, ತಿರುವರಂಗತ್ತಮುದನಾರರು ರಾಮಾನುಜರನ್ನು ಈ ಪದ್ಯಗಳಲ್ಲಿ ಕೊಂಡಾಡಿದ್ದಾರೆ.

ಇವರಿಗಿದ್ದ ಕಾವ್ಯಶಕ್ತಿಯನ್ನು ಗುರುತಿಸಿದ ರಾಮಾನುಜರು, ಇವರನ್ನು 'ಅಮುದನ್' ಎಂದು ಕರೆದರು. ಇವರ ಪ್ರತಿಭೆ, ಶಕ್ತಿಯನ್ನು ಉಪಯೋಗಿಸಿ ಕೊಳ್ಳುವ ಸಲುವಾಗಿ, ತಿರುವರಂಗಪ್ಪೆರುಮಾಳ್ ಅರೈಯರ್ ಬಳಿ ಇದ್ದ ಇಯಪಾರ್ವನ್ನು ತಂದು ಹಾಡಲು ಆಜ್ಞಾಪಿಸಿದರು.

ಇವರು ಕೊನೆಗೆ ದೇವಸ್ಥಾನದ ಅಧಿಕಾರವನ್ನೆಲ್ಲವನ್ನೂ ರಾಮಾನುಜರಿಗೇ ಒಪ್ಪಿಸಿ, ಅಲ್ಲಿ ಸುಧಾರಣೆಗಳನ್ನು ತರಲು ಅವಕಾಶ ಮಾಡಿಕೊಟ್ಟರು.

ಆಳ್ವಾರುಗಳ ವಿಷಯವನ್ನು ವಿವರವಾಗಿ ಪರಿಚಯ ಮಾಡಿಕೊಟ್ಟವರಲ್ಲಿ ಇವರೇ ಮೊದಲಿಗರು.

## ಆಂಧ್ರಪೂರ್ಣ

ಇವರಿಗೆ ವಡುಗನಂಬಿ ಎಂದೂ ಹೆಸರು. ರಾಮಾನುಜರ ಅಷ್ಟದಿಗ್ಗಜ ಶಿಷ್ಯರಲ್ಲೊಬ್ಬರಾಗಿ, ಗುರುಗಳಿಗೆ ಹಾಲು ತಯಾರಿಸಿ ಕೊಡುವ ಕೈಂಕರ್ಯದಲ್ಲೇ ಜೀವ ಸವೆಸಿದರು. ಗುರುಗಳಿಗಿಂತ ಬೇರೆ ದೇವರಿಲ್ಲ ಎಂದು ಹೇಳುತ್ತಿದ್ದರು. ಗುರುಗಳಿಗೆ ಹಾಲು ಕಾಯಿಸುವಾಗ, ರಂಗನಾಥ ದೇವರ ಉತ್ಸವ ಬಂದರೂ ಎದ್ದು ಹೋಗದಿರುವಷ್ಟು ಅಭಿಮಾನ ರಾಮಾನುಜರ ಮೇಲಿದ್ದಿತು.

ಪರಮ ನಿಷ್ಠರು, ಸದಾಚಾರ ಸಂಪನ್ನರು ಆಗಿ, ಮೈಸೂರು ದೇಶದ ಸಾಲಿಗ್ರಾಮದಲ್ಲಿದ್ದ ವೈಷ್ಣವ ಭಾಗವತರು. ತಮ್ಮ ಕಾಲವನ್ನೆಲ್ಲಾ ಧ್ಯಾನ, ಪೂಜೆ, ಅನುಷ್ಠಾನಗಳಲ್ಲಿ ಕಳೆಯುತ್ತಿದ್ದರು. ಸಾಲಿಗ್ರಾಮಕ್ಕೆ ರಾಮಾನುಜರು ಬಂದಾಗ, ಮೊದಲೇ ಅವರ ಕೀರ್ತಿಯನ್ನು ಕೇಳಿದ್ದು, ಅವರಿಂದ ದೀಕ್ಷೆ ಪಡೆದು ಅವರ ಶಿಷ್ಯರಾದರು. ಎಡಬಿಡದೆ, ಅವರನ್ನು ನೆರಳಿನಂತೆ ಹಿಂಬಾಲಿಸಿ, ಅವರ ಮಡಿ ಪೆಟ್ಟಿಗೆಯನ್ನು ಹೊತ್ತು ತಂದು ಸೇವೆ ಮಾಡುತ್ತಿದ್ದರು. ರಾಮಾನುಜರಿಗಿಂತ ಬೇರೆ ದೇವ

ರಿಲ್ಲವೆಂದು ಹೇಳಿ, ಅವರ ಪಾದುಕೆಗಳನ್ನು ಪೂಜಿಸುತ್ತಿದ್ದರು. ತಮ್ಮಲ್ಲಿ ಅವರು ಇಟ್ಟಿದ್ದ ಭಕ್ತಿಗೆ ರಾಮಾನುಜರು ಆಶ್ಚರ್ಯಪಡುತ್ತಿದ್ದರು.

ಸಾಲಿಗ್ರಾಮದಲ್ಲಿ ಇವರು ನಿರ್ಮಿಸಿದ ರಾಮಾನುಜರ ಪಾದತೀರ್ಥವೆಂಬ ಕೊಳವು, ಶ್ರೀವೈಷ್ಣವರಿಗೆ ಇಂದಿಗೂ ಪವಿತ್ರ ತೀರ್ಥಸ್ಥಳವಾಗಿದೆ.

ಯತಿರಾಜ ವೈಭವ, ರಾಮಾನುಜ ಅಷ್ಟೋತ್ತರ, ಭಜಯತಿರಾಜಂ—ಇವು, ಅವರು ರಾಮಾನುಜರನ್ನು ಕುರಿತು ರಚಿಸಿದ ಸ್ತೋತ್ರ ಗೀತೆಗಳು.

---

## IV. ನಲ್ಲಾನ್ ಚಕ್ರವರ್ತಿ ಪರಂಪರೆ

ಶ್ರೀವತ್ಸ ವಂಶದಲ್ಲಿ ಜನಿಸಿದ **ವಾತ್ಸ್ಯವರದಾಹ್ವಯ** ಎಂಬುವರು, ಆಚಾರ್ಯ ನಾಥಮುನಿಗಳಿಗೆ ಅತ್ಯಂತ ಪ್ರೀತಿಪಾತ್ರರಾಗಿದ್ದರು. ಇವರು ವೇದ ಸಂಪನ್ನ, ಮಂತ್ರಜ್ಞ, ಸಂಪ್ರದಾಯಸ್ಥ, ವಿಷ್ಣುಭಕ್ತ ಆಗಿದ್ದರು. ಲಕ್ಷ್ಮೀನಾರಾಯಣ ಇವರ ಆರಾಧ್ಯ ದೇವತೆ.

ಇವರ ಮಗ **ಅಚ್ಚಾನೂರು ಪಟ್ಟೋರಾರ್ಯಂ** ಎಂಬುವರು ಜ್ಞಾನ ವೈರಾಗ್ಯಸಂಪನ್ನರಾಗಿದ್ದರು.

ಇವರ ಪೌತ್ರರಾದ **ವರದ**ರು ಕಂಚಿಯಲ್ಲಿ ವರದರಾಜಸ್ವಾಮಿಯನ್ನು ಪೂಜಿಸುತ್ತಿದ್ದರು. ವಾತ್ಸ್ಯವರದಾಚಾರ್ಯ ಅಥವಾ ನಡಾದೂರಮ್ಮಾಳ್, ಮೊದಲು ಇವರ ಶಿಷ್ಯರಾಗಿದ್ದರು. ಸದಾಚಾರ ಸಂಪನ್ನರೂ, ನಿಷ್ಠರೂ ಆಗಿದ್ದ ಇವರು, ಒಮ್ಮೆ ವೇಗವತಿ ನದಿಯಲ್ಲಿ ಸ್ನಾನಮಾಡುತ್ತಿದ್ದಾಗ, ತೇಲಿ ಬರುತ್ತಿದ್ದ ಶವವೊಂದು ಪರಮೈಕಾಂತಿ ಲಕ್ಷಣದ ಶ್ರೀವೈಷ್ಣವನೆನಿಸಿದುದರಿಂದ, ಅದಕ್ಕೆ ಅನಾಥ ಪ್ರೇತ ಸಂಸ್ಕಾರವನ್ನು ನೆರವೇರಿಸಿದರು. ಈ ಕಾರಣಕ್ಕಾಗಿ ಇವರನ್ನು ಊರಿನ ಜನರು ಬಹಿಷ್ಕರಿಸಿದರು. ಆಗ ವರದರಾಜಸ್ವಾಮಿಯು ಅರ್ಚಕರ ಮೂಲಕ 'ಇವರು ನಾಟ್ಟುಕ್ಕು ಪೊಲ್ಲಾನ್, ನಮಕ್ಕು ನಲ್ಲಾನ್' ಎಂದು ತಿಳಿಸಿದುದರಿಂದ ಎಲ್ಲರೂ ಇವರ ಕ್ಷಮೆಯನ್ನು ಬೇಡು

ವಂತಾಯಿತು. ಅಂದಿನಿಂದ ಮೊದಲುಗೊಂಡು ಈ ವಂಶದವರಿಗೆ **ನಲ್ಲಾನ್** ಎಂಬ **ಬಿರುದು** ಬಂದಿತು. ಜೊತೆಗೆ ಈ ಶ್ಲೋಕವನ್ನು ಹೇಳುವಂತಾಯಿತು.

"ವಂದೇ ವರದರಾಜೇನ ಮಮನಲ್ಲಾನಿತೀರಿತಂ ।
ಪರಮೇಕಾಂತಿ ಸಂಸ್ಕಾರಾತ್ ಪ್ರಖ್ಯಾತಂ ಲೋಕದೇಶಿಕಂ ॥"

ಶ್ರೀಶೈಲದಲ್ಲಿದ್ದ ದೈವಭಕ್ತ,ರಾಜ ತೊಂಡಮಾನನಿಗೆ,ಯುದ್ಧದಲ್ಲಿ ಗೆಲ್ಲಲೋಸುಗ ವರದರಾಜಸ್ವಾಮಿಯಿಂದ ದೊರೆತ ಶಂಖ ಚಕ್ರಗಳು, ಯುದ್ಧ ಮುಗಿದ ನಂತರ ಅಲ್ಲಿದ್ದ ನಲ್ಲಾನ್ ವರದಾಚಾರ್ಯರ ವಂಶದ **ವೆಂಕಟಾಚಾರ್ಯರಿಗೆ** ಸಮರ್ಪಿಸಲ್ಪಟ್ಟವು.

ಈ ವಂಶದ **ವರದಾಚಾರ್ಯರ** ಕಾಲದಲ್ಲಿ ಧರ್ಮದಿಗ್ವಿಜಯಕ್ಕಾಗಿ ಹೊರಟ ರಾಮಾನುಜರು ತಿರುಪತಿಗೆ ಬಂದರು. ಅಲ್ಲಿನ ದೇವರು ವಿಷ್ಣುವಿನ ಅವತಾರವಾದ ವೇಂಕಟಾಚಲಸ್ವಾಮಿ ಆಗಿದ್ದು, ಅವನನ್ನು ಶುಕ, ಭೃಗು,ಮಾರ್ಕಂಡೇಯ, ಅಂಬರೀಷ ಮುಂತಾದವರು ಪೂಜಿಸಿದ್ದಾರೆ; ಇದು ವರಾಹಕ್ಷೇತ್ರ ಎಂಬುದನ್ನು ಶ್ರುತಿ, ಸ್ಮೃತಿ, ಪುರಾಣಗಳಲ್ಲಿನ ಪ್ರಮಾಣಗಳ ಮೂಲಕ ವರದಾಚಾರ್ಯರು ತೋರಿಸಿಕೊಟ್ಟರು. ಆಗ ರಾಮಾನುಜಾಚಾರ್ಯರು ವರದಾಚಾರ್ಯರ ಬಳಿ ಇದ್ದ ಶಂಖ ಚಕ್ರಗಳನ್ನು ದೇವರು ಧರಿಸುವಂತೆ ಮಾಡಿದುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

ವರದಾಚಾರ್ಯರ ಸಹಾಯದಿಂದ ಯುದ್ಧದಲ್ಲಿ ಗೆದ್ದ ಅಲ್ಲಿಯ ರಾಜನು, ಶ್ರೀನಿವಾಸ ದೇವರ ಆದೇಶದಂತೆ ಬೆಂಕಿಯಲ್ಲಿ ಕುದುರೆಯ ಮೇಲೆ ಸವಾರಿಮಾಡಿ ಬಂದ ವರದಾಚಾರ್ಯರಿಗೆ **'ವೈಷ್ಣವಾನಾಂ ಚಕ್ರವರ್ತಿ'** ಎಂಬ ಬಿರುದನ್ನು ಕೊಟ್ಟನು. ಅಲ್ಲಿಂದ ಮುಂದೆ ಈ ವಂಶಸ್ಥರು **ತಿರುಮಲೈ ನಲ್ಲಾನ್ ಚಕ್ರವರ್ತಿ** ಎಂದು ಕರೆದುಕೊಂಡರು.

ಚೋಳರಾಜನ ಬಾಧೆಯನ್ನು ತಾಳಲಾರದೆ ರಾಮಾನುಜರು ಕರ್ನಾಟಕದ ಸಾಲಿಗ್ರಾಮಕ್ಕೆ ಹೋಗಲು ಬರುತ್ತಿದ್ದಾಗ, ಕಾಡಿನಲ್ಲಿ ನಲ್ಲಾನ್ ಚಕ್ರವರ್ತಿ **ವೆಂಕಟಾಚಾರ್ಯರ** ಶಿಷ್ಯನಾದ ನಿಷಾದರಾಜನು,ತಮ್ಮ ಆಚಾರ್ಯರ ಪೂರ್ವಭಾವಿ ಸೂಚನೆಯಂತೆ ರಾಮಾನುಜರಿಗೂ ಮತ್ತು ಅವರ ಸಂಗಡಿಗರಿಗೂ ಆಹ್ನಿಕ–ಆಹಾರ–ಆಶ್ರಯಗಳಿಗೆಲ್ಲ ಅನುಕೂಲ ಮಾಡಿಕೊಟ್ಟನು. ಇದನ್ನು ನೋಡಿದ ರಾಮಾನುಜರು ಸಂತೋಷಗೊಂಡು "ಶ್ರೀನಲ್ಲಾನಿತಿಮೇಘೋಯಂ ವನಮಧ್ಯೇ ಪ್ರವರ್ಷತಿ" ಎಂದೋ ಅಥವಾ "ನಲ್ಲಾನಿತ್ಯಾಖ್ಯ ಕಾಲಾಭ್ರೋ ವನಮಧ್ಯೇ ವವರ್ಷಹಾ" ಎಂದೋ ಹೇಳಿ ಹೊಗಳಿದ್ದಾರೆ.

ವೆಂಕಟಾಚಾರ್ಯರ ಪುತ್ರರಾದ **ಶ್ರೀನಿವಾಸಾಚಾರ್ಯರು** ಸರ್ವಶಾಸ್ತ್ರ ನಿಪುಣ, ಚತುಷ್ಷಷ್ಟಿ ಕಲಾಪ್ರವೀಣ, ಪರಾನುಗ್ರಹತತ್ಪರ, ವೆಂಕಟಾಚಲ

ಕೈಂಕರ್ಯ ಧುರಂಧರ, ಎನಿಸಿ ರಾಮಾನುಜ ಸಿದ್ಧಾಂತದ ಪ್ರಚಾರದಲ್ಲಿ ನಿರತರಾಗಿದ್ದರು. ಕೆಲವು ಕಾಲದನಂತರ ತಿರುಮಲೆಯಿಂದ ಲಕ್ಷ್ಮೀಪುರಕ್ಕೆ ಬಂದು ಅಲ್ಲಿನ ನಾಯಕನನ್ನು ಶ್ರೀವೈಷ್ಣವನಾಗಿಮಾಡಿ, ಅವನಿಂದ ಕೆರೆ, ಅಗ್ರಹಾರ, ಲಕ್ಷ್ಮೀ ನಾರಾಯಣ ದೇವಾಲಯಗಳನ್ನು ನಿರ್ಮಾಣ ಮಾಡಿಸಿದರು. ಪಕ್ಕದ ಊರಿನಲ್ಲಿದ್ದ ಶೈವ ವಿದ್ವಾಂಸರನ್ನು ವಾದದಲ್ಲಿ ಸೋಲಿಸಿ ವಿಷ್ಣುವೇ ಪರತತ್ತ್ವವೆಂದು ಸ್ಥಾಪಿಸಿದರು. ರಾಜನ ಇಚ್ಛೆಯಂತೆ ಅಕಾಲದಲ್ಲಿ ಕಾವೇರಿ ನದಿಯಲ್ಲಿ ಪ್ರವಾಹ ಬರುವಂತೆ ಮಾಡಿ, ರಾಜನೂ ರಾಮಾನುಜ ಮತವನ್ನು ಸೇರುವಂತೆ ಮಾಡಿ ಮತ್ತೆ ತಿರುಮಲೆಗೆ ಹಿಂದಿರುಗಿದರು.

ಇವರ ಮಗ **ಗೋವಿಂದರಾಜರು** ತಂದೆಯಂತೆಯೇ ಶ್ರೇಷ್ಠ ವಿದ್ವಾಂಸರು, ಭಗವದ್ಭಕ್ತರು, ವಿನಯವಂತರು ಆಗಿದ್ದರು.

ಇವರ ನಾಲ್ಕನೆಯ ತಲೆಯವರಾದ **ವೆಂಕಟಾಚಾರ್ಯರು** ಪ್ರಸಿದ್ಧಿಗೆ ಬಂದರು. ಈ ವಂಶದವರು ಪೂಜಿಸುತ್ತಿದ್ದ ಲಕ್ಷ್ಮೀನಾರಾಯಣನ ಮೂರ್ತಿಯನ್ನು, ದೇವರ ಆದೇಶದಂತೆ ರಾಮಾನುಜ ಯೋಗೀಶರು ಇವರಿಗೆ ತಂದುಕೊಟ್ಟರು. ಇವರೂ ರಾಮಾನುಜ ಸಿದ್ಧಾಂತ ಪ್ರವರ್ತಕರಾಗಿದ್ದರು.

ಇವರ ಮಗ **ವರದಾಹ್ವಯರು** ತಂದೆಯಂತೆ ವಿದ್ಯಾವಂತರೂ, ಬ್ರಹ್ಮನಿಷ್ಠರೂ, ಸದ್ಗುಣಿಗಳೂ ಆಗಿದ್ದು, ಶ್ರೀನಿವಾಸದೇವರ ಕೈಂಕರ್ಯದಲ್ಲಿ ನಿರತರಾಗಿದ್ದರು. ಕಳ್ಳರ ಗುಂಪೊಂದು ಸಂಗ್ರಹಿಸಿ ಇಟ್ಟಿದ್ದ ಸಂಪತ್ತನ್ನು ವಶಪಡಿಸಿಕೊಂಡು ದೇವರಿಗೆ ಸುವರ್ಣ ಕಲಶವನ್ನು ಮಾಡಿಸಿದರು.

ಇವರ ಮಗ **ಶ್ರೀನಿವಾಸರು** ಮಹಿಮಾನ್ವಿತರಾಗಿದ್ದು, ವಿಷಪೂರಿತವಾದ ಮರವೊಂದರ ಹಣ್ಣನ್ನು ತಿಂದು ಅದು ಮುಂದೆ ಮಧುರವಾಗುವಂತೆ ಮಾಡಿದರು. ಇದರ ಫಲವಾಗಿ ದೇವಾಲಯದಲ್ಲಿ ಇವರಿಗೆ ಅಗ್ರತೀರ್ಥ ಮುಂತಾದ ಮಾನ–ಮರ್ಯಾದೆ ದೊರಕುವಂತಾಯಿತು.

ಹದಿನಾರನೆಯ ಶತಮಾನದಲ್ಲಿದ್ದ **ರಂಗರಾಮಾನುಜ** ದೇಶಿಕರು ಈ ವಂಶದ ಶ್ರೇಷ್ಠ ಆಚಾರ್ಯರು, ಸಂಪ್ರದಾಯ ವಿಚಕ್ಷಣರು ಆಗಿದ್ದರು. ಜ್ಞಾನಾಬ್ಧಿ ಬ್ರಹ್ಮತಂತ್ರ ಪರಕಾಲ ಸ್ವಾಮಿಗಳ ಶಿಷ್ಯರಾಗಿ ಬ್ರಹ್ಮಸೂತ್ರಗಳು, ಉಪನಿಷತ್ತುಗಳು, ಶ್ರೀಭಾಷ್ಯ ಇವುಗಳ ಮೇಲೆ ಸುಮಾರು 60 ಕೃತಿಗಳನ್ನು ರಚಿಸಿ **ಷಷ್ಠಿ ಪ್ರಬಂಧ ನಿರ್ಮಾತಾ** ಎಂದು ಕರೆಸಿಕೊಂಡರು ಹಾಗೂ ರಾಮಾನುಜ ಸಿದ್ಧಾಂತವನ್ನು ಚೆನ್ನಾಗಿ ಬೆಳಗಿಸಿದರು. ಶಾರೀರಕ ಶಾಸ್ತ್ರಾರ್ಥ ದೀಪಿಕಾ, ಮೂಲಭಾವ ಪ್ರಕಾಶಿಕಾ, ದ್ರಮಿಡೋಪನಿಷದ್ಭಾಷ್ಯ, ದಶೋಪನಿಷದ್ಭಾಷ್ಯ, ವಿಷಯವಾಕ್ಯ

ದೀಪಿಕಾ, ರಾಮಾನುಜ ಸಿದ್ಧಾಂತಸಾರ—ಇವು ಇವರ ಮುಖ್ಯ ಕೃತಿಗಳು. ಇವರಿಗೆ ವೇದಾಂತ ದೇಶಿಕರ ಕೃತಿಗಳಲ್ಲಿ ಅಪಾರ ಆಸಕ್ತಿ ಇದ್ದು, ಅವರ ನ್ಯಾಯ ಸಿದ್ಧಾಂಜನಕ್ಕೆ ಇವರು ಬರೆದಿರುವ ವ್ಯಾಖ್ಯಾನವು ಅತ್ಯುತ್ತಮ ಹಾಗೂ ಭೋದಪ್ರದ ಪ್ರಕರಣ ಗ್ರಂಥವಾಗಿದೆ.

ಪೆರಿಯ ಪರಕಾಲಸ್ವಾಮಿಯ ಸಹಪಾಠಿಯಾದ **ವೇದಾಂತ ರಾಮಾನುಜರು,** ಆಚಾರ್ಯ ರಾಮಾನುಜರು ಹುಟ್ಟಿದ ದಿನವೇ ಜನಿಸಿದವರು. ಜ್ಞಾನಾನುಷ್ಠಾನ ವೈರಾಗ್ಯಶೇವಧಿ ಎಂದು ಹೊಗಳಿಸಿಕೊಂಡರು. ಸಾರಾಸ್ವಾದಿನೀ, ರಹಸ್ಯತ್ರಯ ಸಾರ, ಚತುರ್ವಿಂಶತಿ ಸಾಹಸ್ರಂ, ಇರುಪತ್ತು ನಾಲಾಯಿರಪ್ಪಡಿ ಶಬ್ದಾರ್ಥಂ—ಇವು ಇವರ ಕೃತಿಗಳು.

ಇವರ ಶಿಷ್ಯ **ಪಾದುಕಾ ಸೇವಕ ರಾಮಾನುಜ ಸ್ವಾಮಿಗಳು** ಸಾಕಷ್ಟು ಕೆಲಸಮಾಡಿದ್ದಾರೆ. ಇವರ ಶಿಷ್ಯರೇ **ಗೋಪಾಲ ದೇಶಿಕರು.** ಇವರು ಗೃಹಸ್ಥ ರಾಗಿಯೇ ಇದ್ದು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ನಿಕ್ಷೇಪ ಚಿಂತಾಮಣಿ,ಆಹ್ನಿಕ, ಉತ್ತರಸಾರಾಸ್ವಾದಿನೀ, ತಿರುಪ್ಪಲ್ಲಾಂಡು ಮತ್ತು ಕಣ್ಣಿನುಣ್ ಶಿರತ್ತಾಂಬು ಗಳ ವ್ಯಾಖ್ಯಾನ, ದೇಶಿಕ ಸಹಸ್ರನಾಮ, ಭಗವದ್ಧ್ಯಾನ ಸೋಪಾನ ವ್ಯಾಖ್ಯಾನ, ಜಯಂತೀ ನಿರ್ಣಯ—ಇವರ ಮುಖ್ಯ ಕೃತಿಗಳು.

ಇವರ ಶಿಷ್ಯರು ಆಂಡವನ್ ಪರಂಪರೆಯನ್ನು ಆರಂಭಿಸಿದರು.

## V. ತಾತಾಚಾರ್ಯ ಪರಂಪರೆ

ಈ ವಂಶದ ಮೂಲಪುರುಷರು **ಶ್ರೀಶೈಲಪೂರ್ಣ** ಅಥವಾ ಪೆರಿಯ ತಿರುಮಲೈ ನಂಬಿ. ಇವರ ಮಗ **ಪಿಳ್ಳಾನ್** ಶ್ರೇಷ್ಠ ಆಚಾರ್ಯರು. ಇನ್ನೊಬ್ಬ ಮಗ ಪಿಳ್ಳೈಲ್ತಿರುಮಲೆ ನಂಬಿ. ಇವರ ವಂಶದವರು ದಕ್ಷಿಣ ಮತ್ತು ಉತ್ತರ ಭಾರತಗಳಿಗೆ ಹೋಗಿ ಶ್ರೀವೈಷ್ಣವ ಧರ್ಮವನ್ನು ಪ್ರಚಾರ ಮಾಡಿದರು.

ಈ ವಂಶದ ಐದನೆಯ ತಲೆಯವರಾದ **ಶ್ರೀನಿವಾಸಾಚಾರ್ಯರು** ವೇದಾಂತ ದೇಶಿಕರ ಆಪ್ತ ಶಿಷ್ಯರಾಗಿದ್ದು, ಅವರ ನಂತರ ಕಂಚಿಯ ವರದರಾಜನ ಪೂಜೆಯ ಜವಾಬ್ದಾರಿ ವಹಿಸಿ ಶ್ರೀಕಾರ್ಯಕರ್ತರಾಗಿದ್ದರು.

ಹದಿನಾರನೆಯ ತಲೆಯ **ತಾತಾಚಾರ್ಯ**ರು ಶಂತನೂರು ಶ್ರೀನಿವಾಸ ತಾತಾಚಾರ್ಯರ ಮಗ. ಸೋದರಮಾವನಾಗಿದ್ದ, ಅಹೋಬಿಲ ಮಠದ ಷಷ್ಠ ಪರಾಂಕುಶ ಸ್ವಾಮಿಗಳ ಶಿಷ್ಯರಾಗಿದ್ದರು. ವಿಷ್ಣುವಿನ ಶ್ರೇಷ್ಠತೆಯನ್ನು ಅಲ್ಲಗಳೆ ಯುವ ಶೈವ ಸಂಪ್ರದಾಯದ ಕಾಪಾಲಿಕ, ಪಾಶುಪತ, ಜೈನ ಮುಂತಾದ ಪಂಚ ಮತಗಳನ್ನು ಖಂಡಿಸಿ, ರಾಮಾನುಜ ಸಂಪ್ರದಾಯವನ್ನು ಎತ್ತಿ ಹಿಡಿದುದರಿಂದ ಇವರಿಗೆ **ಪಂಚಮತಭಂಜನ ತಾತದೇಶಿಕ** ಎಂಬ ಬಿರುದು ಬಂದಿತು. (1509–1591) ರಲ್ಲಿ ಇದ್ದ ಇವರು ದೊಡ್ಡಯ್ಯಾಚಾರ್ಯ ಮತ್ತು ಅಪ್ಪಯ್ಯ ದೀಕ್ಷಿತರ ಸಮಕಾಲೀನರು. ಷಷ್ಠ ಪರಾಂಕುಶ ಸ್ವಾಮಿಗಳಲ್ಲಿ ಸಕಲ ವೇದಾಂತ ರಹಸ್ಯಾರ್ಥಗಳನ್ನು ತಿಳಿದುಕೊಂಡು ರಾಮಾನುಜ ಸಿದ್ಧಾಂತ ಸಂಸ್ಥಾಪನಾಚಾರ್ಯ ರೆನಿಸಿ, ಸಂಪ್ರದಾಯ ಪ್ರವಚನದಲ್ಲಿ ನಿರತರಾಗಿದ್ದರು.

ಇವರ ಅಣ್ಣ **ವೆಂಕಟತಾತಾಚಾರ್ಯ**ರಿಗೆ ಕಂಚಿಯಲ್ಲಿ ಅಗ್ರತೀರ್ಥ ಪ್ರಸಾದ ಸಿಗುವಂತೆ ಕೃಷ್ಣದೇವರಾಯನಿಂದ ಆಜ್ಞೆಯಾಯಿತು. ತಮಗಿದ್ದ ಅಧಿಕಾರ, ಹಣ ಗಳ ಉಪಯೋಗ ಮಾಡಿಕೊಂಡು ಅನೇಕ ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ ಶ್ರಮಿಸಿದರು.

ಪಂಚಮತಭಂಜನ ತಾತಾಚಾರ್ಯರ ಶಿಷ್ಯರಾದ **ವಾತ್ಸ್ಯ ಅನಂತಾ ಚಾರ್ಯ**ರು ಶ್ರೇಷ್ಠ ಪಂಡಿತರಾಗಿದ್ದು, ನಡಾದೂರಮ್ಮಾಳ್‌ರವರಿಂದ ಆರಾಧಿತ ವಾಗಿ ಬಂದಿದ್ದ ತಮ್ಮ ಕುಲದೈವವಾದ ವರದರಾಜಮೂರ್ತಿಯನ್ನು ಆರಾಧಿಸುತ್ತ ಶಿಷ್ಯರಿಗೆ ಕಾಲಕ್ಷೇಪ ಹೇಳುತ್ತಿದ್ದರು.

ಇವರ ಶಿಷ್ಯ **ರಂಗರಾಮಾನುಜರು** ಗುರುಗಳಲ್ಲಿ ಕಾಲಕ್ಷೇಪಮಾಡಿ ಉತ್ತಮ ಗ್ರಂಥಕಾರರೂ, ಸತ್ಸಂಪ್ರದಾಯ ಪ್ರವರ್ತಕರೂ ಆಗಿದ್ದರು.

ಪಂಚಮತಭಂಜನ ತಾತಾಚಾರ್ಯರು ತನ್ನ ತಮ್ಮ ತಿರುಮಾಲಿರುಂ ಶೋಲೈನ ಶ್ರೀನಿವಾಸ ಅಯ್ಯಂಗಾರ್ಯನ ಮಗ **ಲಕ್ಷ್ಮೀಕುಮಾರ**ನನ್ನು ದತ್ತು ತೆಗೆದುಕೊಂಡರು. ಕುಂಭಕೋಣದಲ್ಲಿ ಕೋಮಲವಲ್ಲಿ ತಾಯಿಯ ಅಥವಾ ಶ್ರೀ ಮಹಾಲಕ್ಷ್ಮಿಯ ವರ ವಾಗಿ ವಿಷ್ವಕ್ಸೇನರ ಅವತಾರವಾಗಿ ಜನಿಸಿದ **ಲಕ್ಷ್ಮೀಕುಮಾರ ತಾತಾಚಾರ್ಯ**ರು 1572–1632ರಲ್ಲಿ ಇದ್ದು ವಿದ್ವಾಂಸರಾಗಿದ್ದರು. ಅನೇಕ ಗ್ರಂಥ ಬರೆದಿದ್ದಾರೆ. ದತ್ತು ಆದಮೇಲೆ ತಂದೆಯ ಜೊತೆಯಲ್ಲಿ ಕಂಚಿಗೆ ಹೋದಾಗ ಪೆರುಂದೇವಿ ತಾಯಿಯ ಕಟಾಕ್ಷವಾಯಿತು.

ಇವರು ಮಾಡಿದ ಕೆಲಸ ಅಪಾರ, ಶ್ರೇಷ್ಠ ಆಗಿದ್ದು ಹೊಗಳಲ್ಪಟ್ಟಿವೆ. ತಮ್ಮ ವಂಶಕ್ಕೆ ಬಂದಿದ್ದ ಕಂಚಿಯ ದೇವಾಲಯದ ಶ್ರೀ ಕಾ ರ್ಯ ಕ ರ್ತ ರಾ ಗಿ, ದೇವಾಲಯ, ವಿಮಾನಗಳನ್ನು ಅಭಿವೃದ್ಧಿಪಡಿಸಿದರು. ಉತ್ತಮ ಶಿಲ್ಪಕಲೆಯ ಸಾವಿರ ಕಾಲುಗಳ ಮಂಟಪವನ್ನು ನಿರ್ಮಾಣಮಾಡಿಸಿ, ಅದನ್ನು ಉತ್ತಮವಾದ ಪ್ರೇಕ್ಷಣೀಯ ಸ್ಥಳವಾಗಿ ಮಾಡಿದರು. ವಿಜಯನಗರದ ವೆಂಕಟಪತಿ ರಾಜನ ಆಧ್ಯಾತ್ಮಿಕ ಗುರುವಾಗಿ, ಶ್ರೀಕಾರ್ಯ ಧುರಂಧರರಾಗಿ ದೇವಸ್ಥಾನಗಳ ವ್ಯವಹಾರಗಳಿಗೆಲ್ಲ ಮುಖ್ಯಸ್ಥರಾಗಿದ್ದರು.

ರಾಜನ ನೆರವಿನಿಂದ ಕುಂಭಕೋಣ, ಶ್ರೀಶೈಲ, ಕಂಚಿ, ತಿರುಪತಿ, ಶ್ರೀರಂಗ ಮುಂತಾದ ಸ್ಥಳಗಳಲ್ಲಿ ನೂರಾರು ಅಗ್ರಹಾರ, ಕೆರೆ, ಗೋಪುರಗಳ ನಿರ್ಮಾಣ ಮಾಡಿಸಿ, ದೇವಾಲಯಗಳನ್ನು ನಡೆಸಲು ಬೇಕಾದ ಹಣ, ಆಭರಣಗಳನ್ನು ಕೊಡಿಸಿ ಕೊಟ್ಟರು. ಸಾವಿರಾರು ಮಂದಿ ಬ್ರಹ್ಮಚಾರಿಗಳಿಗೆ, ವಿವಾಹವಾಗದ ಕನ್ಯೆಯರಿಗೆ ಏರ್ಪಡಿಸಿದ ಮದುವೆಗಳಿಗೆ ಅತಿಯಾದ ಧನಸಹಾಯ ಮಾಡಿದುದರಿಂದ ಇವರಿಗೆ **ಕೋಟಿ ಕನ್ಯಾದಾನಂ ಲಕ್ಷ್ಮೀಕುಮಾರ ತಾತದೇಶಿಕ** ಎಂಬ ಬಿರುದು ಬಂದಿತು. ಇವರು ತುಂಬಾ ವೈಭವದಿಂದ ಬಾಳುತ್ತಿದ್ದರೆಂದು ವಿದೇಶೀ ಪ್ರವಾಸಿಯೊಬ್ಬನು ಬರೆದಿದ್ದಾನೆ. ಚಿನ್ನ, ಬೆಳ್ಳಿಗಳಿಂದ ತುಲಾಭಾರ ಮಾಡಿಸಿಕೊಂಡು, ಅದನ್ನೆಲ್ಲಾ ದೇವಾಲಯಕ್ಕೆ ವಿನಿಯೋಗಿಸಿದರು. ಆಜನ್ಮ ಬ್ರಹ್ಮಚಾರಿಗಳಾದ ಗಣೇಶ, ಆಂಜನೇಯ ಇಬ್ಬರೂ ತಮ್ಮನ್ನು ಮದುವೆಯಾಗೆಂದು ತಾತದೇಶಿಕರು ಎಲ್ಲಿ ಒತ್ತಾಯಮಾಡುವರೋ ಎಂದು ಹೆದರಿದ್ದರಂತೆ.

ಇವರು ಶ್ರೇಷ್ಠ ರಾಮಭಕ್ತರಾಗಿದ್ದು, ನಿಷ್ಠಾವಂತ ಶ್ರೀವೈಷ್ಣವರಾಗಿ ಬಾಳಿದರು. ರಾಮಭಕ್ತ ಹನುಮಂತನಿಂದ ಇವರಿಗೆ ತುಂಬಾ ಸಹಾಯ ಸಿಕ್ಕಿತೆಂದು ಪ್ರತೀತಿ. ಆದಕ್ಕಾಗಿ ಹನುಮದ್ವಿಂಶತಿ ಎಂಬ ಇಪ್ಪತ್ತು ಪದ್ಯಗಳಿಂದ ಅವನನ್ನು ಸ್ತುತಿಸಿದ್ದಾರೆ. ಶ್ರೀರಾಮ, ಹನುಮಂತರಿಗೂ ದೇವಾಲಯ, ಕೆರೆ ಕಟ್ಟಿಸಿದ್ದಾರೆ. ಇವರು ಶೈವದೇವಾಲಯಗಳ ಪುನರುಜ್ಜೀವನಕ್ಕೂ ಹಣಕೊಡಿಸಿ ಪರಮತಸಹಿಷ್ಣುವೆನಿಸಿದರು.

ಲಕ್ಷ್ಮೀನೀಯುಡಂ, ಪಂಚಗ್ರಂಥಿನೀಪಹಾರಂ, ಸಪ್ತಗ್ರಂಥಿನೀಪಹರಣಂ, ದೇಶಿಕ ಪ್ರಬಂಧಯೊಡು, ನಿಗಮ ಪರಿಮಳ ಅರುಂಪದಂ, ಸಾತ್ವಿಕ ಬ್ರಹ್ಮ ವಿದ್ಯಾ ವಿಲಾಸ, ಪಾಂಡುರಂಗ ಮಾಹಾತ್ಮ್ಯ, ಪಾರಿಜಾತಾಪಹರಣ—ಇವರ ಮುಖ್ಯ ಕೃತಿಗಳು.

ಇವರ ಎರಡನೆಯ ಮಗ **ವೆಂಕಟ ವರದ ತಾತಾಚಾರ್ಯರು** ಮೈಸೂರು ಮಹಾರಾಜರ ರಾಜಗುರುಗಳಾದರು.

# VI. ಶೋಮಾಶಿಯಾಂಡಾನ್ ಪರಂಪರೆ

## 1. ಎರಡನೆಯ ರಾಮುಮಿಶ್ರ

ನೌಮಿ ಲಕ್ಷ್ಮಣ ಯೋಗೀಂದ್ರ ಪಾದಸೇವೈಕ ಧಾರಕಂ ।
ಶ್ರೀರಾಮಂ ಕ್ರತು ನಾಥಾರ್ಯಂ ಶ್ರೀಭಾಷ್ಯಾಮೃತ ಸಾಗರಂ ॥

ಸೋಮಯಾಜಿಯಾಂಡಾನ್ ಎಂದೂ ಕರೆಸಿಕೊಳ್ಳುವ ಇವರು ಈ ವಂಶದ ಮೂಲ ಪುರುಷರು. ಸರ್ವಕ್ರತು ದೀಕ್ಷಿತ, ಯಜ್ಞ ದೀಕ್ಷಿತ ಆದ ಕೇಶವ ಸೋಮ ಯಾಜಿಗಳ ಕುಮಾರಿ, ರಾಮಾನುಜರ ಅಕ್ಕ, ಶ್ರೀ ಮಂಗಲವಲ್ಲಿಯ ಮಗನೇ ಇವರು. ಅಂದರೆ ಆಚಾರ್ಯ ರಾಮಾನುಜರು ಇವರ ಸೋದರಮಾವ.

ತಿರುವಹೀಂದ್ರಪುರದಲ್ಲಿದ್ದಾಗ ರಾಮುಮಿಶ್ರರಿಗೆ ತಂದೆಯೇ ತರ್ಕ, ವ್ಯಾಕರಣ, ಮೀಮಾಂಸೆ, ಸಂಸ್ಕೃತ, ತಮಿಳು, ದಿವ್ಯಪ್ರಬಂಧ, ಸ್ತೋತ್ರಗಳೆಲ್ಲವನ್ನೂ ಕಲಿಸಿದರು. ಆಮೇಲೆ ತಂದೆಯ ಅಪ್ಪಣೆಯಂತೆ ಶ್ರೀರಂಗಕ್ಕೆ ಹೋಗಿ ರಾಮಾನುಜರಿಂದ ಉಪದೇಶ ಪಡೆದುಕೊಂಡು, ಅವರ ಯೋಗ್ಯ ಶಿಷ್ಯರೆನಿಸಿ ಶ್ರೀಭಾಷ್ಯಾದಿಗಳಲ್ಲಿ ಕಾಲಕ್ಷೇಪಮಾಡಿದರು. ಗುರುಗಳ ಅಪೇಕ್ಷೆಯಂತೆ ಶ್ರೀಭಾಷ್ಯ ವಿವರಣ ಎಂಬ ಗ್ರಂಥವನ್ನು ಬರೆದು ಅವರಿಂದ ಹೊಗಳಿಸಿಕೊಂಡರು.

ನಂತರ ಗುರುವಿನ ಆದೇಶದಂತೆ ಕುರುಕೇಶರಲ್ಲಿ ತಿರುವಾಯ್ಮೊಳಿಯ ಕಾಲಕ್ಷೇಪ ಮಾಡಿದರು. ದಿವ್ಯ ದೇಶಗಳಿಗೆ ಯಾತ್ರೆ ಹೋಗಿಬಂದು, ವಾದದಲ್ಲಿ ಅನೇಕರನ್ನು ಜಯಿಸಿ ಶ್ರೀವೈಷ್ಣವರನ್ನಾಗಿ ಪರಿವರ್ತಿಸಿದರು. ಶಾಸ್ತ್ರೋಕ್ತವಾಗಿ ಯಜ್ಞಯಾಗಗಳನ್ನು ಮಾಡಿ ದರ್ಶನ ಪ್ರಚಾರ ಮಾಡಿದರು. ಇದನ್ನು ನೋಡಿ ರಾಮಾನುಜರು ಇವರಿಗೆ ಕ್ರತುನಾಥಾರ್ಯ, ಶೋಮಾಶಿಯಾಂಡಾನ್ ಎಂಬ ಬಿರುದುಗಳನ್ನು ಕೊಟ್ಟರು. ಜೊತೆಗೆ ಅವರಿಗೆ ಲಕ್ಷ್ಮೀನೃಸಿಂಹನ ದಿವ್ಯ ಮಂಗಳಮೂರ್ತಿ ಮತ್ತು ಶಂಖ ಚಕ್ರಗಳನ್ನು ಕೊಟ್ಟು, ಒಂದು ಪೀಠಕ್ಕೆ ಅಧಿಪತಿಯನ್ನಾಗಿ ಮಾಡಿದರು. ಅವರು ಅದನ್ನು ಒಪ್ಪಿಕೊಳ್ಳಲಿಲ್ಲವೆಂದು ಹೇಳಲಾಗುತ್ತದೆ.

ರಾಮುಮಿಶ್ರರು ಸಾಲಿಗ್ರಾಮದಲ್ಲಿದ್ದ, ರಾಮಾನುಜರ ಆಪ್ತಶಿಷ್ಯರಾದ ಪೀಠಾಧಿಪತಿ ವಡುಗನಂಬಿ ಅಥವಾ ಆಂಧ್ರಪೂರ್ಣರ ಮನೆಯಲ್ಲಿದ್ದು, ಕೆಲಕಾಲ ಶಿಷ್ಯರಿಗೆ ರಾಮಾನುಜ ಸಿದ್ಧಾಂತವನ್ನು ಉಪದೇಶಿಸಿದರು.

ಇಂಪಾಗಿ ಹಾಡುತ್ತಿದ್ದ ಇವರು, ರಾಮಾನುಜರ ಇಚ್ಛೆಯಂತೆ ಮೇಲುಕೋಟೆಗೆ ಹೋಗಿ, ಅಲ್ಲಿನ ದೇವಸ್ಥಾನದ ಪೂಜಾವ್ಯವಸ್ಥೆಯನ್ನು ಆಸ್ಥೆಯಿಂದ ನೋಡಿಕೊಳ್ಳುತ್ತಿದ್ದರು.

ಇವರನ್ನು ರಾಮಾನುಜರ ಕೃತಿಗಳ ಪ್ರಥಮ ಪ್ರತಿಪಾದಕ, ವಿವರಣಕಾರ, ಉಪದೇಶಕ ಹಾಗೂ ವಿಶಿಷ್ಟಾದ್ವೈತದ ಮೊದಲ ಆಚಾರ್ಯರುಗಳಲ್ಲಿ ಒಬ್ಬರು, ಎಂಬುದಾಗಿ ಸುದರ್ಶನಸೂರಿ, ಪರಾಶರಭಟ್ಟ, ನಂಜೀಯರ್, ನಂಪಿಳ್ಳೈ, ವೇದಾಂತ ದೇಶಿಕ ಮುಂತಾದ ವಡಗಲೆ–ತೆಂಕಲೆ ಆಚಾರ್ಯರೆಲ್ಲ ಹೊಗಳಿದ್ದಾರೆ.

ಶ್ರೀಭಾಷ್ಯ ವಿವರಣವಲ್ಲದೆ ವೇದಾರ್ಥ ಸಂಗ್ರಹ ವಿವರಣ, ತತ್ತ್ವಸಾರ, ತತ್ತ್ವದೀಪಿಕೆ, ವೇದಾಂತ ಸಂಗ್ರಹ, ದ್ರಮಿಡ ಸಂಹಿತೆ, ಯಾಗ ನಿರ್ಣಯ, ಆಹ್ನಿಕಂ, ಶ್ರೀಮದ್ರಾಮಾನುಜ ದಯಾಶತಕಂ, ಗುರುಗುಣಾವಳಿ, ಗುರು ಪರಂಪರಾನುಸಂಧಾನ, ಷಡರ್ಥ ಸಂಕ್ಷೇಪ, ರಂಗಸ್ತುತಿ, ಪ್ರಪನ್ನ ಗಾಯತ್ರೀ ಶತಕ, ರಾಮಾನುಜ ಪದಯುಗಳಿ, ಶರಣಾಗತಿಶಾಸ್ತ್ರ, ಪೆರಿಯಾಳ್ವಾರ್, ನಾಚ್ಚಿಯಾರ್– ಎಂಬ ಗ್ರಂಥಗಳನ್ನೂ ಬರೆದಿದ್ದಾರೆ.

ಇವರ ಹಿರಿಯ ಮಗ **ವರದರು** ಮೇಲುಕೋಟೆಯಲ್ಲಿ ತಂದೆಯ ಜೊತೆಯಲ್ಲಿಯೂ, ಕಿರಿಯ ಮಗ **ರಂಗನಾಥರು** ಶ್ರೀರಂಗದಲ್ಲಿಯೂ ಇದ್ದು, ಉಪದೇಶ ನೀಡುತ್ತ ರಾಮಾನುಜ ದರ್ಶನವನ್ನು ಅಭಿವೃದ್ಧಿ ಪಡಿಸಿದರು. ವರದರು ಶ್ರೀರಾಮ ಮಿಶ್ರ ದೇಶಿಕ ಚರಿತಾದರ್ಶ ಎಂಬ ಗ್ರಂಥವನ್ನು ಬರೆದಿದ್ದಾರೆ.

## 2. ಮೇಘನಾದಾರಿ ಸೂರಿ

ಆತ್ರೇಯನಾಥ ಗುರುವರ್ಯ ಕೃಪಾತ್ತವೇದ
ಯುಗ್ಮಾಂತಸಾರಮತುಲಾದ್ಭುತ ಸಚ್ಚರಿತ್ರಂ ||
ಟೀಕಾಕೃತಂ ಯತಿ ಪುರಂದರ ಭಾಷ್ಯ ಸೂಕ್ತೇಃ
ಶ್ರೀಮೇಘನಾದರಿಪುಸೂರಿ ಮಹಂ ಪ್ರಪದ್ಯೇ || ೧ |

ವರದರ ವಂಶದಲ್ಲಿ ಐದನೆಯವರಾದ ಇವರು ಪ್ರಸಿದ್ಧರಾಗಿದ್ದಾರೆ.

ಇವರ ತಂದೆ ಆತ್ರೇಯನಾಥ. ತಾಯಿ ಅಧ್ವರನಾಯಿಕೆ. ಇವರು ಪಿಳ್ಳೈ ಲೋಕಾಚಾರ್ಯ ಮತ್ತು ವೇದಾಂತ ದೇಶಿಕರ ಹಿರಿಯ ಸಮಕಾಲೀನರು.

ಶ್ರೇಷ್ಠ ತಾರ್ಕಿಕರಾಗಿದ್ದರು. ನ್ಯಾಯಪ್ರಕಾಶಿಕಾ, ಭಾವಪ್ರಬೋಧ, ನಯದ್ಯುಮಣಿ ಇವರ ಮುಖ್ಯ ಕೃತಿಗಳು. ನಡಾದೂರ್ ವರದಾಚಾರ್ಯರು ಇವರನ್ನು ನಯಪ್ರಕಾಶಿಕಾಚಾರ್ಯರೆಂದು ಹೊಗಳಿದ್ದಾರೆ. ಶ್ರೀಭಾಷ್ಯ, ದಿವ್ಯ ಪ್ರಬಂಧ, ರಹಸ್ಯತ್ರಯಗಳೆಲ್ಲದರ ಮೇಲೆ ಉತ್ತಮವಾಗಿ ವಿವರಣೆ ನೀಡುತ್ತಿದ್ದರು. ರಹಸ್ಯತ್ರಯ ಮಂತ್ರಗಳ ಅರ್ಥ ವಿವರಣೆಯ ಬಗ್ಗೆ ಇವರು ವೇದಾಂತ ದೇಶಿಕರ ಹಾಗೂ

ಪಿಳ್ಳೈ ಲೋಕಾಚಾರ್ಯರ ಅಭಿಪ್ರಾಯಗಳನ್ನು ಒಪ್ಪದೆ, ತಮ್ಮದೇ ಆದ ಅಭಿಪ್ರಾಯವನ್ನು ತಮ್ಮ ಮುಮುಕ್ಷೋಪಾಯ ಸಂಗ್ರಹದಲ್ಲಿ ವ್ಯಕ್ತಪಡಿಸಿದ್ದಾರೆ.

ಇವರ ಮಗ **ಪ್ರಣತಾರ್ತಿಹರರು** ಮೇಲುಕೋಟೆಯಲ್ಲಿದ್ದು ಶಿಷ್ಯಮಂಡಲಿಯನ್ನು ಬೆಳೆಸಿ, ಭಗವದ್ಭಾಗವತ ಸೇವೆಯಲ್ಲಿ ನಿರತರಾಗಿದ್ದರು. ಇವರ ಮಗ **ಯಾಮುನಾಚಾರ್ಯರು** ಉನ್ನತ ಮಟ್ಟದ ಜ್ಞಾನಿಗಳಾಗಿದ್ದರು. ಇವರ ಕಾಲದಲ್ಲಿ ಅಹೋಬಿಲ ಮಠದ ಶಾಖೆಯೊಂದು ಮೇಲುಕೋಟೆಯಲ್ಲಿ ಆರಂಭವಾದಾಗ, ಭಿನ್ನಾಭಿಪ್ರಾಯ ಬಂದು ಇವರು ಅಲ್ಲಿರಲಾರದೆ ಹಾಸನ ಜಿಲ್ಲೆಗೆ ಹೋದರು. ಬೇಲೂರು, ಶಾಂತಿಗ್ರಾಮ, ಬಯಲಹಳ್ಳಿಗಳಲ್ಲಿದ್ದು ದೇವಾಲಯಗಳ ನಿರ್ಮಾಣ ಮಾಡಿಸಿ, ಅನೇಕರನ್ನು ಶ್ರೀವೈಷ್ಣವರನ್ನಾಗಿಮಾಡಿ, ಉಪದೇಶಿಸುತ್ತ ಇದ್ದರು.

ಈ ಪರಂಪರೆಯ ಹದಿಮೂರನೆಯವರಾದ **ನೃಸಿಂಹಾರ್ಯರು** ಘನ ವಿದ್ವಾಂಸರಾಗಿದ್ದು, ತಮಿಳಿನಲ್ಲಿ ಆಚಾರ್ಯ ವೈಭವ ಪ್ರಕಾಶಿಕೆಯನ್ನು ರಚಿಸಿದ್ದಾರೆ.

## VII. ಯತಿರಾಜ ಮಠ ಪರಂಪರೆ

ಇದು ರಾಮಾನುಜರಿಂದ 1100ರಲ್ಲಿ ಸ್ಥಾಪಿತವಾಯಿತು. ರಾಮಾನುಜರು ಇಲ್ಲಿ 14 ವರ್ಷಗಳ ಕಾಲ ತಿರುನಾರಾಯಣ, ಸಂಪತ್ಕುಮಾರ ದೇವರ ಕೈಂಕರ್ಯ ಮಾಡಿಕೊಂಡಿದ್ದರು. ಇದನ್ನು ಜೀಯರ್ ಮಠವೆಂದು ಕರೆಯುತ್ತಾರೆ.

ಈ ಮಠದಲ್ಲಿ ಬಂದ ಯತಿಗಳು ಮೇಧಾವಿ, ಶಾಸ್ತ್ರ ಪಾರಂಗತ ಆಗಮಿಕ, ಸಾಹಿತಿ, ಉಪಾಧ್ಯಾಯ ಆಗಿದ್ದು ಗ್ರಂಥ ಪ್ರವಚನ, ಕಾಲಕ್ಷೇಪ, ಗ್ರಂಥ ಪ್ರಕಟಣ ಮಾಡಿ ಲೋಕೋಪಕಾರ ಮಾಡಿದ್ದಾರೆ.

ರಾಮಾನುಜರ ಉತ್ತರಾಧಿಕಾರಿಯಾದ **ತಿರುನಾರಾಯಣ ಜೀಯರ್** 36 ವರ್ಷಗಳ ಕಾಲ ಶ್ರದ್ಧಾ ಭಕ್ತಿಗಳಿಂದ ಕೈಂಕರ್ಯ ನಡೆಸಿದರು.

**ಸಂಪತ್ಕುಮಾರ ಜೀಯರ್** 36ನೆಯವರಾಗಿದ್ದು, 26 ವರ್ಷಗಳ ಕಾಲ ಇದ್ದರು. ಅನೇಕ ಗ್ರಂಥಗಳನ್ನು ಶೋಧಿಸಿ ಪ್ರಕಟಿಸಿದ್ದರು. ಸ್ವಂತವಾಗಿಯೂ ಬರೆದಿದ್ದಾರೆ. ಸಂಸ್ಕೃತ, ಕನ್ನಡ, ತಮಿಳೇ ಅಲ್ಲದೆ ತೆಲುಗು, ಹಿಂದಿ ಭಾಷೆಗಳಲ್ಲೂ ಪ್ರವೀಣರಾಗಿದ್ದು, ಭಾರತದ ನಾನಾ ಭಾಗಗಳಲ್ಲಿ ಸಂಚರಿಸಿ, ಉಪನ್ಯಾಸಮಾಡಿ ಅನೇಕ ಸನ್ಮಾನಗಳನ್ನು ಪಡೆದು ಪ್ರಸಿದ್ಧರಾಗಿದ್ದರು. ಮದನಮೋಹನ

ಮಾಳವೀಯ, ಚಿತ್ತರಂಜನ್ ದಾಸ್ ಮುಂತಾದ ದೇಶದ ಮುಖಂಡರೊಡನೆ ಸನಾತನ ಧರ್ಮದ ಬಗ್ಗೆ ಚರ್ಚಿಸಿ, ಅವರಿಂದ ಆದರ–ಗೌರವಗಳನ್ನು ಹೊಂದಿದ್ದರು.

37ನೆಯ **ನಾರಾಯಣ ಜೀಯರ್** ವೇದಾಂತ, ಧರ್ಮಶಾಸ್ತ್ರಗಳಲ್ಲಿ ಪರಿಣತರಾಗಿ ಕಾಲಕ್ಷೇಪ ನಡೆಸುತ್ತಿದ್ದರು. ಇವರ ಕಾಲದಲ್ಲಿಯೇ ಬೆಂಗಳೂರಿನ ಮಲ್ಲೇಶ್ವರದ ಮಠವು ಅಭಿವೃದ್ಧಿ ಹೊಂದಿತು. ಶ್ರೀರಂಗದಲ್ಲಿಯೂ ಇದ್ದು ಕೆಲ ಕಾಲ ರಂಗನಾಥನ ಕೈಂಕರ್ಯ ಮಾಡಿದ್ದರು.

38ನೆಯ **ಸಂಪತ್ಕುಮಾರ ಜೀಯರ್** ತರ್ಕ, ವೇದಾಂತಗಳಲ್ಲಿ ಪಂಡಿತ ರಾಗಿ ಕಾಲಕ್ಷೇಪ ನಡೆಸುತ್ತಿದ್ದರು. ಕೆಲವು ಉಪನಿಷತ್ತುಗಳಿಗೆ ಕನ್ನಡ ಅನುವಾದ ರಚಿಸಿದ್ದಾರೆ.

39ನೆಯ **ನಾರಾಯಣ ಜೀಯರ್** ದಿವ್ಯ ಪ್ರಬಂಧದಲ್ಲಿ, ವೀಣಾವಾದನ ದಲ್ಲಿ ಪ್ರಾವೀಣ್ಯತೆ ಪಡೆದು ಉಪಾಧ್ಯಾಯರಾಗಿದ್ದರು. ವೇದ, ಪ್ರಬಂಧ, ಧರ್ಮ ಶಾಸ್ತ್ರ, ಪೂರ್ವಾಪರ ಪ್ರಯೋಗಗಳಲ್ಲಿ ಪ್ರವೀಣರು. ಪುಷ್ಪ ಕೈಂಕರ್ಯ, ತದೀಯಾ ರಾಧನೆಗಳಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದರು. ಇವರ ಕಾಲದಲ್ಲಿ ಮದರಾಸಿನ ಮಠವು ಅಭಿವೃದ್ಧಿ ಹೊಂದಿತು. ಉಪದೇಶ ರತ್ನಮಾಲೆ, ಶ್ರೀಗುಣ ರತ್ನಕೋಶಗಳ ಅರ್ಥ ವಿವರಣೆ ರಚಿಸಿದ್ದಾರೆ.

40ನೆಯವರಾಗಿ **ಸಂಪತ್ಕುಮಾರ ಜೀಯರ್** 1981ರಲ್ಲಿ ಬಂದರು. ಇವರು ಆಗಮದಲ್ಲಿ ಪ್ರವೀಣರು. ಸಂಶೋಧಕರಾಗಿ ದೇವಾಲಯ, ಮೂರ್ತಿ, ಪೂಜೆ, ಉತ್ಸವ, ಹಬ್ಬ ಮುಂತಾದ ವಿಷಯಗಳಲ್ಲಿ ಉತ್ತಮ ಗ್ರಂಥಗಳನ್ನು ರಚಿಸಿ ದ್ದಾರೆ. ಹರಿಹರ ಭೇದವನ್ನೆಣಿಸದೆ, 'ಸರ್ವದೇವ ನಮಸ್ಕಾರಂ ಕೇಶವಂ ಪ್ರತಿ ಗಚ್ಛತಿ' ಎನ್ನುವ ಉದಾರ ಮನೋಭಾವವುಳ್ಳವರು. ಸಂಸ್ಕೃತ, ತೆಲುಗು, ಕನ್ನಡ ಮೂರೂ ಭಾಷೆಗಳಲ್ಲಿ ಪಾಂಡಿತ್ಯವಿದೆ. ಸರಳ ಸ್ವಭಾವ, ವಿನಯವಂತ ಆದ ಇವರು ಸಿದ್ಧಾಂತ ಪ್ರಚಾರದಲ್ಲಿ ಹೆಚ್ಚು ಉತ್ಸಾಹ ಹೊಂದಿದ್ದಾರೆ.

## VIII ಪರಕಾಲಮಠಪರಂಪರೆ

### 1. ಬ್ರಹ್ಮತಂತ್ರಸ್ವಾಮಿ (1286–1386)

ಇವರು ಪರಕಾಲ ಮಠದ ಮೂಲ ಪುರುಷರು. ಗೃಹಸ್ಥರಾಗಿದ್ದ ವೇದಾಂತ ದೇಶಿಕರ ಮುಖ್ಯ ಸಂನ್ಯಾಸಿ ಶಿಷ್ಯರು, ದೇಶಿಕ ದರ್ಶನದ ಉತ್ತಮ ಪ್ರತಿಪಾದಕರು, ಹಾಗೂ ರಾಮಾನುಜ ಸಿದ್ಧಾಂತದ ಪ್ರಚಾರಕರು.

ದೇಶಿಕರ ಮಗ ವರದನಾಥನೊಂದಿಗೆ ದೇಶಿಕರಲ್ಲಿ ಶಾಸ್ತ್ರಾಭ್ಯಾಸಮಾಡಿ ವಿದ್ವಾಂಸರಾದರು. ಗುರುಗಳ ಆದೇಶದಂತೆ ಪ್ರಬಲರನ್ನು ವಾದದಲ್ಲಿ ಜಯಿಸಿ, ಗುರುಗಳಿಂದಲೇ ಪರಕಾಲ ಎಂಬ ಬಿರುದು ಪಡೆದರು.

ದೇಶಿಕ ಸಂಪ್ರದಾಯವನ್ನು ಹರಡುವ ಸಲುವಾಗಿ ಕಂಚಿಯಲ್ಲಿ 1359ರಲ್ಲಿ ಒಂದು ಮಠವನ್ನು ಸ್ಥಾಪಿಸಿ, ಅಲ್ಲಿ ವೇದಾಂತ ದೇಶಿಕರಿಂದ ಕೊಡಲ್ಪಟ್ಟ ಶ್ರೀ ಲಕ್ಷ್ಮೀ ಹಯವದನನ ದಿವ್ಯ ಮಂಗಳ ಮೂರ್ತಿಯನ್ನು ಆರಾಧಿಸುತ್ತಿದ್ದರು. ಇವರಿಗೆ ಬ್ರಹ್ಮತಂತ್ರ ಸ್ವತಂತ್ರ ಪರಕಾಲಸ್ವಾಮಿಗಳೆಂದೂ, ಮಠಕ್ಕೆ ಪರಕಾಲ ಮಠವೆಂದೂ ಹೆಸರು ಬಂದಿತು. ಈ ಮಠವನ್ನೂ, ಗ್ರಂಥ ಸಂಗ್ರಹವನ್ನೂ ತಿರುಮಲೆಗೆ ವರ್ಗಾಯಿಸಿ ಅಲ್ಲಿ ಶ್ರೀನಿವಾಸ ದೇವಾಲಯದ ಆಡಳಿತವನ್ನೂ ನೋಡಿಕೊಳ್ಳುತ್ತಿದ್ದರು. ಅಲ್ಲಿದ್ದಾಗ ಮೈಸೂರಿನ ಯದುರಾಯರು ಇವರನ್ನು ರಾಜಗುರುಗಳಾಗಿ ಸ್ವೀಕರಿಸಿದರು. ಕೆಲಕಾಲನಂತರ ಈ ಮಠವು ತಿರುಮಲೆಯಿಂದ ಮೇಲುಕೋಟೆ, ಶ್ರೀರಂಗಪಟ್ಟಣಗಳಿಗೆ ಹೋಗಿ ಕೊನೆಗೆ ಮೈಸೂರಿನಲ್ಲಿ ನಿಂತಿತು.

ದಿವ್ಯಸೂರಿಚರಿತ, ಆಚಾರ್ಯಮಂಗಳಂ ಇವರ ಕೃತಿಗಳು. ಇವರ ಶಿಷ್ಯರಾದ ಘಟಿಕಾಶತಂ ಅಮ್ಮಾಳ್ ಎಂಬ ಆಚಾರ್ಯರು ಯತಿರಾಜ ವಿಜಯವೆಂಬ ಗ್ರಂಥ ಬರೆದರು. ಇವರ ಶಿಷ್ಯರು ಅಹೋಬಿಲ ಮಠವನ್ನು ಸ್ಥಾಪಿಸಿದರು.

**ಜ್ಞಾನಾಬ್ಧಿಸ್ವಾಮಿಗಳು** (1607–1618) ತಮ್ಮ ಶಿಷ್ಯರಾದ ರಂಗ ರಾಮಾನುಜ ಮಹಾದೇಶಿಕ ಮತ್ತು ವಾತ್ಸ್ಯ ಅಹೋಬಲಾಚಾರ್ಯರಿಂದ ಅನೇಕ ಗ್ರಂಥಗಳನ್ನು ಬರೆಸಿದರು.

**ಪೆರಿಯಸ್ವಾಮಿಗಳ** (1676–1737) ಕಾಲದಲ್ಲಿ ಪರಕಾಲ ಮಠವು ತಿರುಮಲೆಯಿಂದ ಶ್ರೀರಂಗಪಟ್ಟಣಕ್ಕೆ ಬಂದಿತು. ಇದಕ್ಕೆ ದೊಡ್ಡ ಕೃಷ್ಣರಾಜ ಒಡೆಯರು ಸಹಾಯ ಮಾಡಿದರು. ಈ ಸ್ವಾಮಿಗಳು ಬರೆದ ಅನೇಕ ಗ್ರಂಥಗಳಲ್ಲಿ ದಿವ್ಯ ಪ್ರಬಂಧ, ದೇಶಿಕ ಪ್ರಬಂಧಗಳಿಗೆ ಬರೆದ ಟೀಕೆ, ಯತಿ ಪ್ರತಿವಂದನ ಖಂಡನಂ- ಇವು ಮುಖ್ಯವಾದುವು. ಹೆಚ್ಚುಕಾಲ ಪೀಠದಲ್ಲಿದ್ದ ಇವರು ನಾಡಿನಲ್ಲೆಲ್ಲಾ ಪ್ರವಾಸ ಕೈಗೊಂಡು ಉಪದೇಶ, ಪ್ರಪತ್ತಿಗಳ ಮೂಲಕ ಶಿಷ್ಯರನ್ನು ಹೆಚ್ಚಿಸಿದರು.

**ವೇದಾಂತಸ್ವಾಮಿಗಳು** (1750–1770) ವೇದಾಧ್ಯಯನ ಸಂಪನ್ನರೂ, ಜ್ಞಾನಿಗಳೂ ಆಗಿದ್ದು, ಅನೇಕ ವಿದ್ವಾಂಸರಿಗೆ ದರ್ಶನದ ಗೂಢಾರ್ಥಗಳನ್ನು ತಿಳಿಸಿ ಸಹಾಯ ಮಾಡಿದರು. ಸಾತ್ವಿಕರೂ, ಪರೋಪಕಾರಿಗಳೂ ಆಗಿದ್ದರು.

**ಘಂಟಾವತಾರಸ್ವಾಮಿಗಳು** (1810–1836) ಬರುವ ವೇಳೆಗೆ ಮಠವು ಮೇಲುಕೋಟೆಯಲ್ಲಿದ್ದಿತೆಂದು ತೋರುತ್ತದೆ. ದಿವ್ಯದೇಶಗಳಿಗೆ ಹೋಗಿ ಬಂದ ಇವರು ದೇವಾಲಯದ ಪೂಜಾವಿಧಿಗಳನ್ನು ರಾಮಾನುಜ ಸಿದ್ಧಾಂತದ ರೀತಿ ಯಲ್ಲಿ ಪುನರ್ವ್ಯವಸ್ಥೆ ಮಾಡಿದರು. ಮುಮ್ಮಡಿ ಕೃಷ್ಣರಾಜ ಒಡೆಯರು ಇವರ ಶಿಷ್ಯರು.

**ಶ್ರೀನಿವಾಸಸ್ವಾಮಿಗಳು** (1835–1860) ಭಾರತದಲ್ಲೆಲ್ಲಾ ಧಾರ್ಮಿಕ ದಿಗ್ವಿಜಯ ನಡೆಸಿ, ವಿದ್ವತ್ಸಭೆಗಳಲ್ಲಿ ಭಾಗವಹಿಸಿ, ವಿಶಿಷ್ಟಾದ್ವೈತ ಸಿದ್ಧಾಂತ ವನ್ನು ಪ್ರಚಾರ ಮಾಡಿದರು. ಈ ವೇಳೆಗೆ ಮಠವು ಮೈಸೂರಿಗೆ ಬಂದಿದ್ದಿತೆಂದು ತೋರುತ್ತದೆ. ಲಕ್ಷ್ಮ್ಯುಪಾಯತ್ವದೀಪಂ, ನ್ಯಾಸಪ್ರಕಾಶಿಕಾ, ನ್ಯಾಸಪ್ರಕಾಶಿಕಾ ವಿವೃತಿ, ಪರಕಾಲ ವೈಭವ ಪ್ರಕಾಶಿಕಾ ಸ್ತೋತ್ರಂ, ಪರಕಾಲ ಮಂಗಳಂ–ಇವರ ಕೃತಿಗಳು.

**ಶ್ರೀಕೃಷ್ಣಸ್ವಾಮಿಗಳು** (1885–1915) ವ್ಯಾಕರಣ, ಅಲಂಕಾರ, ಸಾಹಿತ್ಯ ಶಾಸ್ತ್ರಗಳಲ್ಲಿ ಮತ್ತು ವೇದಾಂತದಲ್ಲಿ ಶ್ರೇಷ್ಠವಾದ ಪಾಂಡಿತ್ಯ, ಪ್ರೌಢಿಮೆ ಗಳನ್ನು ಹೊಂದಿದ್ದರು. ಹಿಂದಿನ ಇಬ್ಬರು ಸ್ವಾಮಿಗಳ ಉತ್ತರ ಮತ್ತು ದಕ್ಷಿಣ ದೇಶಗಳ ಧರ್ಮದಿಗ್ವಿಜಯವನ್ನು ತಮ್ಮ ಪರಕಾಲಗುರುವಿಜಯಂ ಎಂಬ ಚಂಪೂ ಕಾವ್ಯದಲ್ಲಿ ವಿವರಿಸಿ, ಕವಿಸಾರ್ವಭೌಮ ಎಂಬ ಬಿರುದು ಪಡೆದರು. ವೇದಾಂತ ದೇಶಿಕರ ಹಂಸ ಸಂದೇಶಕ್ಕೆ ವ್ಯಾಖ್ಯಾನ ಬರೆದಿದ್ದಾರೆ. ಇನ್ನೂ ಹತ್ತಾರು ಗ್ರಂಥ ಗಳನ್ನು ಬರೆದಿದ್ದಾರೆ.

**ವಾಗೀಶಸ್ವಾಮಿಗಳು** (1915–1925) ಯೋಗಿ ಹಾಗೂ ಸರಳಜೀವಿ ಆಗಿದ್ದರು. ವ್ಯಾಕರಣದಲ್ಲಿ ಅದ್ವಿತೀಯ ಪಾಂಡಿತ್ಯ ಹೊಂದಿದ್ದು ದ್ವಿತೀಯ ಪಾಣಿನಿ ಎಂಬ ಪ್ರಶಸ್ತಿಯನ್ನು ಗಳಿಸಿದ್ದರು. ವಿಶಿಷ್ಟಾದ್ವೈತದ ಜೊತೆಗೆ ಇತರ ದರ್ಶನ ಸಿದ್ಧಾಂತಗಳಲ್ಲಿಯೂ ಪರಿಪೂರ್ಣವಾದ ಜ್ಞಾನವಿದ್ದಿತು. ಶ್ರೇಷ್ಠ ಪಂಡಿತರಾದರೂ ತಮ್ಮ ಅಗಾಧ ಜ್ಞಾನವನ್ನು ಸುಲಲಿತವಾಗಿ, ಸರಳ ರೀತಿಯಲ್ಲಿ ಪ್ರತಿಪಾದಿಸುವ ಶಕ್ತಿಯನ್ನು ಪಡೆದಿದ್ದರು. ನಾಲ್ಮಡಿ ಕೃಷ್ಣರಾಜ ಒಡೆಯರು ಇವರಲ್ಲಿ ವೇದಾಂತ ಕಾಲಕ್ಷೇಪ ಮಾಡಿದ್ದರು.

**ಅಭಿನವ ರಂಗನಾಥ ಸ್ವಾಮಿಗಳು** (1925–1966) ಸಕಲ ಶಾಸ್ತ್ರ ಪರಿಣತರಾಗಿ ಶ್ರೀ ಕೃಷ್ಣಸ್ವಾಮಿಗಳಿಂದ ಪಂಚಸಂಸ್ಕಾರ, ಮಂತ್ರೋಪದೇಶಗಳನ್ನು ಪಡೆದರು. ಶ್ರೀಭಾಷ್ಯಾದಿಗಳನ್ನು ಕಸ್ತೂರಿರಂಗಾಚಾರ್ಯರಲ್ಲಿ ಕಲಿತರು. ಗೃಹಸ್ಥಾ ಶ್ರಮದಲ್ಲಿದ್ದರೂ ಶಾಸ್ತ್ರೀಯ ಮಾರ್ಗವನ್ನು ತಪ್ಪದೆ ಆಚರಿಸಿ, ಸಂನ್ಯಾಸಿಗಳಂತೆಯೇ

ಜೀವನ ನಡೆಸುತ್ತಿದ್ದರು. ಇವರಲ್ಲಿದ್ದ ಅಸಾಧಾರಣ ಪಾಂಡಿತ್ಯ, ಪ್ರೌಢಿಮೆ, ಜ್ಞಾಪಕಶಕ್ತಿ, ಶೀಲಗಳನ್ನು ಮೆಚ್ಚಿದ ನಾಲ್ಮಡಿ ಕೃಷ್ಣರಾಜ ಒಡೆಯರು ಇವರನ್ನು ಸ್ವಾಮಿಗಳಾಗಿ ಆರಿಸಿಕೊಂಡರು.

ಇವರ ಕಾಲದಲ್ಲಿ ದೇಶಿಕ ದರ್ಶನ ಹಾಗೂ ಗ್ರಂಥಗಳ ಪ್ರಚಾರ ತುಂಬಾ ಆಯಿತು. ವಿದ್ವಾಂಸರಿಗಾಗಿ ನಿಧಿಯೊಂದನ್ನು ಏರ್ಪಡಿಸಿ ಸಂಭಾವನೆ ನೀಡುವ ವ್ಯವಸ್ಥೆ ಮಾಡಿದರು. ಗೂಢಾರ್ಥ ಸಂಗ್ರಹ, ತತ್ತ್ವಮುಕ್ತಾ ಕಲಾಪಭಾಷ್ಯ, ರಾಮಾನುಜ ಮತಾದರ್ಶ ಇವರ ಕೃತಿಗಳು.

1966 ರಿಂದ 1971ರ ವರೆಗೆ **ಅಭಿನವ ಶ್ರೀನಿವಾಸ ಸ್ವಾಮಿಗಳಿ**ದ್ದರು. 1971ರಿಂದ ರಂಗನಾಥ ಸ್ವಾಮಿಗಳ ಶಿಷ್ಯರಾದ **ಅಭಿನವ ರಾಮಾನುಜ ಸ್ವಾಮಿ**ಗಳು ಈ ಮಠದ ನಿರ್ವಾಹಕರಾಗಿದ್ದಾರೆ. ವಿವಿಧ ಭಾಷೆಗಳಲ್ಲಿ ಪಂಡಿತರಾದ ಇವರು ಸಿದ್ಧಾಂತ ಪ್ರಚಾರ ಕಾರ್ಯದಲ್ಲಿ ನಿರತರಾಗಿದ್ದಾರೆ. ಸೇವಾ ಕೈಂಕರ್ಯ ನಿಧಿಯನ್ನು ವ್ಯವಸ್ಥೆಮಾಡಿ, ದೇವರ ಸೇವೆಯು ಶಾಶ್ವತವಾಗಿ ನಡೆಯುವಂತೆ ಮಾಡಿದ್ದಾರೆ.

## IX. ಅಹೋಬಿಲ ಮಠ ಪರಂಪರೆ

### 1. ಆದಿವಣ್ ಶಠಗೋಪ ಮಹಾದೇಶಿಕ (1378-1458)

ಕೇಶವಾರ್ಯ ಕೃಪಾಪಾತ್ರಂ ಧೀಶಮಾದಿ ಗುಣಾರ್ಣವಂ ।
ಶ್ರೀಶಠಾರಿಯತೀಶಾನಂ ದೇಶಿಕೇಂದ್ರ ಮಹಂಭಜೇ ॥ ೧ ॥
ಭಾಷ್ಯಕಾರಃ ಪುನರ್ಭೂಮೌ ಭಾಷ್ಯ ಪ್ರವಚನಾದರಾತ್ ।
ಯದ್ರೂಪೇಣಾಗತಸ್ತಸ್ಮೈ ಶಠಗೋಪಾಯ ಮಂಗಳಂ ॥ ೨ ॥

ವಡಕ್ಕುತ್ತಿರುವೀಧಿ ಪಿಳ್ಳೈ ವಂಶದ, ಮೇಲುಕೋಟೆಯಲ್ಲಿದ್ದ ಪರಮ ಜ್ಞಾನಿಗಳಾದ ಕೇಶವಾಚಾರ್ಯರ ಮಗನಾದ ಶ್ರೀನಿವಾಸನೇ ಈ ಹೆಸರಿನಿಂದ ಈ ಪರಂಪರೆಯ ಮೂಲ ಪುರುಷರಾದರು. ಇವರು ತಂದೆಯಿಂದಲೇ ಬಾಲ್ಯ ಶಿಕ್ಷಣವನ್ನು ಪಡೆದು, ಚಿಕ್ಕ ವಯಸ್ಸಿನಲ್ಲಿಯೇ ವಾದಮಾಡಿ ಗೆದ್ದು ಅನೇಕರನ್ನು ಶ್ರೀವೈಷ್ಣವರನ್ನಾಗಿ ಮಾಡಿದರು. ಶಾಸ್ತ್ರಗಳಲ್ಲಿ ಪ್ರತಿಭೆ–ಸಾಮರ್ಥ್ಯಗಳಿದ್ದ ಇವರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ನಡಾದೂರಮ್ಮಾಳ್‌ರವರ ಮೊಮ್ಮಗ ಹಾಗೂ ಬ್ರಹ್ಮತಂತ್ರ

ಪರಕಾಲಸ್ವಾಮಿಗಳ ಶಿಷ್ಯ ಆದ ಘಟಿಕಾಶತಂ ಅಮ್ಮಾಳ್‌ರವರ ಬಳಿ ಕಂಚಿಗೆ ಹೋಗಿ, ಘನ ವಿದ್ವಾಂಸರೆನಿಸಿದರು. ಜ್ಞಾನ ಭಕ್ತಿ ವೈರಾಗ್ಯ ಶಿಖಾಮಣಿಗಳಾಗಿದ್ದರು.

ಕನಸಿನಲ್ಲಾದ ದೇವರ ಆಜ್ಞೆಯಂತೆ ಅಹೋಬಿಲಕ್ಕೆ ಹೋಗಿ ಅಲ್ಲಿ ಶ್ರೀ ಲಕ್ಷ್ಮೀ ನೃಸಿಂಹ ದೇವರಿಂದಲೇ ಸಂನ್ಯಾಸಾಶ್ರಮ, ಮಂತ್ರೋಪದೇಶ, ಶಠಗೋಪನೆಂಬ ಹೆಸರು ಪಡೆದರೆಂದು ಪ್ರತೀತಿ.

ಶ್ರೀನಿವಾಸನಾಗಿದ್ದವರು ಆದಿವಣ್ ಶಠಗೋಪ ಮಹಾದೇಶಿಕ ಎಂಬ ಹೆಸರಿನಿಂದ ಅಹೋಬಿಲ ಮಠವನ್ನು ಸ್ಥಾಪಿಸಿದರು. ಶಿಷ್ಯರನ್ನು ಹೆಚ್ಚಿಸಿ ಭಿನ್ನವಾಗಿದ್ದ ರಾಮಾನುಜ ಸಂಪ್ರದಾಯಗಳನ್ನು ಮತ್ತೆ ಒಂದುಗೂಡಿಸಲು ಬಹಳ ಶ್ರಮಿಸಿದರು. ರಾಮಾನುಜ ಪೀಠಗಳ ಅಧ್ಯಕ್ಷರೆಂದು ಇವರನ್ನು ಪರಿಗಣಿಸಲಾಗಿದ್ದಿತು.

ನವನಾರಸಿಂಹರಲ್ಲಿ ಒಂದಾದ ಮಾಲೋಲ ನರಸಿಂಹ ವಿಗ್ರಹದೊಡನೆ ಸಂಚಾರ ಹೊರಟು, ಹಳ್ಳಿ ಹಳ್ಳಿಗಳಲ್ಲೆಲ್ಲಾ ರಾಮಾನುಜ ಮತವನ್ನು ಪ್ರಚಾರಮಾಡಿದರು. ಪ್ರಯಾಗದಲ್ಲಿ ಒಂದು ತ್ರಿದಂಡಿ ಮಠವನ್ನು ಸ್ಥಾಪಿಸಿದರು. ಆದಿನಾಥನ ಸನ್ನಿಧಿಯಲ್ಲಿ ರಾಜನ ಮುಂದೆ ತಮ್ಮ ಸಾಮರ್ಥ್ಯವನ್ನು ತೋರಿಸಿ, ಅವನ ನೆರವಿನಿಂದ ಆಳ್ವಾರ್ ತಿರುನಗರಿಯಲ್ಲಿ ನಮ್ಮಾಳ್ವಾರ್ ಮತ್ತು ವೇದಾಂತ ದೇಶಿಕರ ಮೂರ್ತಿಗಳನ್ನು ಪ್ರತಿಷ್ಠೆ ಮಾಡಿಸಿದರು. ತಿರುಪತಿ, ಕಂಚಿ, ಮೇಲುಕೋಟೆ, ಶ್ರೀರಂಗ ಈ ನಾಲ್ಕು ದಿವ್ಯದೇಶಗಳಲ್ಲಿ ದೇವಾಲಯ, ಗೋಪುರ, ವಿಮಾನ, ಮಠಗಳ ನಿರ್ಮಾಣ ಅಥವಾ ಜೀರ್ಣೋದ್ಧಾರಕ್ಕೆ ಸಹಾಯಮಾಡಿಸಿದರು.

ಇವರಿಗೆ ಆದಿವಣ್ ಮಹಾದೇಶಿಕನ್, ಪರಮಹಂಸ ಪರಿವ್ರಾಜಕಾಚಾರ್ಯ, ಸರ್ವತಂತ್ರ ಸ್ವತಂತ್ರೋಭಯವೇದಾಂತಾಚಾರ್ಯ, ಭಗವದ್ರಾಮಾನುಜ ಸಿದ್ಧಾಂತ ನಿರ್ಧಾರಣ ಸಾರ್ವಭೌಮ, ಎಂಬ ಬಿರುದುಗಳು ಇದ್ದುವು.

**ಷಷ್ಠಪರಾಂಕುಶಸ್ವಾಮಿಗಳು** (1499–1513) ಸುಪ್ರಸಿದ್ಧ ಜ್ಞಾನಿಗಳಾಗಿ ಆಸೇತುಹಿಮಾಚಲದವರೆಗೆ ಮಠದ ಕೀರ್ತಿಯನ್ನು ಹರಡಿದರು. ವಿಜಯನಗರದ ರಾಜಗುರುಗಳಾಗಿದ್ದ ಕೋಟಿ ಕನ್ಯಾದಾನಂ ಲಕ್ಷ್ಮೀಕುಮಾರ ತಾತದೇಶಿಕರು ಇವರ ಆಪ್ತ ಶಿಷ್ಯರು.

**ಶಠಗೋಪಸ್ವಾಮಿಗಳು** (1513–1522) ಪೂರ್ವಾಶ್ರಮದಲ್ಲಿಯೇ ತಮ್ಮ ಕವಿತಾ ಸಾಮರ್ಥ್ಯದಿಂದ ಕವಿತಾರ್ಕಿಕ ಕಂಠೀರವ, ಶತಲೇಖನೀ ಲೇಖನಾನುಗುಣ, ಕವಿತಾಧುರಂಧರ ಎಂಬ ಬಿರುದುಗಳನ್ನು ಪಡೆದಿದ್ದರು. ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ವಿಜಯನಗರದ ಶ್ರೀಕೃಷ್ಣದೇವರಾಯನ ಅಚ್ಚುಮೆಚ್ಚಿನ ಕವಿ ಅಲ್ಲಾನಾನಿ ಪೆದ್ದನ್ನನು ಶ್ರೀವೈಷ್ಣವನಾಗಿ ಇವರ ಶಿಷ್ಯನಾಗಿದ್ದನು.

ಇವರ ಕಾಲದಲ್ಲಿಯೇ ಬಂಗಾಳದ ಭಕ್ತರಾದ ಶ್ರೀಕೃಷ್ಣಚೈತನ್ಯರು ಅಹೋಬಿಲಕ್ಕೆ ಬಂದು, ಇವರ ಜ್ಞಾನ, ಪಾಂಡಿತ್ಯ, ತೇಜಸ್ಸುಗಳನ್ನು ನೋಡಿ, ಕೊಂಡಾಡಿ, ನೃಸಿಂಹ ದೇವರ ದರ್ಶನಮಾಡಿ ಹೋಗಿದ್ದಾರೆ.

**ವೇದಾಂತಸ್ವಾಮಿಗಳು** (1552–1558) ಅಹೋಬಿಲವು ಕೈಬಿಟ್ಟು ಹೋದುದರಿಂದ ತಿರುಪತಿಯಲ್ಲಿ ಇರುತ್ತಿದ್ದರು.

**ಶ್ರೀನಿವಾಸಸ್ವಾಮಿಗಳು** (1559–1598) ವಿಜಯನಗರದ ರಾಜ ಇಮ್ಮಡಿ ಶ್ರೀರಂಗನ ಕಾಲದಲ್ಲಿ, ಪೆನುಗೊಂಡೆಯ ಸಾಮಂತರಾಜನ ಅಧಿಕಾರಿಯ ಸಹಾಯದಿಂದ, ಮುಸಲ್ಮಾನರ ಕೈಸೇರಿದ್ದ ಅಹೋಬಿಲ ಕ್ಷೇತ್ರವನ್ನು ಮತ್ತೆ ವಶಪಡಿಸಿಕೊಂಡು ಅಭಿವೃದ್ಧಿಪಡಿಸಿದರು. ಇವರು ಮಂತ್ರಸಿದ್ಧಿ ಪಡೆದವರೆಂದು ಪ್ರತೀತಿ.

**ನಾರಾಯಣಸ್ವಾಮಿಗಳ** (1676–1686) ಆಚಾರ್ಯ ಗುಣಾದರ್ಶ ಎಂಬ ಗುರುಪರಂಪರಾ ಗ್ರಂಥವನ್ನು ರಚಿಸಿದ್ದಾರೆ.

**ಶಠಗೋಪಸ್ವಾಮಿಗಳ** (1694–1698) ಕಾಲದಲ್ಲಿ ಇವರ ಶಿಷ್ಯ ದೇವರಾಜಾಚಾರ್ಯರು ತಿರುವಾಯ್ಮೊಳಿಗೆ ಪದಿನೆಟ್ಟಾಯಿರಪ್ಪಡಿ ವ್ಯಾಖ್ಯಾನವನ್ನು ಬರೆದರು. ಅಹೋಬಿಲವು ಮತ್ತೆ ಮುಸಲ್ಮಾನರ ಕೈಸೇರಿತು.

**ವೀರರಾಘವರು** (1698–1734) ಶ್ರೀರಂಗದಲ್ಲಿಯೇ ಇದ್ದುಕೊಂಡು ಶ್ರೀಭಾಷ್ಯ, ಭಗವದ್ವಿಷಯ, ರಹಸ್ಯತ್ರಯ ಕಾಲಕ್ಷೇಪಗೋಷ್ಠಿಗಳನ್ನು ನಡೆಸಿದರು.

**ಪರಾಂಕುಶಸ್ವಾಮಿಗಳು** (1748–1758) ಅಸಾಧಾರಣ ಕವಿಗಳಾಗಿದ್ದು ರಚಿಸಿದ ಭಕ್ತಿಪೂರ್ಣ ಸ್ತೋತ್ರಗಳಲ್ಲಿ, ಲಕ್ಷ್ಮೀನೃಸಿಂಹ ಪ್ರಪತ್ತಿ ಎಂಬುದು ಸುಂದರವಾಗಿದೆ.

**ವೀರರಾಘವ ವೇದಾಂತಸ್ವಾಮಿಗಳು** (1829–1831) ಬಹು ಸಮರ್ಥರಾಗಿದ್ದು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಅವುಗಳಲ್ಲಿ ವೈಕುಂಠವಿಜಯ ಚಂಪೂ, ಚಂಡಮಾರುತ ವ್ಯಾಖ್ಯೆ, ತಾತ್ಪರ್ಯ ರತ್ನಾವಳಿ, ಜಯಂತೀ ನಿರ್ಣಯ, ಶ್ರವಣ ದ್ವಾದಶೀ ನಿರ್ಣಯ, ಮುಖ್ಯವಾದುವು.

**ರಂಗನಾಥಸ್ವಾಮಿಗಳು** (1833–1836) ಅನೇಕ ಶಿಷ್ಯರನ್ನು ಶ್ರೀವೈಷ್ಣವ ಸಿದ್ಧಾಂತದಲ್ಲಿ ನಿಷ್ಣಾತರಾಗುವಂತೆ ಮಾಡಿ, ಅನೇಕ ಗ್ರಂಥಗಳನ್ನು ರಚಿಸಿ, ಸಂಪ್ರದಾಯಪ್ರವರ್ತಕ ಆಚಾರ್ಯರಾಗಿ ಬೆಳಗಿದರು.

**ಶ್ರೀನಿವಾಸಸ್ವಾಮಿಗಳು** (1837–1842) ಹತ್ತಾರು ಸ್ತೋತ್ರ, ಗ್ರಂಥಗಳನ್ನು ರಚಿಸಿದ್ದಾರೆ.

**ಶಠಗೋಪಸ್ವಾಮಿಗಳು** (1853–1879) ಅತಿಮಾನುಷ ಶಕ್ತಿಯುಳ್ಳವರಾಗಿ, ದಿವ್ಯ ತೇಜಸ್ಸಿನಿಂದ ಕೂಡಿದ್ದು, ಕಳ್ಳರನ್ನೂ ಶಿಷ್ಯರಾಗಿ ಪರಿವರ್ತಿಸಿದರು. ಗುರುಪರಂಪರಾ ಎಂಬ ಗ್ರಂಥವನ್ನು ಬರೆದಿದ್ದಾರೆ.

**ವೀರರಾಘವಸ್ವಾಮಿಗಳು** ವಿದ್ವತ್ತಿನಲ್ಲಿ ಅಗ್ರೇಸರರಾಗಿದ್ದು, ಸಪ್ತತಂತ್ರ ವಾಚಸ್ಪತಿ ಎಂಬ ಬಿರುದು ಹೊಂದಿದ್ದು, ನಿಂತುಹೋಗಿದ್ದ ದೇಶಿಕರ ಉತ್ಸವವು ನಡೆಯುವಂತೆ ಮಾಡಿದರು.

ಪರಾಂಕುಶ ರಾಮಾನುಜರು ಗದ್ವಾಲ್‌ನಲ್ಲಿ ಸ್ಥಾಪಿಸಿದಂತೆ, **ಶ್ರೀನಿವಾಸ ಸ್ವಾಮಿ**ಗಳು ಪುಷ್ಕರದಲ್ಲಿ ಅಹೋಬಿಲ ಮಠದ ಶಾಖೆಯನ್ನು ಸ್ಥಾಪಿಸಿದರು. ಮಠದ ಗತವೈಭವವನ್ನು ಮತ್ತೆ ಸ್ಥಾಪಿಸಿದರು.

**ರಂಗನಾಥಸ್ವಾಮಿಗಳು** (1815-1923) ಮಠವನ್ನು ಒಂದು ಸರ್ಕಾರಿ ಇಲಾಖೆಯಂತೆಯೇ ವ್ಯವಸ್ಥೆಗೊಳಿಸಿದರು. ಅದ್ವಿತೀಯ ಪಂಡಿತ, ಪ್ರವಚನ ಪ್ರವೀಣ ಆದ ಇವರ ಕಾಲಕ್ಷೇಪ ಗೋಷ್ಠಿಯು ಬಹು ಜನಪ್ರಿಯವಾಗಿದ್ದಿತು. ಇವರಿಗೆ ಲಕ್ಷ್ಮೀನೃಸಿಂಹದೇವರ ಸಾಕ್ಷಾತ್ಕಾರ ಆಗಿದ್ದಿತೆಂದು ಪ್ರತೀತಿ.

ಶ್ರೀಭಾಷ್ಯಾರ್ಥಮಣಿಪ್ರವಾಳದೀಪಿಕೆ, ಶ್ರೀಸತ್ಸಂಪ್ರದಾಯ ಪ್ರಕಾಶಿಕೆ, ಶ್ರೀಭಾಷ್ಯದೂಷಣ ಪರಿಹಾರ—ಇವು ಇವರ ಸುಪ್ರಸಿದ್ಧ ಗ್ರಂಥಗಳು.

**ಲಕ್ಷ್ಮೀನೃಸಿಂಹಸ್ವಾಮಿಗಳು** (1923–1941) ಅದ್ವಿತೀಯ ಜ್ಞಾನಾನುಷ್ಠಾನಸಂಪನ್ನರಾಗಿದ್ದರು. ದೇಶಸಂಚಾರವನ್ನು ಕೈಗೊಂಡು ಕಾಲಕ್ಷೇಪದ ಮೂಲಕ ರಾಮಾನುಜ ದರ್ಶನದ ಎಲ್ಲ ಗ್ರಂಥಗಳ ಸಾರವು ಶಿಷ್ಯರಿಗೆ ಸಿಗುವಂತೆ ಮಾಡಿದರು.

ಶ್ರೀ ಲಕ್ಷ್ಮೀನರಸಿಂಹ ಧ್ಯಾನಸೋಪಾನ, ಶ್ರೀ ವೇದಪಾದಾಶೀತಿಸ್ತವ, ಶ್ರೀ ದಶಾವತಾರ ವೇದಪಾದಸ್ತವ, ಶ್ರೀನಿತ್ಯ ಪ್ರಾರ್ಥನಾಕಾರಿಕಾವಲೀ, ಶ್ರೀ ಆಚಾರ್ಯದಿನಚರ್ಯಾ, ಶ್ರೀಮಹಾಸ್ವಾಮಿ ಗದ್ಯ– ಇವು ಇವರ ಪ್ರಸಿದ್ಧ ಕೃತಿಗಳು.

**ಶ್ರೀರಂಗಸ್ವಾಮಿಗಳು** (1941–1953) ಚತುಶ್ಶಾಸ್ತ್ರ ಪಂಡಿತರಾಗಿದ್ದರು. ಮಾಲೋಲ ನರಸಿಂಹ ವಿದ್ವತ್ಸಭೆಯನ್ನು ವ್ಯವಸ್ಥೆಮಾಡಿ, ವಿದ್ವಾಂಸರಿಗೆ ಶಾಸ್ತ್ರಾರ್ಥ ವಾದಮಾಡಿ ಸಂಭಾವನೆ ಪಡೆಯಲು ಏರ್ಪಾಡು ಮಾಡಿದರು. ಶ್ರೀ ನೃಸಿಂಹಪ್ರಿಯ ಎಂಬ ಪತ್ರಿಕೆಯನ್ನು ತಮಿಳು, ಹಿಂದಿಭಾಷೆಗಳಲ್ಲಿ ಹೊರಡಿಸಿ, ಸಿದ್ಧಾಂತವನ್ನು ಪ್ರಚಾರ

ಮಾಡಿದರು. ಅದು ಈಗಲೂ ಬರುತ್ತಿದೆ. ಮಹಾಪೂರ್ಣ–ರಾಮಾನುಜರು ಸಂಧಿಸಿದ ಮಧುರಾಂತಕದಲ್ಲಿ ವೇದಶಾಸ್ತ್ರಪಾಠಶಾಲೆಯೊಂದನ್ನು ಆರಂಭಿಸಿ, ಬಂದ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣವನ್ನು ನೀಡುವ ವ್ಯವಸ್ಥೆ ಮಾಡಿದರು. ಸಂಸ್ಕೃತ, ತಮಿಳು, ಹಿಂದಿ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ಪ್ರಕಟಿಸಿ ಅದಕ್ಕಾಗಿ ಮರದ ಅಚ್ಚುಕೂಟವನ್ನು ಪ್ರಾರಂಭಿಸಿದರು. ದೇಶಸಂಚಾರವನ್ನು ಕೈಗೊಂಡು, ಉಪನ್ಯಾಸಗಳನ್ನು ಮಾಡಿ, ಧರ್ಮಪ್ರಚಾರಮಾಡಿದರು.

ರಹಸ್ಯತ್ರಯ ಸಾರಾಸ್ವಾದಿನಿ, ವಿ ಶಿ ಷ್ಟಾ ದ್ವೈ ತ ಕೋ ೯ ಶ–ಇವರ ಪ್ರಸಿದ್ಧ ಗ್ರಂಥಗಳು.

**ವೀರರಾಘವಸ್ವಾಮಿಗಳು** ನಾನಾಭಾಷೆಗಳಲ್ಲಿ ಪರಿಶ್ರಮ ವುಳ್ಳವರಾಗಿದ್ದು, ಮತಬೋಧಕ ಶಾಲೆಗಳನ್ನು ತೆರೆದು, ಸನಾತನ ಧರ್ಮದ ಹಾಗೂ ವಿಶಿಷ್ಟಾದ್ವೈತ ಸಿದ್ಧಾಂತದ ಪುನರುಜ್ಜೀವನಮಾಡಿದ್ದಾರೆ.

## X ಆಂಡವನ್ ಪರಂಪರೆ

ಶ್ರೀಮದ್ಗೋಪಾಲ ಸೂರೇರ್ನಿರವಧಿ ಕರುಣಾವಾಪ್ತ ಸತ್ಸಂಪ್ರದಾಯಂ
ಶ್ರೀಮದ್ವೇದಾಂತ ರಾಮಾನುಜಯತಿ ನೃಪತಿಃ ಸರ್ವತಃ ಸ್ಥಾಪಯಿತ್ವಾ ॥
ಯಸ್ಮಿನ್ಸತ್ಸಂಪ್ರದಾಯಂ ಸಕಲಮುಪದಿಶನ್ನಂಶತೋನುಪ್ರವಿಷ್ಟಃ
ಶ್ರೀಮತ್ ಶ್ರೀವಾಸ ರಾಮಾನುಜಮುನಿಮನಘಂತಂಭಜೇದೇಶಿಕೇಂದ್ರಂ ॥

ಕುಂಭಕೋಣ ಅಥವಾ ತಿರುಕ್ಕುಡಂದೈ ಬಳಿಯ ಅಗ್ರಹಾರದಲ್ಲಿ ಹುಟ್ಟಿದ **ವೇದಾಂತ ರಾಮಾನುಜ** ದೇಶಿಕರು, ಕುಂಭಕೋಣದಲ್ಲಿದ್ದ ನಲ್ಲಾನ್ ಚಕ್ರವರ್ತಿ ಗೋಪಾಲದೇಶಿಕರಲ್ಲಿ ಸಕಲ ವೇದಾಂತ ರಹಸ್ಯಗಳನ್ನು ಕಲಿತು, ಅವರ ಗುರುಗಳಾದ ಶ್ರೀಪಾದುಕಾಸೇವಕ ರಾಮಾನುಜಸ್ವಾಮಿಗಳಿಂದ ಸಂನ್ಯಾಸಾಶ್ರಮವನ್ನು ಪಡೆದರು. ಕೊಲ್ಲಡಂ ನದಿಯತೀರದಲ್ಲಿ, ಜೊಂಡಿನಕುಟೀರದಲ್ಲಿ, ಸರಳಜೀವಿಯಾಗಿದ್ದು ಕೊಂಡು ಶ್ರೀರಂಗಂ ಆಂಡವನ್ ಆಶ್ರಮ ಎಂದು ಪ್ರಸಿದ್ಧಿಹೊಂದಿದ ಒಂದು ನೂತನ ಪರಂಪರೆಯನ್ನು ಆರಂಭಿಸಿದರು.

ಇವರ ಶಿಷ್ಯರಾದ **ಶ್ರೀನಿವಾಸರಾಮಾನುಜರೂ** ಅತ್ಯಂತ ಜ್ಞಾನಾನುಷ್ಠಾನ ವೈರಾಗ್ಯನಿಷ್ಠರಾಗಿದ್ದು, ಆಂಡವನ್ ಸಂಪ್ರದಾಯವು ಸನ್ಮಾರ್ಗದರ್ಶಕ, ನಿಷ್ಕಂಟಕ ಆಗಿ ಬೆಳೆಯಲು ಅಗತ್ಯವಾದ ಏರ್ಪಾಡುಗಳನ್ನು ಕೈಗೊಂಡು ಪ್ರಖ್ಯಾತರಾಗಿದ್ದಾರೆ.

**ಪೆರಿಯಾಂಡವನ್** ಎನಿಸಿದ ಶ್ರೀನಿವಾಸರು ಕಂಚಿ, ಶ್ರೀರಂಗಗಳಲ್ಲಿನ ದೇವರ ಪ್ರಸಾದದಿಂದ ಹಿಂದಿನ ಆಚಾರ್ಯರಲ್ಲಿ ಸಕಲ ವೇದಾಂತರಹಸ್ಯ, ಭಗವದ್ವಿಷಯ ಗಳನ್ನೆಲ್ಲ ಕ್ರಮವಾಗಿ ಕಾಲಕ್ಷೇಪಮಾಡಿ, ಅನುಷ್ಠಾನಮಾಡಿದರು. ಪಾದಯಾತ್ರೆ ಹೋಗಿಬಂದು ಶಿಷ್ಯರನ್ನು ಹೆಚ್ಚಿಸಿದರು.

**ಚಿನ್ನಾಂಡವನ್** ಎನಿಸಿದ ಶ್ರೀಪಾದುಕಾಸೇವಕ ರಾಮಾನುಜರು, ತರ್ಕಶಾಸ್ತ್ರ ದಲ್ಲಿ ನಿಪುಣರಾಗಿ ತರ್ಕಸಿಂಹ ಎನಿಸಿದ್ದರು ಮತ್ತು ಜ್ಞಾನ ವೈರಾಗ್ಯ ಶಿಖಾಮಣಿ ಗಳಾಗಿದ್ದರು.

ಆಜ್ಞಿಕಾರ್ಥಪ್ರಕಾಶಿಕಾ, ಜಯಂತೀನಿರ್ಣಯ, ಉಕ್ತಿನಿಷ್ಠಾಚಾರ್ಯ ನಿಷ್ಠಾ ವಿಚಾರ, ಆಚಾರ್ಯಸಂಭಾವನಾಕ್ರಮ, ಆಶೌಚ ಸಂಗ್ರಹ, ಮುಂತಾದ ಗ್ರಂಥ ಗಳನ್ನು ರಚಿಸಿ ಆಮೂಲಕ ಆಂಡವನ್ ಸಂಪ್ರದಾಯವು ಹರಡುವಂತೆ ಮಾಡಿ ಪ್ರಖ್ಯಾತರಾದರು.

ಪೆರಿಯಾಂಡವನ್ ಶಿಷ್ಯರಾದ **ಶ್ರೀನಿವಾಸರು** ಗುರುಗಳಲ್ಲಿ ಕಾಲಕ್ಷೇಪಮಾಡಿ ಚತುಶ್ಶಾಸ್ತ್ರ ಪಂಡಿತರೂ, ವಿರಕ್ತರೂ ಆಗಿದ್ದರು. ಇವರಿಗೆ ಹಯಗ್ರೀವ, ಸುದರ್ಶನ, ಗಾಯತ್ರಿಮಂತ್ರಗಳು ಸಿದ್ಧಿಸಿದ್ದುವೆಂದು ಪ್ರತೀತಿ. ಶತಾವಧಾನ ಕಲೆಯಿಂದ ಇವರು ವಿಖ್ಯಾತರಾಗಿದ್ದರು.

ಇವರ ಶಿಷ್ಯರಾದ **ವೇದಾಂತರಾಮಾನುಜರು** ಚಿಕ್ಕವಯಸ್ಸಿನಲ್ಲಿಯೇ ಶಾಸ್ತ್ರ ನಿಪುಣರೆನಿಸಿದ್ದರು. ಇವರ ಕಾಲಕ್ಷೇಪ, ಪ್ರವಚನಚಾತುರ್ಯ, ಜ್ಞಾನ ವೈರಾಗ್ಯಾನು ಷ್ಠಾನದಲ್ಲಿನ ನಿಷ್ಠೆ, ಅಸಾಧಾರಣ ಸಾಮರ್ಥ್ಯಗಳೆಲ್ಲವನ್ನೂ ನೋಡಿದ ಶಿಷ್ಯರು, ಇವ ರನ್ನು ನಮ್ಮಾಂಡವನ್ ಎಂದು ಕರೆದರು.

ಪಾದಯಾತ್ರೆಮಾಡಿ ದಿವ್ಯದೇಶಗಳ ಅರ್ಚಾಮೂರ್ತಿಗಳನ್ನು ಸ್ತುತಿಸಿದ್ದಾರೆ. ವೇದಾಂತದೇಶಿಕರ ಪಾದುಕಾಸಹಸ್ರಕ್ಕೆ ತಿಳಿಯಾದ ತಮಿಳಿನಲ್ಲಿ ವ್ಯಾಖ್ಯಾನವನ್ನು ಬರೆದು ಪ್ರಚಾರಮಾಡಿದರು. ಗೀತಾಭಾಷ್ಯ, ರಹಸ್ಯತ್ರಯಸಾರಗಳ ಮೇಲೂ ಬರೆದಿದ್ದಾರೆ.

ತೆಂಗಲೆ ವಡಗಲೆ ಇಬ್ಬರನ್ನೂ ತಮ್ಮ ವಾಗ್ಝರಿಯಿಂದ ಸಾಂತ್ವನಗೊಳಿಸಿ ಕಂಚಿಯ ದೇವಾಲಯವನ್ನು ಜೀರ್ಣೋದ್ಧಾರಮಾಡಿಸಿದರು. ಇವರೂ, ಇವರ ಶಿಷ್ಯರಾದ ಅಹೋಬಲಮಠಾಧೀಶರೂ, ತಮ್ಮ ತಮ್ಮ ಸಂಪ್ರದಾಯಗಳನ್ನು ಬೆಳೆಸಿದುದಲ್ಲದೆ ಪರ ಸ್ಪರ ಸಂಪ್ರದಾಯಾಭಿವೃದ್ಧಿಗೂ ನೆರವಾದರು.

1963 ರಿಂದಲೂ ಪೀಠದಲ್ಲಿರುವ **ವೇದಾಂತರಾಮಾನುಜ** ಸ್ವಾಮಿಗಳು ಕಣ್ಣನ್ ಸ್ವಾಮಿ ಎಂದೇ ಪ್ರಖ್ಯಾತರಾಗಿದ್ದಾರೆ.

ಇವರು ವೇದ, ದಿವ್ಯಪ್ರಬಂಧ, ಕಾವ್ಯ, ನ್ಯಾಯ, ವ್ಯಾಕರಣಗಳಲ್ಲಿ ಪಾಂಡಿತ್ಯ ಪಡೆದು ಸಂಪ್ರದಾಯಗ್ರಂಥಗಳನ್ನೂ ಕಾಲಕ್ಷೇಪಮಾಡಿದ್ದಾರೆ. ನಿಂತುಹೋಗಿದ್ದ ಮಾಸಪತ್ರಿಕೆಯನ್ನು ಆರಂಭಿಸಿದರು. ಪ್ರವಚನ, ಪ್ರಚಾರೋಪನ್ಯಾಸಗಳನ್ನು ಮಾಡುತ್ತ ರಾಮಾನುಜ ಸಿದ್ಧಾಂತವನ್ನು ಅಭಿವೃದ್ಧಿ ಪಡಿಸುತ್ತಲಿದ್ದಾರೆ. ಅನೇಕ ದೇವಾಲಯಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಶ್ರೀರಂಗ ದೇವಾಲಯದ ರಾಜ ಗೋಪುರದ ನಿರ್ಮಾಣಕಾರ್ಯದಲ್ಲಿ ಇವರೂ, ಅಹೋಬಿಲಸ್ವಾಮಿಗಳೂ ಬಹಳ ಶ್ರದ್ಧೆ ವಹಿಸುತ್ತಿದ್ದಾರೆ.

ಆಳ್ವಾರಾಚಾರ್ಯರು ಹೋಗಿದ್ದ ದಿವ್ಯ ದೇಶಗಳಿಗೆಲ್ಲ ಪಾದಯಾತ್ರೆಯಿಂದ ಹೋಗಿ, ಅಲ್ಲಿನ ಮೂರ್ತಿಗಳ ದರ್ಶನಮಾಡಿ, ಶಿಷ್ಯರಿಗೆ ಸಮಾಶ್ರಯಣ, ಭರನ್ಯಾಸ ನೀಡಿ, ಉಪದೇಶವಿತ್ತು, ಯಶಸ್ಸುಗಳಿಸಿದ್ದಾರೆ. ಪೂರ್ವಾಚಾರ್ಯರು ಅನುಭವಿಸಿ ಹಾಡಿರುವ ತಮಿಳು ಪ್ರಬಂಧ, ರಾಮಾಯಣ, ಭಾಗವತಗಳನ್ನು, ಅದ್ಭುತವಾದ ಪಾಂಡಿತ್ಯಪೂರ್ಣಶೈಲಿಯಲ್ಲಿ ಉಪನ್ಯಾಸಮಾಡಿ ಶಿಷ್ಯರಮನವನ್ನು ತಣಿಸುತ್ತಿದ್ದಾರೆ. ಈ ಪರಂಪರೆಯ ಮೂಲಪುರುಷರ ಗುರುಗಳ ವಂಶದಲ್ಲಿದ್ದ ರುಕ್ಮಿಣಿ, ಸತ್ಯಭಾಮಾ ಸಮೇತನಾದ ವೇಣುಗೋಪಾಲನ ಅರ್ಚಾಮೂರ್ತಿ ಇವರಿಗೆ ಬಂದಿದೆ.

---

# ಭಾಗ ಮೂರು

# ನಿತ್ಯನೈಮಿತ್ತಿಕ ಕರ್ಮಗಳು

## I. ಸ್ನಾನ

ಕೈಕಾಲುಗಳನ್ನು ತೊಳೆದುಕೊಂಡು, ಎರಡು ಬಾರಿ ಆಚಮನಮಾಡಿ, ಒಂದು ಬಾರಿ ಪ್ರಾಣಾಯಾಮವನ್ನು ಮಾಡಿ, "ಶ್ರೀ ಭಗವದಾಜ್ಞಯಾ ಶ್ರೀ ಭಗವತ್ಕೈಂಕರ್ಯ ರೂಪಂ, ಶ್ರೀಮನ್ನಾರಾಯಣ ಪ್ರೀತ್ಯರ್ಥಂ, ಸಮಸ್ತ ಪಾಪಕ್ಷಯಾರ್ಥಂ, ಕರ್ಮಣ್ಯತಾಸಿದ್ಧ್ಯರ್ಥಂ, ಸ್ನಾನಮಹಂ ಕರಿಷ್ಯೇ" ಎಂದು ಸಾಮಾನ್ಯ ಸಂಕಲ್ಪವನ್ನು ಮಾಡಬೇಕು.

[ವಿಶೇಷ ದಿನಗಳಲ್ಲಿ ಮಹಾ ಸಂಕಲ್ಪ ಮಾಡಬೇಕು. ಅದು—

ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾಹೃದಿ ॥

(ಇತರ ಸಂಪ್ರದಾಯದವರು ತಮ್ಮದನ್ನು ಹೇಳಿಕೊಳ್ಳಬಹುದು)

ಗುರುಭ್ಯಸ್ತದ್ಗುರುಭ್ಯಶ್ಚ ನಮೋವಾಕ ಮಧೀಮಹೇ ।
ವೃಣೀಮಹೇ ಚ ತತ್ರಾದ್ಯೌ ದಂಪತೀ ಜಗತಾಂ ಪತೀ ॥
ಸ್ವಶೇಷ ಭೂತೇನ ಮಯಾ ಸ್ವೀಯೈಃ ಸರ್ವಪರಿಚ್ಛದೈಃ ।
ವಿಧಾತುಂ ಪ್ರೀತಮಾತ್ಮಾನಂ ಶ್ರೀಮಾನ್ ಪ್ರಕ್ರಮತೇಸ್ವಯಂ ॥
ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ॥
ಯಸ್ಯದ್ವಿರದ ವಕ್ತ್ರಾದ್ಯಾಃ ಪಾರಿಷದ್ಯಾಃ ಪರಶ್ಶತಂ ।
ವಿಘ್ನಂ ನಿಘ್ನಂತಿ ಸತತಂ ವಿಷ್ವಕ್ಸೇನಂ ತಮಾಶ್ರಯೇ ॥

ಎಂದು ಕೈಮುಗಿದು ಪ್ರಾರ್ಥಿಸಿ, ಆಮೇಲೆ ಎಡ ಅಂಗೈ ಮೇಲೆ ಬಲ ಅಂಗೈಯನ್ನು ಇಟ್ಟು ಸೇರಿಸಿದ ಎರಡೂ ಕೈಗಳನ್ನು, ಬಲ ತೊಡೆಯ ಮೇಲೆ ಇಟ್ಟುಕೊಂಡು ಈ ರೀತಿ ಹೇಳಬೇಕು.

ಹರಿರೋಂತತ್ ಶ್ರೀ ಗೋವಿಂದ ಗೋವಿಂದ ಗೋವಿಂದ

ಅಸ್ಯ ಶ್ರೀ ಭಗವತೋ ಮಹಾಪುರುಷಸ್ಯ ಶ್ರೀ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ, ಆದ್ಯ ಬ್ರಹ್ಮಣಃ, ದ್ವಿತೀಯ ಪರಾರ್ಧೇ, ಶ್ರೀ ಶ್ವೇತವರಾಹ ಕಲ್ಪೇ, ವೈವಸ್ವತ ಮನ್ವಂತರೇ, ಕಲೌಯುಗೇ, ಪ್ರಥಮೇಪಾದೇ, ಜಂಬೂದ್ವೀಪೇ,

ಭಾರತವರ್ಷೇ, ಭರತ ಖಂಡೇ, ಶಕಾಬ್ದೇ, ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ, ಚಾಂದ್ರಮಾನೇನ ಪ್ರಭುವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ, ಶ್ರೀ........ನಾಮ ಸಂವತ್ಸರೇ, . . ..ಅಯನೇ,. . . .. ಋತೌ,.. .....ಮಾಸೇ,. . . . ಪಕ್ಷೇ........ಶುಭ ತಿಥೌ,. .ವಾಸರಯುಕ್ತಾಯಾಂ,........ನಕ್ಷತ್ರಯುಕ್ತಾಯಾಂ, ಶುಭನಕ್ಷತ್ರ ಶುಭ ಯೋಗ ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ, ಅಸ್ಮಿನ್ ತೀರ್ಥೇ। ಅಸ್ಯಾಂ ನದ್ಯಾಂ। ಪ್ರಾತಃಸ್ನಾನ ಮಹಂ ಕರಿಷ್ಯೇ] ಎಂದು ಹೇಳುತ್ತ ವಿಶೇಷ ದಿನದ ಕರ್ಮವನ್ನು ಮಾಡಬೇಕು.

ಸಮಸ್ತ ಜಗದಾಧಾರ ಶಂಖಚಕ್ರ ಗದಾಧರ।
ದೇಹಿದೇವ ಮಮಾನುಜ್ಞಾಂ ಯುಷ್ಮತ್ತೀರ್ಥ ನಿಷೇವಣೇ॥

ಎಂದು ತೀರ್ಥರೂಪಿಯಾದ ಭಗವಂತನನ್ನು ಪ್ರಾರ್ಥಿಸಬೇಕು.

ಆವಾಹಯಾಮಿತ್ವಾಂದೇವಿ ಸ್ನಾನಾರ್ಥಮಿಹಸುಂದರಿ।
ಏಹಿ ಗಂಗೇ ನಮಸ್ತುಭ್ಯಂ ಸರ್ವತೀರ್ಥ ಸಮನ್ವಿತೇ॥

ಎಂದು ಹೇಳಿ ಗಂಗೆಯನ್ನು ಆವಾಹನೆ ಮಾಡಬೇಕು.

ವಿಷ್ಣುವಾಮ ಪದಾಂಗುಷ್ಠ ನಖಸ್ರೋತೋ ವಿನಿಸ್ಸೃತೇ।
ತದ್ಭಕ್ತಿ ವಿಘ್ನರೂಪಾತ್ತಂ ಗಂಗೇಮಾಂ ಮೋಚಯಸ್ವ ನಸಃ॥

ಎಂದು ಹೇಳುತ್ತ ಅರ್ಘ್ಯವನ್ನು ಕೊಟ್ಟು ಗುರುಪರಂಪರೆಯ ಧ್ಯಾನಮಾಡುತ್ತ ಸ್ನಾನ ಮಾಡಬೇಕು.

ಸ್ನಾನದ ನಂತರ ಶುಭ್ರವಾಗಿ ಒಗೆದು ಒಣಗಿಸಿದ ವಸ್ತ್ರಗಳನ್ನು ಧರಿಸಿ ಪುಂಡ್ರವನ್ನು ಧರಿಸಬೇಕು.

## II. ಊರ್ಧ್ವಪುಂಡ್ರಧಾರಣ

ಶುದ್ಧವಾದ ಪಾತ್ರೆಯಲ್ಲಿ ತೀರ್ಥವನ್ನು ಇಟ್ಟುಕೊಂಡು, ಉದ್ಧರಣಿಯಿಂದ ತೀರ್ಥವನ್ನು ತೆಗೆದು, ಎಡಗೈಯನ್ನು 'ವೀರ್ಯಾಯಾಸ್ತ್ರಾಯಫಟ್' ಎಂದು ಹೇಳಿ ಶುದ್ಧಿಮಾಡಿ, 'ಜ್ಞಾನಾಯ ಹೃದಯಾಯನಮಃ' ಎಂದು ಎಡಗೈಯಲ್ಲಿ ತೀರ್ಥವನ್ನು ಸೇರಿಸಿ, 'ಉದ್ಧೃತಾಸಿವರಾಹೇಣ ಕೃಷ್ಣೇನ ಶತಬಾಹುನಾ' ಎಂದು ನಾಮದ ಉಂಡೆಯನ್ನು ಬಲಕೈಯಲ್ಲಿ ತೆಗೆದುಕೊಂಡು, 'ಭೂಮಿರ್ಧೇನುರ್ಧರಣೀ ಲೋಕ ಧಾರಿಣೀ' ಎಂದು ಎಡಕೈಯ್ಯಲ್ಲಿ ಇಟ್ಟು,

'ಗಂಧದ್ವಾರಾಂಧುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ।
ಈಶ್ವರೀಗ್ಂ ಸರ್ವಭೂತಾನಾಂ ತ್ವಾಮಿಹೋಪಹ್ವಯೇ ಶ್ರಿಯಂ॥'

ಎಂದು ಅರೆಯಬೇಕು.

"ಭಗವಾನ್ ಪವಿತ್ರಂ ವಾಸುದೇವಃ ಪವಿತ್ರಂ ಶತಧಾರಂ ಸಹಸ್ರಧಾರಂ ಅಪರಿಮಿತಧಾರಂ ಅಚ್ಛಿದ್ರಂ ಅರಿಷ್ಟಮಕ್ಷಯಂ ಪರಮಂ ಪವಿತ್ರಂ ಭಗವಾನ್ ವಾಸುದೇವಃ ಪುನಾತು", ಎಂಬ ಮಂತ್ರದಿಂದ ಹಾಗೂ ಅಷ್ಟಾಕ್ಷರ ಮಂತ್ರದಿಂದ ಅಭಿಮಂತ್ರಿಸಿ, ತರ್ಜನೀ ಅಥವಾ ಅನಾಮಿಕ ಬೆರಳಿನಿಂದ ಊರ್ಧ್ವಪುಂಡ್ರವನ್ನು ಧರಿಸಿಕೊಳ್ಳಬೇಕು.

ಆಮೇಲೆ ಹಣೆ, ಉದರದ ಮಧ್ಯಪ್ರದೇಶ, ಎದೆ, ಅದರ ಮೇಲುಭಾಗದ ಕತ್ತು, ಉದರದ ಬಲಗಡೆ, ಬಲತೋಳು, ಕತ್ತಿನ ಬಲಗಡೆ, ಉದರದ ಎಡಗಡೆ, ಎಡತೋಳು, ಕತ್ತಿನ ಎಡಗಡೆ, ಬೆನ್ನಿನ ಕೆಳಭಾಗ, ಕತ್ತಿನ ಹಿಂಭಾಗ—ಈ ಕ್ರಮದಲ್ಲಿ ಭಗವಂತನ ಪಾದದ ಆಕೃತಿಯಲ್ಲಿ ದ್ವಾದಶನಾಮಗಳನ್ನು ಧರಿಸಬೇಕು. ನಂತರ ಶ್ರೀ ಚೂರ್ಣವನ್ನು ಕೈಯಲ್ಲಿ ಕಲೆಸಿ ಮೇಲಿನ ಕ್ರಮದಲ್ಲಿ ನಾಮಗಳ ಮಧ್ಯೆ ಊರ್ಧ್ವಮುಖವಾಗಿ ದೀಪಾಕಾರದಲ್ಲಿ ಧರಿಸಬೇಕು. ಉಳಿದುದನ್ನು ಓಂ ನಮೋ ಭಗವತೇ ವಾಸುದೇವಾಯ ಎಂಬ ಮಂತ್ರದಿಂದ ಶಿರಸ್ಸಿನಲ್ಲಿ ಧರಿಸಬೇಕು.

ಪ್ರತಿ ನಾಮದಲ್ಲಿಯೂ ಭಗವಂತನಾದ ನಾರಾಯಣನನ್ನೂ, ಶ್ರೀ ಮಹಾಲಕ್ಷ್ಮಿಯನ್ನೂ ಸಾನ್ನಿಧ್ಯಮಾಡಿಕೊಂಡಂತೆ ಭಾವಿಸಿ, ಈ ಕೆಳಗಿನ ಮಂತ್ರಗಳನ್ನು ಹೇಳಿ ಅಂಜಲಿ ಮಾಡಬೇಕು.

| **ಭಗವಾನ್ ನಾರಾಯಣ** | **ಶ್ರೀ ಮಹಾಲಕ್ಷ್ಮಿ** |
|---|---|
| 1. ಓಂ ಕೇಶವಾಯ ನಮಃ | ಶ್ರಿಯೈ ನಮಃ |
| 2. " ನಾರಾಯಣಾಯ ನಮಃ | ಅಮೃತೋದ್ಭವಾಯೈ ನಮಃ |
| 3. " ಮಾಧವಾಯ ನಮಃ | ಕಮಲಾಯೈ ನಮಃ |
| 4. " ಗೋವಿಂದಾಯ ನಮಃ | ಚಂದ್ರಸೋದರ್ಯೈ ನಮಃ |
| 5. " ವಿಷ್ಣವೇ ನಮಃ | ವಿಷ್ಣುಪತ್ನ್ಯೈ ನಮಃ |
| 6. " ಮಧುಸೂಧನಾಯ ನಮಃ | ವೈಷ್ಣವ್ಯೈ ನಮಃ |
| 7. " ತ್ರಿವಿಕ್ರಮಾಯ ನಮಃ | ವರಾರೋಹಾಯೈ ನಮಃ |
| 8. " ವಾಮನಾಯ ನಮಃ | ಹರಿವಲ್ಲಭಾಯೈ ನಮಃ |
| 9. " ಶ್ರೀಧರಾಯ ನಮಃ | ಶಾಂರ್ಗಿಣ್ಯೈ ನಮಃ |
| 10. " ಹೃಷೀಕೇಶಾಯ ನಮಃ | ದೇವದೇವಿಕಾಯೈ ನಮಃ |
| 11. " ಪದ್ಮನಾಭಾಯ ನಮಃ | ಸುರಸುಂದರ್ಯೈ ನಮಃ |
| 12. " ದಾಮೋದರಾಯ ನಮಃ | ಮಹಾಲಕ್ಷ್ಮ್ಯೈ ನಮಃ |

ನಂತರ ಗುರುಪರಂಪರೆ ಮತ್ತು ಸ್ವಾಚಾರ್ಯತನಿಯನ್‌ಗಳನ್ನು ಅನುಸಂಧಾನ ಮಾಡಬೇಕು.

# III. ಉಪಾಕರ್ಮ

## 1. ಯಜ್ಞೋಪವೀತಧಾರಣ

ಕೈಕಾಲುಗಳನ್ನು ತೊಳೆದುಕೊಂಡು, ಎರಡು ಆಚಮನಗಳನ್ನುಮಾಡಿ, ಪವಿತ್ರವನ್ನು ಧರಿಸಿ, ಶುದ್ಧವಾದ ಸ್ಥಳದಲ್ಲಿ ಪೂರ್ವಾಭಿಮುಖವಾಗಿ ಕುಳಿತು **ಒಂದು** ಪ್ರಾಣಾಯಾಮ ಮಾಡಿ, ಮಹಾಸಂಕಲ್ಪ ಮಾಡಬೇಕು.

................ಅಸ್ಯಾಂಶುಭತಿಥೌ, ಶ್ರೌತಸ್ಮಾರ್ತವಿಹಿತನಿತ್ಯಕರ್ಮಾನುಷ್ಠಾನ ಯೋಗ್ಯತಾಸಿದ್ಧ್ಯರ್ಥಂ, ಬ್ರಹ್ಮತೇಜೋಬಲ ಸಿದ್ಧ್ಯರ್ಥಂ ಚ, ನೂತನ ಯಜ್ಞೋಪವೀತ ಧಾರಣಂ ಕರಿಷ್ಯೇ" ಎಂದು ಹೇಳಬೇಕು.

ಕುಕ್ಕುಟಾಸನದಲ್ಲಿ ಕುಳಿತುಕೊಂಡು ಯಜ್ಞೋಪವೀತವು (ಜನಿವಾರ) ಬಲ ಅಂಗೈ ಮೇಲೆ ಹಾಗೂ ಎಡ ಅಂಗೈ ಕೆಳಗೆ, ಬೆರಳುಗಳ ಮಧ್ಯೆ ಬರುವಂತೆ, ಬ್ರಹ್ಮಗ್ರಂಥಿಯ ತುದಿಯು ಬಲ ಅಂಗೈ ಅಂಗುಷ್ಠದ ಕಡೆಗೆ ಇರುವಂತೆ ಇಟ್ಟುಕೊಂಡು,

ಯಜ್ಞೋಪವೀತ ಧಾರಣ ಮಂತ್ರಸ್ಯ, ಬ್ರಹ್ಮಾಋಷಿಃ, ತ್ರಿಷ್ಟುಪ್ ಛಂದಃ, ವೇದಾಸ್ತ್ರಯೋ ದೇವತಾಃ, ಯಜ್ಞೋಪವೀತಧಾರಣೇ ವಿನಿಯೋಗಃ, ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇಃ ಯತ್ಸಹಜಂ ಪುರಸ್ತಾತ್ । ಆಯುಷ್ಯಮಗ್ರ್ಯಂ ಪ್ರತಿಮುಂಚಶುಭ್ರಂ ಯಜ್ಞೋಪವೀತಂ ಬಲಮಸ್ತುತೇಜಃ ॥ ಎಂಬ ಮಂತ್ರವನ್ನು ಹೇಳಿ ಉಪವೀತವಾಗಿ ಹಾಕಿಕೊಳ್ಳಬೇಕು. ಬ್ರಹ್ಮಚಾರಿಗಳಿಗೆ ಒಂದು ಯಜ್ಞೋಪವೀತವೇ ಸಾಕಾಗುತ್ತದೆ. ಮದುವೆಯಾದವರು

ಗೃಹಸ್ಥಾಶ್ರಮಾಂಗ ಭೂತಂ ದ್ವಿತೀಯ ಯಜ್ಞೋಪವೀತ ಧಾರಣಂ ಕರಿಷ್ಯೇ ಎಂದು ಮತ್ತೆ ಸಂಕಲ್ಪಮಾಡಿ, ಮೇಲೆ ಹೇಳಿದ ರೀತಿಯಲ್ಲೇ ಎರಡನೆಯ ಯಜ್ಞೋಪವೀತವನ್ನು ಹಾಕಿಕೊಳ್ಳಬೇಕು. ಉತ್ತರೀಯಕ್ಕಾಗಿ ಎಂದು ಸಂಕಲ್ಪಮಾಡಿ ಮೂರನೆಯ ಯಜ್ಞೋಪವೀತವನ್ನು ಕೆಲವರು ಹಾಕಿಕೊಳ್ಳುವುದುಂಟು.

ಅನಂತರ ಆಚಮನ ಮಾಡಬೇಕು.

ಉಪವೀತಂ ಛಿನ್ನ ತಂತುಂ ಜೀರ್ಣಂ ಕಶ್ಮಲದೂಷಿತಂ ।
ವಿಸೃಜಾಮಿ ಹರೇ ಬ್ರಹ್ಮನ್ ವರ್ಚೋ ದೀರ್ಘಾಯುರಸ್ತು ಮೇ ॥

ಎಂದು ಹೇಳಿ ಹಳೆಯ ಯಜ್ಞೋಪವೀತವನ್ನು ಕಳಚಿ ವಿಸರ್ಜನೆ ಮಾಡಬೇಕು.

## 2. ಕಾಮೋಕಾರ್ಷೀನ್ಮಂತ್ರಜಪ

ಉಪಾಕರ್ಮದ ದಿನ ಯಜ್ಞೋಪವೀತವನ್ನು ಧರಿಸುವ ಮೊದಲು
ಓಂ ಕಾಮೋಕಾರ್ಷೀನ್ಮನ್ಯುರಕಾರ್ಷೀನ್ನಮೋ ನಮಃ—

ಎಂಬ ಮಂತ್ರವನ್ನು 108 ಅಥವಾ 1008 ಬಾರಿ ಜಪಿಸಬೇಕು ; ಯಜ್ಞೋಪವೀತ ಧಾರಣದ ನಂತರ ನವಕಾಂಡಋಷಿ ತರ್ಪಣವನ್ನು ಮಾಡಬೇಕು. [ದೇವತಾಕಾರ್ಯಗಳನ್ನು ಉಪವೀತಿಯಿಂದ, ಋಷಿತರ್ಪಣಾದಿ ಕಾರ್ಯಗಳನ್ನು ನಿವೀತಿಯಿಂದ, ಪಿತೃಕಾರ್ಯಗಳನ್ನು ಪ್ರಾಚೀನಾವೀತಿಯಿಂದ ಮಾಡಬೇಕು. ಎಲ್ಲ ಕಾಲಗಳಲ್ಲಿಯೂ ಉಪವೀತಿಯಿಂದ ಇರಬೇಕು].

## 3. ನವಕಾಂಡ ಋಷಿತರ್ಪಣ

ನೀರಿನಲ್ಲಿ ಉತ್ತರಾಭಿಮುಖವಾಗಿ ನಿಂತು, ಎರಡು ಆಚಮನಗಳನ್ನು ಮಾಡಿ ಸಂಕಲ್ಪ ಮಾಡಿದ ನಂತರ, ಯಜ್ಞೋಪವೀತವನ್ನು ನಿವೀತಿಯಾಗಿ ಹಾಕಿಕೊಂಡು ಎರಡು ಕೈಗಳಲ್ಲಿಯೂ ನೀರನ್ನು ತೆಗೆದುಕೊಂಡು, ಅದರಲ್ಲಿ ತಿಲ-ಅಕ್ಷತೆಗಳೆರಡನ್ನೂ ಸೇರಿಸಿಕೊಂಡು, ಈ ಕೆಳಗಿನ ಮಂತ್ರಗಳನ್ನು ಹೇಳಿಕೊಂಡು ಮೂರುಮೂರು ಸಲ ನೀರನ್ನು ಕೆಳಕ್ಕೆ ಬಿಡಬೇಕು.

| | | | | |
|---|---|---|---|---|
| 1. | ಓಂ ಪ್ರಜಾಪತಿಂಕಾಂಡಋಷಿಂ | ತರ್ಪಯಾಮಿ | ತರ್ಪಯಾಮಿ | ತರ್ಪಯಾಮಿ |
| 2. | ” ಸೋಮಂ ” | ” | ” | ” |
| 3. | ” ಅಗ್ನಿಂ ” | ” | ” | ” |
| 4. | ” ವಿಶ್ವಾನ್ ದೇವಾನ್ ” | ” | ” | ” |
| 5. | ” ಸಾಂಹಿತೀರ್ದೇವತಾ ಉಪನಿಷದಃ ” | ” | ” | ” |
| 6. | ” ಯಾಜ್ಞಿಕೀ ” ” | ” | ” | ” |
| 7. | ” ವಾರುಣೀ ” ” | ” | ” | ” |
| 8. | ” ಬ್ರಹ್ಮಾಣಗ್ಂ ಸ್ವಯಂಭುವ | ” | ” | ” |
| 9. | ” ಸದಸಸ್ಪತಿಂ | ” | ” | ” |

ಆಮೇಲೆ ಯಜ್ಞೋಪವೀತವನ್ನು ಉಪವೀತಿಯಾಗಿ ಹಾಕಿಕೊಂಡು ಆಚಮನ ಮಾಡಿ ಹೊರ ಬರಬೇಕು.

# IV. ಸಂಧ್ಯಾವಂದನೆ

## ವಿಷಯಪ್ರವೇಶ

ಜನ್ಮಕೊಟ್ಟು ಸಾಕಿ ಸಲಹುವ ತಾಯಿತಂದೆ, ಬಂಧುಬಳಗ, ಧಾರಕ–ಪೋಷಕಗಳಾದ ಪಂಚಭೂತ, ಪಂಚವಿಷಯ, ಪಂಚೇಂದ್ರಿಯ ಮುಂತಾದ ಅನೇಕ

ವಸ್ತುಗಳನ್ನು ಒದಗಿಸಿಕೊಟ್ಟು, ಜಗತ್ತು–ಜೀವಿಗಳಿಗೆ ಕಾರಣನೂ, ಸೂರ್ಯಾಂತರ್ಗತನೂ, ಸಕಲ ಪರಿಪೂರ್ಣನೂ ಆದ ಜಗನ್ನಿಯಾಮಕನ ಚರಣ–ನಾಮ ಸ್ಮರಣೆಗಳನ್ನು ಮಾಡಿ, ಅವನಿಗೆ ತ್ರಿಕರಣ ಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸಲು ಹಾಗೂ ಜನ್ಮಸಾರ್ಥಕ ಮಾಡಿಕೊಳ್ಳಲು, ಪ್ರಾತಃ, ಮಧ್ಯಾಹ್ನ, ಸಾಯಂ–ಎಂಬೀ ಮೂರು ಸಂಧ್ಯಾಕಾಲಗಳು ಉತ್ಕೃಷ್ಟವಾದುವು. ಸತ್ವಗುಣದ ಬೆಳವಣಿಗೆಗಾಗಿ ಪ್ರಾತಃಕಾಲದಲ್ಲಿ, ರಜೋಗುಣದ ಪ್ರಭಾವವನ್ನು ತಡೆಗಟ್ಟಲು ಮಧ್ಯಾಹ್ನ ಕಾಲದಲ್ಲಿ ಮತ್ತು ತಮೋಗುಣದ ಪ್ರಭಾವದಿಂದ ರಕ್ಷಿಸಿಕೊಳ್ಳಲು ಸಾಯಂಕಾಲದಲ್ಲಿ— ಹೀಗೆ ಈ ಮೂರು ಸಂಧ್ಯೆಗಳಲ್ಲಿ ಪರಮಾತ್ಮನನ್ನು ವಂದಿಸುವುದು ಮಾನವನ ಆದ್ಯ ಕರ್ತವ್ಯ. ಸಂಧ್ಯಾವಂದನೆಯನ್ನು ಮಾಡಿದ ನಂತರವೇ ಮನೆಯೊಳಗೆ ದೇವರ ಪೂಜೆಯನ್ನು ಮಾಡುವುದು ವಿಹಿತವಾದುದು, ಏಕೆಂದರೆ

ಸಂಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಸ್ಸರ್ವಕರ್ಮಸು ।<br>
ಯದನ್ಯತ್ಕುರುತೇ ಕರ್ಮನತಸ್ಯ ಫಲಭಾಗ್ಭವೇತ್ ॥

ಎಂಬ ವಚನದಂತೆ ಸಂಧ್ಯಾವಂದನೆ ಮಾಡದವನು ಅಶುದ್ಧಿಯಿಂದ ಕೂಡಿದವನಾದುದರಿಂದ, ಅವನು ಮಾಡುವ ಬೇರೆ ಯಾವ ವೈದಿಕ ಕರ್ಮವೂ ಫಲಪ್ರದವಾಗುವುದಿಲ್ಲ.

ಸಂಧ್ಯಾವಂದನೆಯು ಭಾರತದ ಆರ್ಯರ ನಿತ್ಯದ ಪ್ರಾರ್ಥನೆ. ಅದು ಸರಳ ನಂಬಿಕೆಯುಳ್ಳದ್ದಾದರೂ ಉದಾತ್ತ ಆಧ್ಯಾತ್ಮಿಕತೆಯ ತಿರುಳಾಗಿದೆ. ಆದಕಾರಣ ಇದನ್ನು ಸರಿಯಾಗಿ ಶ್ರದ್ಧಾಸಕ್ತಿಯಿಂದ ಮಾಡಬೇಕು. ಅರ್ಥಜ್ಞಾನವಿಲ್ಲದ ಮಂತ್ರೋಚ್ಚಾರಣೆಯು ಫಲಿಸುವುದಿಲ್ಲವಾಗಿ ಅದನ್ನು ತಿಳಿದುಕೊಳ್ಳಬೇಕು. ನಮ್ಮ ರಕ್ತ ನರನಾಡಿಗಳಲ್ಲೆಲ್ಲ ಪ್ರಾಚೀನ ಋಷಿಗಳ ರಕ್ತ ಹರಿಯುವುದರಿಂದ, ಅವರು ಆಡಿದ ಸಂಸ್ಕೃತ ಭಾಷೆಯಲ್ಲಿಯೇ ಪ್ರಾರ್ಥನೆ ಮಾಡುವುದು ನಮಗೆ ಹೆಮ್ಮೆಯನ್ನುಂಟು ಮಾಡುವ ವಿಷಯ. ಪ್ರಪಂಚದ ಇನ್ನಾವ ಭಾಷೆಯಲ್ಲಿಯೂ ಇರದ ಈ ರೀತಿಯ ಪ್ರಾರ್ಥನೆಯು ಸಾವಿರಾರು ವರ್ಷಗಳಿಂದಲೂ ಆರ್ಯರ ಆಸೆ, ಆಕಾಂಕ್ಷೆ, ಚರಿತ್ರೆ, ಜೀವನಗಳೆಲ್ಲದರ ಮೇಲೆಯೂ ಆಳವಾದ ಪ್ರಭಾವವನ್ನು ಬೀರಿದೆ. ವಿವಿಧ ರಾಜ್ಯ, ಜಾತಿ, ಸಮುದಾಯಗಳಿಗೆಲ್ಲ ಸೇರಿದ ಭಾರತೀಯರನ್ನು ಒಂದುಗೂಡಿಸಲು ಈ ಪ್ರಾರ್ಥನೆಯು ತುಂಬಾ ನೆರವು ನೀಡಿದೆ.

ವೇದಗಳಲ್ಲಿರುವ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳೆಲ್ಲವೂ ಬೇರೆಬೇರೆ ಕಾಲಗಳಲ್ಲಿ, ಮಾನವನ ಉದ್ಧಾರಕ್ಕಾಗಿ ಋಷಿಗಳ ಮೂಲಕ ನೀಡಿದ ಪರಮಾತ್ಮನ ವಾಣಿಯೇ ಆಗಿವೆ. ತಿಳಿಯಲಾಗದ ಜನನ–ಜೀವನ-ಮರಣಗಳ ರಹಸ್ಯವನ್ನು ತಿಳಿಸುವ ಇವುಗಳಿಂದ, ಆಧ್ಯಾತ್ಮಿಕತೆಯನ್ನು ತಿಳಿದುಕೊಳ್ಳುವ

ಸರಿಯಾದ ದಾರಿ ಸಿಗುತ್ತದೆ. ಈ ರೀತಿಯ ಸ್ವಾನುಭೂತಿಯ ನೇರವಾದ ಅನುಭವದಿಂದ ಸತ್ಯದ ದರ್ಶನ ಆಗುತ್ತದೆ. ಈ ಕಾರಣದಿಂದಲೇ ಮಾನವ ನಿರ್ಮಿತವಲ್ಲದ, ಮಾನವನಿಂದ ಆಲಿಸಲ್ಪಟ್ಟ, ನೋಡಲ್ಪಟ್ಟ ವಿಷಯಗಳಿರುವ ಹಾಗೂ ಹುಟ್ಟು-ಸಂಸ್ಕಾರದಿಂದ ತನ್ನ ಉದ್ಧಾರಕ್ಕಾಗಿ ಉಪಯೋಗಿಸುವ ವೇದ ಮಂತ್ರಗಳನ್ನು, ಸ್ಫೂರ್ತಿ ನೀಡುವ, ಪವಿತ್ರ ವಾಣಿಯ ಈ ಪ್ರಾರ್ಥನೆಯನ್ನು, ಆಡುಭಾಷೆಗೆ ಇಳಿಸುವುದು ಹಿತವೂ ಅಲ್ಲ, ಬುದ್ಧಿವಂತಿಕೆಯೂ ಅಲ್ಲ.

ಋಷಯೋ ದೀರ್ಘ ಸಂಧ್ಯಾತ್ವಾ ದೀರ್ಘ ಮಾಯುರವಾಪ್ನುಯುಃ ।
ಪ್ರಜ್ಞಾಂ ಯಶಶ್ಚ ಕೀರ್ತಿಂಚ ಬ್ರಹ್ಮವರ್ಚಸ ಮೇವಚ ॥

ಎಂಬಂತೆ ದೀರ್ಘಕಾಲದವರೆಗೆ ಸಂಧ್ಯೋಪಾಸನೆ ಮಾಡಿದುದರಿಂದಲೇ ಋಷಿಗಳು ದೀರ್ಘಾಯುಸ್ಸು, ಬುದ್ಧಿ, ಕೀರ್ತಿ, ಯಶಸ್ಸು, ಬ್ರಹ್ಮತೇಜಸ್ಸುಗಳನ್ನು ಪಡೆದಿದ್ದರು. ಸಂಧ್ಯಾವಂದನ ಕರ್ಮದಿಂದ ದೇಹಶುದ್ಧಿ, ಮನಃಪ್ರಸನ್ನತೆ, ಬುದ್ಧಿಸಂಸ್ಕಾರಗಳು ಉಂಟಾಗುವುದು ನಿಜ.

ದ್ವಿಜ ಅಥವಾ ಬ್ರಾಹ್ಮಣ ಎಂದು ಕರೆಸಿಕೊಳ್ಳುವವರೆಲ್ಲರೂ ಯುಕ್ತವೇಳೆಯಲ್ಲಿ ಬೆಳಗ್ಗೆ, ಮಧ್ಯಾಹ್ನ, ಸಂಜೆ ಸಂಧ್ಯಾವಂದನೆಯನ್ನು ಮಾಡಬೇಕು. ಸೂರ್ಯನು ಉದಯಿಸುವ ವೇಳೆಯೇ ಪ್ರಾತಃ ಸಂಧ್ಯೆ; ಅವನು ಬಾನಿನ ನಡುನೆತ್ತಿಗೆ ಬರುವ ನಡುಹಗಲಿನ ವೇಳೆಯೇ ಮಧ್ಯಾಹ್ನ ಸಂಧ್ಯೆ; ಅವನು ಅಸ್ತಮಿಸುವ ವೇಳೆಯೇ ಸಾಯಂ ಸಂಧ್ಯೆ. ಇವು ಮೂರನ್ನೂ ಸಂಧ್ಯಾಕಾಲ ಎನ್ನುತ್ತಾರೆ. ಸಂಧ್ಯೆ ಎಂದರೆ ಕಾಲ, ಕರ್ಮ, ದೇವತೆ ಎಂದೂ ಅರ್ಥಗಳುಂಟು. ಈ ಕಾಲಗಳಲ್ಲಿ ಸರ್ವೇಶ್ವರನಾದ ಭಗವಂತನನ್ನು ಪೂಜಿಸಿ, ಉಪಾಸಿಸಿ, ವಂದಿಸಬೇಕಾದುದು ನಮ್ಮ ಆದ್ಯ ಕರ್ತವ್ಯ. ಅಸಾವಾದಿತ್ಯೋ ಬ್ರಹ್ಮ ಎಂಬ ವಚನದಂತೆ ಸೂರ್ಯನೇ ಬ್ರಹ್ಮನ್ ಅಥವಾ ಪರಮಾತ್ಮ ಆಗಿದ್ದಾನೆ. ಸೂರ್ಯನಿಗೆ ಸವಿತೃ, ಗಾಯತ್ರಿ, ದೇವಿ ಎಂದೂ ಹೆಸರುಗಳುಂಟು.

ಉದಯಿಸುವ, ನೆತ್ತಿಯ ಮೇಲೆ ಬರುವ, ಅಸ್ತಮಿಸುವ ಸೂರ್ಯನಿಗೆ ಅರ್ಘ್ಯ ಕೊಡಬೇಕು. ಗಾಯತ್ರಿಯನ್ನು ಕುರಿತು ಧ್ಯಾನಮಾಡಬೇಕು. ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು, ಪವಿತ್ರವಾದ ನದಿಯ ನೀರಿನಲ್ಲಿ ಮಿಂದು ನಿತ್ಯಕರ್ಮಗಳನ್ನು ಮಾಡಬೇಕು. ನೀರಿನಿಂದ ದೇಹವು, ಜ್ಞಾನದಿಂದ ಬುದ್ಧಿಯು, ಸತ್ಯದಿಂದ ಅಂತಃಕರಣವು ಶುದ್ಧಿಯಾಗುತ್ತದೆ. ಇತರ ಜೀವರನ್ನು ನೋಯಿಸದಿರುವುದರಿಂದ ಆತ್ಮವು ಶುದ್ಧಿ ಹೊಂದುತ್ತದೆ. ಆಂತರಿಕ ಹಾಗೂ ಬಾಹ್ಯ ಶುದ್ಧಿಗಳೆರಡೂ ಆವಶ್ಯಕವಾದರೂ ಬಾಹ್ಯ ಶುದ್ಧಿಗಿಂತ ಆಂತರಿಕ ಶುದ್ಧಿಯೇ ಮುಖ್ಯವಾದುದು. ಆಂತರಿಕಶುದ್ಧಿ ಇರು

ವವರು ಕೈಕಾಲುಗಳನ್ನು ತೊಳೆದುಕೊಂಡು, ಆಚಮನವಮಾಡಿ, ಮಂತ್ರ ಸ್ನಾನ ಮಾಡಿದರೂ ಸಂಧ್ಯಾವಂದನೆಗೆ ಅರ್ಹತೆ ಇರುತ್ತದೆ. ಆಂತರಿಕ-ಬಾಹ್ಯ ಶುದ್ಧಿಗಳೆರಡೂ ಇದ್ದರೆ ಮಾತ್ರ ಯೋಗಸಿದ್ಧಿಯಾಗುತ್ತದೆ. ವೇದವೇದಾಂಗಗಳಲ್ಲಿ ಉತ್ತಮ ಪಾಂಡಿತ್ಯವಿದ್ದರೂ ಧರ್ಮಮಾರ್ಗ ಬಿಟ್ಟರೆ, ಒಳ್ಳೆಯ ನಡತೆ ಇಲ್ಲದಿದ್ದರೆ ವ್ಯರ್ಥವಾಗುತ್ತದೆ. ಜೀವಿಗಳಲ್ಲಿ ದಯೆ, ತಾಳ್ಮೆ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳಿಂದ ಬಿಡುಗಡೆ, ಭಾವನಾಶುದ್ಧಿ ಎಂಬ ಆತ್ಮಗುಣಗಳನ್ನು ಹೊಂದಿದರೆ ಬ್ರಹ್ಮಸಾಕ್ಷಾತ್ಕಾರ ಆಗುವುದು ನಿಜ.

[ಸಂಧ್ಯಾವಂದನೆಯ ಮಂತ್ರ-ತಂತ್ರಗಳನ್ನು ಸದಾಚಾರ್ಯ ಮುಖೇನ ಉಪದೇಶ ಹೊಂದಿ ಕ್ರಮವರಿತು ಮಾಡುವುದು ಒಳ್ಳೆಯದು. ಏಕೆಂದರೆ ಆಚಾರ್ಯೋಪದೇಶವಿಲ್ಲದೆ ಜಪಿಸುವ ಮಂತ್ರಗಳು ಸಿದ್ಧಿಸಲಾರವು ಎಂಬುದು ಪರಂಪರಾಗತವಾದ ನಂಬಿಕೆ.]

ಸ್ನಾನದ ನಂತರ ಶುಭ್ರವಾಗಿ ಒಗೆದು ಒಣಗಿಸಿದ ವಸ್ತ್ರಗಳನ್ನು ಧರಿಸಿ ಊರ್ಧ್ವಪುಂಡ್ರವನ್ನು ಹಣೆ ಮತ್ತು ದೇಹದ ಮೇಲೆ ಹಾಕಿಕೊಳ್ಳಬೇಕು. ಶ್ರೀವೈಷ್ಣವನಿಗೆ ಉಪನಯನ, ಶಂಖ ಚಕ್ರಗಳ ಮುದ್ರಾಧಾರಣೆ ಆಗಿರುವುದು ಅವಶ್ಯಕ.

**1. ಪಾದಪ್ರಕ್ಷಾಳನ :** ಕಾಲುಗಳನ್ನು ತೊಳೆದುಕೊಳ್ಳಬೇಕು.

**2. ಮಂತ್ರಸ್ನಾನ:** ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂಗತೋಪಿವಾ।
ಯಃಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಶ್ಶುಚಿಃ॥
ಎಂದು ನೀರನ್ನು ಪ್ರೋಕ್ಷಿಸಿಕೊಳ್ಳಬೇಕು.

(ರಾಗ ದ್ವೇಷಗಳಿಂದ ಪರಿಶುದ್ಧನಾಗಿಲ್ಲದಿದ್ದರೂ ಅಥವಾ ಪರಿಶುದ್ಧನಾಗಿದ್ದರೂ, ಎಲ್ಲ ಅವಸ್ಥೆಗಳನ್ನು ಹೊಂದಿದವನಾಗಿದ್ದರೂ, ಯಾವನು ಕೆಂದಾವರೆಯ ದಳಗಳಂತೆ ಕಣ್ಣುಗಳ ಆಕಾರವುಳ್ಳ ಮಹಾವಿಷ್ಣುವನ್ನು ಧ್ಯಾನಿಸುತ್ತಾನೋ, ಅವನು ದೇಹದ ಒಳಗೂ ಹೊರಗೂ ಪರಿಶುದ್ಧನಾಗುತ್ತಾನೆ)

**3. ಆಚಮನ :** ಪ್ರತಿಯೊಂದು ಕರ್ಮದ ಆದಿ-ಅಂತ್ಯಗಳಲ್ಲಿ, ಆಚಮನವನ್ನು ಮಾಡುವುದರ ಮೂಲಕ ಕುಡಿಯುವ ಮಂತ್ರಪೂರಿತವಾದ ನೀರು, ನರಗಳಿಗೆ ಹೋಗಿ ಅವುಗಳನ್ನು ವಿಕಾಸಗೊಳಿಸುತ್ತದೆ. ತಣ್ಣೀರಿನಿಂದ ಒದ್ದೆಯಾದ ಬೆರಳುಗಳಿಂದ ಶರೀರದ ಬೇರೆಬೇರೆ ಭಾಗಗಳನ್ನು ಸ್ಪರ್ಶಿಸುವುದರ ಮೂಲಕ ಶಕ್ತಿ, ಚೈತನ್ಯ, ಆರೋಗ್ಯ ಉಂಟಾಗಿ ದೃಢಕಾಯತೆ ಬರುತ್ತದೆ. ಜೊತೆಗೆ ಸತ್ಸಂತಾನ ಉಂಟಾಗಲು ಸಹಕಾರಿಯಾಗುತ್ತದೆ.

ಮಂತ್ರಸ್ನಾನದ ನಂತರ ಆಚಮನ ಮತ್ತು ಪ್ರಾರಂಭಿಕ ಕರ್ಮವನ್ನು ಮಾಡಬೇಕು. ಶುದ್ಧವಾದ ಜಾಗದಲ್ಲಿ ಪೂರ್ವ ಅಥವಾ ಉತ್ತರಕ್ಕೆ ಎದುರಾಗಿ ಕುಕ್ಕುಟಾಸನದಲ್ಲಿ ಕುಳಿತು, ಮಂಡಿಯೊಳಗಡೆ ಬಲಗೈ ಇಟ್ಟು, ಯಜ್ಞೋಪವೀತವು ಎಡಭುಜದ ಮೇಲೆ, ಬಲಭುಜದ ಕೆಳಗೆ ಇರುವಂತೆ ನೋಡಿಕೊಳ್ಳಬೇಕು. ಕೈಗಳನ್ನು ತೊಳೆದು, ಗೋಕರ್ಣಾಕಾರವಾದ ಬಲ ಅಂಗೈನಲ್ಲಿ ಒಂದು ಉದ್ದಿನಕಾಳು ಮುಳುಗುವಷ್ಟು ಶುದ್ಧವಾದ ನೀರನ್ನು ತೆಗೆದುಕೊಂಡು, ಓಂ ಅಚ್ಯುತಾಯನಮಃ, ಓಂ ಅನಂತಾಯನಮಃ, ಓಂ ಗೋವಿಂದಾಯನಮಃ ಎಂದು ಭಗವಂತನ ಸ್ಮರಣೆ, ನಾಮೋಚ್ಚಾರಣೆ ಮಾಡುತ್ತ, ಆ ಶುದ್ಧವಾದ ನೀರನ್ನು ಮೂರುಬಾರಿ ಮಂತ್ರೋಕ್ತವಾಗಿ, ಶಬ್ದವಾಗದ ಹಾಗೆ ಕುಡಿಯಬೇಕು.

ಆಮೇಲೆ ತುಟಿಯನ್ನು ಒರೆಸಿಕೊಂಡು ಓಂ ಕೇಶವಾಯ ನಮಃ, ಓಂ ನಾರಾಯಣಾಯ ನಮಃ, ಓಂ ಮಾಧವಾಯ ನಮಃ, ಓಂ ಗೋವಿಂದಾಯ ನಮಃ, ಓ ವಿಷ್ಣವೇ ನಮಃ, ಓಂ ಮಧುಸೂದನಾಯ ನಮಃ, ಓಂ ತ್ರಿವಿಕ್ರಮಾಯ ನಮಃ, ಓಂ ವಾಮನಾಯ ನಮಃ, ಓಂ ಶ್ರೀಧರಾಯ ನಮಃ, ಓಂ ಹೃಷೀಕೇಶಾಯ ನಮಃ, ಓಂ ಪದ್ಮನಾಭಾಯ ನಮಃ, ಓಂ ದಾಮೋದರಾಯ ನಮಃ ಎಂಬ ವಿಷ್ಣುವಿನ ದ್ವಾದಶ ನಾಮಗಳನ್ನು ಹೇಳುತ್ತ ಶರೀರದಲ್ಲಿನ ಕಪೋಲ, ಕಣ್ಣು, ಮೂಗು, ಕಿವಿ, ಭುಜ, ಹೊಕ್ಕಳು, ಎದೆಗಳನ್ನು ಮುಟ್ಟಬೇಕು. ಆಮೇಲೆ ಶ್ರೀ ವಾಸುದೇವಾಯ ನಮಃ ಎಂದು ಹೇಳುತ್ತ ಎಲ್ಲಾ ಬೆರಳುಗಳನ್ನೂ ಶಿರಸ್ಸಿನಲ್ಲಿ ಇಡಬೇಕು.

[ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಕರ್ತರಾದ ಬ್ರಹ್ಮ, ವಿಷ್ಣು, ರುದ್ರರನ್ನು ಪ್ರಳಯ ಕಾಲದಲ್ಲಿ ತನ್ನೊಳಗೆ ಅಡಗಿಸಿಕೊಂಡು ನಿರಾಕಾರನಾಗುವವನು **ಕೇಶವ ;** ಬುದ್ಧಿಯೆಂಬ ಗುಹೆಯಲ್ಲಿ ವಾಸಮಾಡುವ ಶುದ್ಧ ಚೈತನ್ಯಸ್ವರೂಪ **ನಾರಾಯಣ ;** ಅವಿದ್ಯೆಯನ್ನು ನಾಶಮಾಡುವವನು ಹಾಗೂ ಲಕ್ಷ್ಮಿಯ ಪತಿ **ಮಾಧವ ;** ಮನಸ್ಸನ್ನು ಚೇತನಗೊಳಿಸುವವನು **ಗೋವಿಂದ ;** ಸಮಸ್ತ ವಸ್ತುಗಳನ್ನೂ ಒಳಗೆ ಅಡಗಿಸಿಕೊಳ್ಳುವವ ಹಾಗೂ ಅವುಗಳ ಹೊರಗೆ ಆವರಿಸಿಕೊಂಡಿರುವವ **ವಿಷ್ಣು ;** ಮಧುವೆಂಬ ರಾಕ್ಷಸನನ್ನು ಕೊಂದವ **ಮಧುಸೂದನ ;** ಮೂರು ಲೋಕಗಳನ್ನೂ ಆಕ್ರಮಿಸಿದವನು **ತ್ರಿವಿಕ್ರಮ;** ಮಂಗಳರೂಪವಾದ ವೇದಗಳಿಂದ ಸ್ತೋತ್ರಮಾಡಿಸಿಕೊಳ್ಳುವವನು **ವಾಮನ ;** ಲಕ್ಷ್ಮಿಯನ್ನು ಸದಾ ತನ್ನ ವಕ್ಷಸ್ಥಳದಲ್ಲಿ ಧರಿಸಿರುವವನು **ಶ್ರೀಧರ ;** ಇಂದ್ರಿಯಗಳ ನಿಯಾಮಕನಾದವನು **ಹೃಷೀಕೇಶ ;** ನಾಭಿಯಲ್ಲಿ ಪದ್ಮವನ್ನು ಹೊಂದಿರುವವನು ಹಾಗೂ ಹೃದಯ ಕಮಲದಲ್ಲಿ ವಿರಾಜಿಸುವವನು **ಪದ್ಮನಾಭ ;** ಶಮದಮಾದಿಷಟ್ಸಾಧನಗಳಿಂದ, ಸುಸಂಸ್ಕೃತ ಮನಸ್ಸಿನಿಂದ ಂದೂಹೆಬಹುದಾದವನು **ದಾಮೋದರ]**

ನದಿ, ಕೆರೆ, ಕೊಳಗಳಲ್ಲಿ ಆಚಮನ ಮಾಡುವಾಗ, ದಡದಲ್ಲಿ ಒಂದು ಕಾಲು, ನೀರಿನಲ್ಲಿ ಒಂದು ಕಾಲು, ಇಟ್ಟು ಕುಳಿತು ಅಥವಾ ಎಡಗೈನಲ್ಲಿ ನೀರನ್ನು ಸ್ಪರ್ಶಿಸುತ್ತ ಮಾಡಬೇಕು.

ಭಗವಂತನ ಉಪಾಸನೆಗೆ ಮನ ಮತ್ತು ಶರೀರ ಎರಡರ ಶುದ್ಧಿಯೂ ಅಗತ್ಯ. ಶರೀರದ ಪ್ರಾರಂಭಿಕ ಶುದ್ಧೀಕರಣ ಕರ್ಮವು ಎಲ್ಲ ಧಾರ್ಮಿಕ ವಿಧಿಗಳಿಗೂ ಅತಿ ಅವಶ್ಯಕವಾದುದು. ಏಕೆಂದರೆ ವ್ಯಕ್ತಿಯು ಮುಂಜಿ ಅಥವಾ ಉಪನಯನ ಆಗುವ ವರೆಗೂ ಮಾತು, ವರ್ತನೆ, ತಿನಿಸುಗಳಲ್ಲಿ ತನಗೆ ಇಷ್ಟಬಂದಂತೆ ಮಾಡಬಹುದಾಗಿದ್ದಿತು. ಆದರೆ ಉಪನಯನದ ನಂತರ ಆಚಮನ ಮಾಡಿದ ನಂತರವೇ ಧಾರ್ಮಿಕ ವಿಧಿಯಲ್ಲಿ ತೊಡಗಬೇಕು ಎಂಬುದು ಆಚಾರ್ಯರ ಕಟ್ಟಪ್ಪಣೆಯಾಗಿರುತ್ತದೆ.

ಎರಡು ಬಾರಿ ಆಚಮನ, ಒಂದು ಬಾರಿ ಪ್ರಾಣಾಯಾಮ ಮಾಡಿ, ಸಂಕಲ್ಪ ಮಾಡಿ, ಕೈಮುಗಿದುಕೊಂಡು 'ಸ್ವಶೇಷ ಭೂತೇನಮಯಾ ಸ್ವೀಯೈಃ ಸರ್ವ ಪರಿಚ್ಛದೈಃ । ವಿಧಾತಂ ಪ್ರೀತಮಾತ್ಮಾನಂ ದೇವಃ ಪ್ರಕ್ರಮತೇ ಸ್ವಯಂ । ಎಂದು ಹೇಳಿ ಸಾತ್ವಿಕತ್ಯಾಗ ಮಾಡಬೇಕು.

### 5. ಧ್ಯಾನಶ್ಲೋಕ :

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನ ವದನಂ ಧ್ಯಾಯೇತ್ಸರ್ವ ವಿಘ್ನೋಪ ಶಾಂತಯೇ ॥
ಯಸ್ಯದ್ವಿರದ ವಕ್ತ್ರಾದ್ಯಾಃ ಪಾರಿಶದ್ಯಾಃ ಪರಶ್ಶತಂ ।
ವಿಘ್ನಂ ನಿಘ್ನಂತಿ ನತತಂ ವಿಷ್ವಕ್ಸೇನಂ ತಮಾಶ್ರಯೇ ॥

ಬ್ರಹ್ಮಣಸ್ಪತಿಯಾಗಿ, ವೈದಿಕಮಂತ್ರಗಳಿಗೆ ಹಾಗೂ ವೈದಿಕ ಜ್ಞಾನದ ಪ್ರಣವಕ್ಕೆ, ಓಂಗೆ, ಆಧಾರವಾಗಿ, ದೈವದ್ರೋಹಿಗಳಿಗೆ ಶತ್ರುವಾಗಿ, ಇರುವ ಈ ಪ್ರಾರ್ಥನೆಯಿಂದ ವಿಘ್ನಗಳು ದೂರಾಗಿ ಭೂತಚೇಷ್ಟೆಯಿಂದ ತೊಂದರೆ ಇರುವುದಿಲ್ಲ.

**6. ಪ್ರಾಣಾಯಾಮ :** ಶರೀರದಲ್ಲಿನ ಪ್ರಾಣವಾಯುವನ್ನು ತಡೆಯುವುದು ಪ್ರಾಣಾಯಾಮ. ಬೆಂಕಿಯಲ್ಲಿ ಕಾಯಿಸಿದಾಗ ಧಾತುಗಳ ಕಶ್ಮಲಗಳೆಲ್ಲ ಸುಟ್ಟುಹೋಗುವಂತೆ, ವಿಧಿವತ್ತಾಗಿ ಮಾಡುವ ಪ್ರಾಣಾಯಾಮದಿಂದ, ಶ್ವಾಸೋಚ್ಛ್ವಾಸಗಳ ನಿಯಮನ ಆಗಿ ಇಂದ್ರಿಯಗಳ ದೋಷಗಳು ದೂರಾಗುತ್ತವೆ.

ಹೀಗೆ ಪ್ರಾಣಾಯಾಮ ಮಾಡುವುದು ಅಥವಾ ಉಸಿರನ್ನು ನಿಗ್ರಹಿಸುವುದು ಮುಖ್ಯವಾದುದು. ಎದೆ, ಕಂಠ, ತಲೆ, ನೇರವಾಗಿರುವಂತೆ ಕುಳಿತುಕೊಳ್ಳಬೇಕು.

ಇದು ಮೊದಮೊದಲು ಕಷ್ಟವಾದರೂ ಸ್ವಲ್ಪ ಅಭ್ಯಾಸದಿಂದ ಸುಲಭ, ಸ್ವಾಭಾವಿಕ ಆಗುತ್ತದೆ. ನೇರವಾಗಿ ಕುಳಿತುಕೊಳ್ಳದಿದ್ದರೆ ಬೆನ್ನುಹುರಿ ಸರಿಯಾಗಿರುವುದಿಲ್ಲವಾದುದರಿಂದ, ಮೂಗಿನ ಹೊಳ್ಳೆಯಲ್ಲಿ ಉಚ್ಛ್ವಾಸ, ನಿಶ್ವಾಸಗಳು ಒಂದೇ ಅಳತೆಯಲ್ಲಿ ಸರಿಯಾಗಿ ನಡೆಯುವುದಿಲ್ಲ. ಪ್ರಾಣವಾಯುವಿನ ನಿಯಂತ್ರಣ ಸರಿಯಾಗಿ ಆದರೆ, ವಿಷಯಾಸಕ್ತಿ ಕಡಿಮೆಯಾಗಿ, ಮನಸ್ಸಿನ ಸಂದೇಹ ಚಂಚಲತೆ ಹೋಗಿ, ಚಿತ್ತಶುದ್ಧಿ ಧ್ಯೇಯಶುದ್ಧಿ ಉಂಟಾಗುತ್ತದೆ.

ದೇಹವನ್ನು ಒಂದೇ ನೇರದಲ್ಲಿರಿಸಿ, ಮನಸ್ಸನ್ನು ಒಳತಿರುಗಿಸಬೇಕು. ಮೂಗಿನ ಎಡ ಹೊಳ್ಳೆಯನ್ನು ಅನಾಮಿಕ ಅಥವಾ ಮಧ್ಯದ ಬೆರಳಿನಿಂದ ಮುಚ್ಚಿ ಅಮುಕಿ ಹಿಡಿದು, ಬಲಹೊಳ್ಳೆಯಿಂದ ಉಸಿರನ್ನು ಹೊರಕ್ಕೆ ಬಿಡಬೇಕು ; ಆಮೇಲೆ ಬಲಗೈ ಹೆಬ್ಬೆರಳಿನಿಂದ ಮೂಗಿನ ಬಲಹೊಳ್ಳೆಯನ್ನು ಅಮುಕಿ ಹಿಡಿದು ನಿಧಾನವಾಗಿ ಎಡಹೊಳ್ಳೆಯಿಂದ ಉಸಿರನ್ನು ಒಳಕ್ಕೆ ಎಳೆದುಕೊಳ್ಳಬೇಕು. ಅನಂತರ ಬಲಗಡೆಯ ಹೆಬ್ಬೆರಳಿನಿಂದ, ಎಡಗಡೆಯನ್ನು ಕೊನೆಯ ಎರಡು ಬೆರಳುಗಳಿಂದ ಅಮುಕಿ ಹಿಡಿದು, 4 ರಿಂದ 16 ಸೆಕೆಂಡುಗಳ ಕಾಲ ಉಸಿರನ್ನು ನಿಗ್ರಹಿಸಬೇಕು. ಆಮೇಲೆ ಹೆಬ್ಬೆರಳನ್ನು ತೆಗೆದು ಬಲಹೊಳ್ಳೆಯಿಂದ ಉಸಿರನ್ನು ನಿಧಾನವಾಗಿ ಹೊರಕ್ಕೆ ಬಿಡಬೇಕು. ಹೊರಕ್ಕೆ ಬಿಡುವುದು ರೇಚಕ, ಒಳಕ್ಕೆ ಎಳೆದುಕೊಳ್ಳುವುದು ಪೂರಕ, ನಿಗ್ರಹಿಸುವುದು ಕುಂಭಕ. ಸಂಧ್ಯಾಸಮಯದಲ್ಲಿ ಶಾಂತಿಯಿರುವಾಗ ಪ್ರಾಣಾಯಾಮದ ಅಭ್ಯಾಸಕ್ಕೆ ಆದರ್ಶವಾಗಿರುತ್ತದೆ.

ಬೆನ್ನುಹುರಿಯಲ್ಲಿ ಇಡಾ, ಪಿಂಗಳ ಎಂಬೆರಡು ನರಪ್ರವಾಹವಿದೆ. ಪಿಂಗಳಾ ನಾಡಿಯು ಬೆನ್ನು ಹುರಿಯ ಕೆಳಗೆ ಬಲಭಾಗದಿಂದ ಹೊರಟು ಮೂಗಿನ ಎಡ ಹೊಳ್ಳೆಯಲ್ಲಿ ಅಂತ್ಯವಾಗುತ್ತದೆ ; ಹಾಗೆಯೇ ಇಡಾ ನಾಡಿಯು ಬೆನ್ನು ಹುರಿಯ ಕೆಳಗೆ ಎಡಭಾಗದಿಂದ ಹೊರಟು ಮೂಗಿನ ಬಲಹೊಳ್ಳೆಯಲ್ಲಿ ಅಂತ್ಯಗೊಳ್ಳುತ್ತದೆ. ಈ ಎರಡು ನರವೆಂಬ ಕಾಲುವೆಗಳ ಮೂಲಕವೇ ಪ್ರಾಣಶಕ್ತಿಯ ಪ್ರವಾಹವು ಹರಿಯುತ್ತಿರುತ್ತದೆ. ಇದು ವಿವಿಧ ಇಂದ್ರಿಯಗಳ ಕೆಲಸವನ್ನು ಅಂದರೆ ಉಚ್ಛ್ವಾಸ-ನಿಶ್ವಾಸ, ರಕ್ತಪರಿಚಲನೆ, ಆಹಾರ ಜೀರ್ಣವಾಗುವಿಕೆ, ಮುಂತಾದ ದೈಹಿಕ ಚಟುವಟಿಕೆಗಳನ್ನೂ ಮತ್ತು ಇತರ ಮಾನಸಿಕ ಚಟುವಟಿಕೆಗಳನ್ನೂ ವ್ಯವಸ್ಥೆಗೊಳಿಸುತ್ತದೆ. ಅಂದರೆ ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳು ಇದರಿಂದ ಚುರುಕಾಗುತ್ತವೆ. ಈ ಕಾಲುವೆಯು ಮೂಲಾಧಾರದ ಬಳಿ ಕೊನೆಗೊಳ್ಳುತ್ತದೆ. ಈ ಸ್ಥಳದಲ್ಲಿ ಸುಷುಮ್ನಾ ನಾಡಿಯ ಅಡಿಯಲ್ಲಿರುವ ಕುಂಡಲಿನಿ ಎಂಬ ಪ್ರಚಂಡ ಶಕ್ತಿಯು ಮುದುರಿಕೊಂಡು ನಿದ್ರಾವಸ್ಥೆಯಲ್ಲಿರುತ್ತದೆ. ಮಾನವನ ಪ್ರಾಣಶಕ್ತಿಯು ಸಾಮಾನ್ಯವಾದ ನರ ಮಂಡಲಗಳ ಮೂಲಕ ಪ್ರವಹಿಸುತ್ತಿರುವಾಗ, ಮೂಲಾಧಾರದಲ್ಲಿ ಅಡಗಿರುವ

ಪ್ರಚಂಡ ಚೈತನ್ಯ ಶಕ್ತಿಯು ಯೋಗಸಾಧನೆಯಿಂದ ಎಚ್ಚೆತ್ತು, ಮೇಲೇರುತ್ತ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ ಚಕ್ರ, ಆಜ್ಞಾ ಚಕ್ರಗಳ ಮೂಲಕ ಸಹಸ್ರಾರದಲ್ಲಿ ಹೋಗಿ ನಿಂತರೆ, ಮಾನವನ ಮನಸ್ಸು ಬಹು ಉನ್ನತ ಮಟ್ಟಕ್ಕೆ ಹೋಗಿ ಆತ್ಮದ ಅರಿವನ್ನು ಪಡೆಯಬಲ್ಲುದು. ವೇದಗಳ ಕಾಲದ ಋಷಿಗಳಲ್ಲಿ ಈ ಕುಂಡಲಿನಿ ಶಕ್ತಿಯು ಎಚ್ಚೆತ್ತು, ಕಾರ್ಯದಲ್ಲಿ ತೊಡಗಿದುದರಿಂದಲೇ ಅವರಿಗೆ ದೈವೀ ಜ್ಞಾನವನ್ನು ಪಡೆಯಲು, ಆತ್ಮ ಸಾಕ್ಷಾತ್ಕಾರ ಹೊಂದಲು ಸಾಧ್ಯವಾಗಿದ್ದಿತು. ದೇವರ ಮೇಲಿನ ಪ್ರೇಮ, ಯೋಗ, ಯಾಗ, ದೇವರ ಕರುಣೆ—ಇವುಗಳಿಂದ ಈ ಶಕ್ತಿಯನ್ನು ಎಚ್ಚರಿಸಲು ಸಾಧ್ಯವಾಗುತ್ತದೆ.

ದೇಹದ ಎಲ್ಲ ಮುಖ್ಯ ಕಾರ್ಯಗಳೂ ಪ್ರಾಣಶಕ್ತಿಯ ವ್ಯವಸ್ಥೆ-ಹಿಡಿತಗಳಿಗೆ ಒಳಪಟ್ಟಿರುತ್ತವೆ. ಶ್ವಾಸಕೋಶಗಳ ಕಾರ್ಯದಿಂದಲೇ ಮುಖ್ಯವಾಗಿ ಪ್ರಾಣ ಇರುವುದೆಂದು ತಿಳಿಯುತ್ತದೆ. ಶ್ವಾಸಕೋಶಗಳ ಕೆಲಸವು ಸಮರಸ-ಸಮನ್ವಯ ಆಗಿದ್ದರೆ, ದೇಹ-ಮನಸ್ಸುಗಳ ಇತರ ಚಟುವಟಿಕೆಗಳೂ ಅದೇ ರೀತಿಯಲ್ಲಿರುತ್ತವೆ. ಸತತ ಅಭ್ಯಾಸದಿಂದ ಕುಂಡಲಿನಿ ಶಕ್ತಿಯನ್ನು ಎಬ್ಬಿಸಿ ಮೇಲಕ್ಕೆ ಪ್ರವಹಿಸುವಂತೆ ಮಾಡಬಹುದು. ಹೆಚ್ಚು ಶ್ರದ್ಧೆ, ನಂಬಿಕೆಗಳಿಂದ ಕಾರ್ಯ ಮಾಡುತ್ತಿದ್ದರೆ, ಆಲೋಚನೆ, ಕರ್ಮ, ದೇಹಗಳಲ್ಲಿ ಶುದ್ಧಿ ಇದ್ದರೆ, ಗುರೂಪದೇಶವಾಗಿ ಗುರುಕೃಪೆ ಒದಗುತ್ತದೆ. ಯೋಗದಲ್ಲಿ ಯಮ ನಿಯಮಗಳ ನಂತರವೇ ಪ್ರಾಣಾಯಾಮ ಬರುವುದರಿಂದ, ಮೊದಲು ಅವೆರಡನ್ನೂ ಸರಿಯಾಗಿ ಅರಿತು, ಆಚರಿಸುವುದು ಅಗತ್ಯ. ಪ್ರಾಣಾಯಾಮದಲ್ಲಿ ಉಚ್ಚರಿಸುವ ಮಂತ್ರ ಹೀಗಿರುತ್ತದೆ :

ಓಂ ಭೂಃ, ಓಂ ಭುವಃ, ಓಂ ಸುವಃ, ಓಂ ಮಹಃ, ಓಂ ಜನಃ, ಓಂ ತಪಃ,
ಓಂ ಸತ್ಯಂ । ಓಂ ತತ್ ಸವಿತು ರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ।
ಧಿಯೋಯೋನಃ ಪ್ರಚೋದಯಾತ್ ।
ಓಂ ಆಪೋಜ್ಯೋತಿರಸೋ ಅಮೃತಂ ಬ್ರಹ್ಮ ಭೂರ್ಭುವಸ್ಸುವರೋಂ ।

(ಸಮಸ್ತ ವಸ್ತುಗಳ ಒಳಗೂ ಹೊರಗೂ ಇರುವ ಪರಿಪೂರ್ಣನಾದ ಪರಮಾತ್ಮನು ಪ್ರಾಣಸ್ವರೂಪನೂ, ದುಃಖಭಂಜಕನೂ, ಸುಖದಾಯಕನೂ, ವಿರಾಡ್ರೂಪನೂ, ಜಗತ್ಪಿತನೂ, ಸಹನಶೀಲನೂ, ಸತ್ಯಸ್ವರೂಪನೂ, ಓಂಕಾರ ರೂಪನೂ, ಸರ್ವೋತ್ಪಾದಕನೂ, ಶ್ರೇಷ್ಠ ರೂಪದವನೂ, ಅಜ್ಞಾನವೆಂಬ ಕತ್ತಲೆಗೆ ಜ್ಯೋತಿಸ್ವರೂಪನೂ, ದೇವನೂ ಆದ ಆತನನ್ನು ಧ್ಯಾನಿಸೋಣ. ಆ ಪರಮಾತ್ಮನು ನಮ್ಮೆಲ್ಲರ ಬುದ್ಧಿಗಳನ್ನು ಚೆನ್ನಾಗಿ ಪ್ರೇರೇಪಿಸಲಿ. ಪ್ರಣವ ಸ್ವರೂಪನೂ, ಜಲಸ್ವರೂಪನೂ, ಸುಖಸ್ವರೂಪನೂ, ಅಮೃತ ಸ್ವರೂಪನೂ, ಪ್ರಾಣಸ್ವರೂಪನೂ, ದುಃಖನಾಶಕನೂ, ಸ್ವಯಂಪ್ರಕಾಶನೂ, ಆನಂದ ಸ್ವರೂಪನೂ ಆದ ಶ್ರೀಮನ್ನಾರಾಯಣನನ್ನು ಹೊಂದುವಂತಾಗಲಿ).

ಈ ಮಂತ್ರದಲ್ಲಿ ಓಂನಿಂದ ಕೂಡಿದ ವ್ಯಾಹೃತಿ, ಗಾಯತ್ರಿ, ಗಾಯತ್ರಿ ಶಿರಸ್ಸು ಎಂಬುದಾಗಿ ಮೂರು ಭಾಗಗಳಿವೆ.

1) ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಂ ಇವು ಏಳು ವ್ಯಾಹೃತಿಗಳು. ಇವುಗಳಿಗೆ ಅನುಕ್ರಮವಾಗಿ ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಗೌತಮ, ಅತ್ರಿ, ವಸಿಷ್ಠ, ಕಶ್ಯಪ–ಎಂಬೀ ಸಪ್ತ ಋಷಿಗಳು ಪ್ರತೀಕ ಎಂದು ಕರೆಯಲಾಗಿದೆ. ಈ ಪವಿತ್ರ ಉಕ್ತಿಗಳು ಪುರಾಣದಲ್ಲಿ ಸಪ್ತಲೋಕಗಳ ಹೆಸರುಗಳನ್ನು ಸೂಚಿಸುತ್ತವೆ.

ಭೂಃ ಅಥವಾ ಭೂಲೋಕದಲ್ಲಿ ಮಾನವ ಮತ್ತಿತರ ಕೆಳದರ್ಜೆಯ ಪ್ರಾಣಿಗಳು ಪುನರ್ಜನ್ಮವನ್ನು ಪಡೆಯುತ್ತಿರುತ್ತವೆ, ತಮ್ಮ ಹಿಂದಿನ ಕರ್ಮಫಲವನ್ನು ಅನು ಭವಿಸುತ್ತಿರುತ್ತವೆ. ಮತ್ತು ಇಂದಿನ ಕರ್ಮಗಳಿಂದ ಭವಿಷ್ಯವನ್ನು ಅಂದರೆ ಮೇಲಿನ ಅಥವಾ ಕೆಳಗಿನ ದರ್ಜೆಗೆ, ರೂಪಿಸಿಕೊಳ್ಳುತ್ತಿರುತ್ತವೆ. ನೀತಿ ಜೀವನ ನಡೆಸಿ, ಯಜ್ಞಮಾಡಿ, ದಾನಧರ್ಮಮಾಡಿ, ಜನರನ್ನು ಪ್ರೀತಿಸಿದವರು, ಮರಣದ ನಂತರ ಭುವಃ ಅಥವಾ ಚಂದ್ರನ ಲೋಕಕ್ಕೆ ಹೋಗುತ್ತಾರೆ. ಇವರು ಪಿತೃಗಳಾದುದರಿಂದ ಇದಕ್ಕೆ ಪಿತೃಲೋಕವೆಂದೂ ಹೆಸರು. ಇಲ್ಲಿ ಪಿತೃಗಳು ಅಲ್ಪಕಾಲ ಅಥವಾ ದೀರ್ಘ ಕಾಲ ದೇವತೆಗಳಿಗೆ ಸಹಾಯಕರಾಗಿ ಇರುತ್ತಾರೆ. ಈ ಪಿತೃಗಳೆಲ್ಲರೂ ಒಂದೇ ಮಟ್ಟದಲ್ಲಿ ಇರುವುದಿಲ್ಲ. ಕೆಲವರು ಭೂಲೋಕದೊಂದಿಗೆ, ತಮ್ಮ ವಂಶೀಯ ರೊಂದಿಗೆ ಸಂಪರ್ಕ ಹೊಂದಿರುತ್ತಾರೆ. ಹಿಂದಿನ ಆಸೆ–ಆಕಾಂಕ್ಷೆ–ಸಂಸ್ಕಾರಗಳಿರುವ ಇವರು, ಭೂಮಿಯಲ್ಲಿ ತಮಗಾಗಿ ತಯಾರಿಸುವ ಪಿಂಡ, ತರ್ಪಣಗಳಿಗಾಗಿ ಕಾದು ನಿಂತಿರುತ್ತಾರೆ. ತಮ್ಮವರ ಒಳಿತನ್ನು ತಿಳಿದುಕೊಳ್ಳಲು, ಅವರನ್ನು ರಕ್ಷಿಸಲು, ಅವರಿಗೆ ದೀರ್ಘಾಯುಸ್ಸು–ಸಂಪತ್ತು ನೀಡಲು, ಆಶಿಸುತ್ತಾರೆ. ಪಿತೃಗಳು ಈ ಲೋಕಕ್ಕೆ ಹೋಗುವುದಕ್ಕೆ ಪಿತೃಯಾನ ಅಥವಾ ದೇವಯಾನ ಎಂದು ಹೆಸರು. ಇದಕ್ಕೆ ಬ್ರಾಹ್ಮಣ-ಉಪನಿಷತ್ತುಗಳಲ್ಲಿ ಧೂಮಾದಿ ಅರ್ಚಿರಾದಿ ಮಾರ್ಗ ಎನ್ನುತ್ತಾರೆ. ಪಿತೃಯಾನದ ಮೂಲಕ ಪಿತೃಲೋಕಕ್ಕೆ ಹೋದವರು ಅಲ್ಲಿ ಭೂಮಿಯ ಅನುಭವ ಸಂಬಂಧ ಮುಗಿಯುವವರೆಗೂ ಇರುತ್ತಾರೆ. ಅಲ್ಲಿರುವಾಗ ಅವರಿಗೆ ಮೇಲಿನ ಲೋಕಕ್ಕೆ ಹೋಗಲು ಸಾಧ್ಯವಾಗದಿದ್ದರೆ, ಅವರು ಮತ್ತೆ ಭೂಲೋಕಕ್ಕೆ ಹಿಂದಿರುಗಿ, ಹಿಂದಿನ ವಾಸನೆಗಳಿಗನುಸಾರವಾಗಿ ಮೇಲಿನ ಅಥವಾ ಕೆಳಗಿನ ದರ್ಜೆಯ ಜೀವಿಯಾಗಿ ಜನ್ಮ ತಾಳುತ್ತಾರೆ.

ಭೂಲೋಕದಲ್ಲಿ ಅವರು ತಮ್ಮ ಆಚಾರ, ಉಚ್ಚಾರ, ವಿಚಾರಗಳ ಮೂಲಕ ಆತ್ಮಸಂಸ್ಕಾರದಲ್ಲಿ ಹೆಚ್ಚು ವಿಕಾಸವನ್ನು ಹೊಂದಬೇಕು. ನಾಕಷ್ಟು ವಿಕಾಸ ಪಡೆ ದವರು ಸತ್ತಮೇಲೆ, ಮತ್ತೆ ಹಿಂದಿರುಗಬೇಕಾದ ಪಿತೃಯಾನದಲ್ಲಿ ಹೋಗದೆ, ದೇವ

ಯಾನ ಮಾರ್ಗದಲ್ಲಿ ಹೊರಟು ಸೂರ್ಯಗ್ರಹದಾಚೆ ಇರುವ ಸುವಃಲೋಕಕ್ಕೆ ಹೋಗಿ ಅಲ್ಲಿಂದ ಕ್ರಮವಾಗಿ, ಮಹಃಲೋಕ, ಜನಃಲೋಕ, ತಪಃಲೋಕಗಳ ಮೂಲಕ ಆನಂದದ ಸತ್ಯಲೋಕವನ್ನು ತಲುಪುತ್ತಾರೆ. ತುಂಬಾ ವಿಕಾಸ ಹೊಂದಿದ ಕೆಲವು ಜೀವಿಗಳು ಪಿತೃಲೋಕದಿಂದ ಭೂಮಿಗೆ ಹಿಂದಿರುಗಿದಾಗ, ತಮ್ಮ ಜ್ಞಾನ ಮತ್ತು ಯೋಗಶಕ್ತಿಗಳಿಂದ ಅಪರೋಕ್ಷಾನುಭೂತಿ ಅಥವಾ ಆತ್ಮಸಾಕ್ಷಾತ್ಕಾರವನ್ನು ಪಡೆಯುವುದರಿಂದ, ಅಂಥವರು ಸಂಸಾರ ಬಂಧನಕ್ಕೆ ಒಳಗಾಗದೆ ಶುದ್ಧ, ಮುಕ್ತ ಜೀವಿ ಆಗಿರುತ್ತಾರೆ.

ಪಿತೃಯಾನ, ದೇವಯಾನ ಎರಡೂ ಮಾರ್ಗ ದೊರೆಯದವರು, ಅದು ದೊರಕುವವರೆಗೆ ನೋವು–ಸಾವುಗಳಿಂದ ಕೂಡಿದ ಪುನರ್ಜನ್ಮಕ್ಕೆ ಸಿಲುಕುತ್ತಾರೆ. "ನಾವು ಈ ಭೂಮಿಯಲ್ಲಿರುವುದು ನಿರಂತರಯಾತ್ರೆಯ ಒಂದು ಮೆಟ್ಟಲು. ಇಲ್ಲಿ ನಾವು ಆಲೋಚಿಸುವ ವಿಚಾರ, ಆಡುವ ಮಾತು ಮತ್ತು ಮಾಡುವ ಕರ್ಮಗಳು, ಖಂಡಿತವಾಗಿಯೂ ನಮ್ಮ ವ್ಯಕ್ತಿತ್ವದ ಇಂದ್ರಿಯಗಳ ಅಭಿವ್ಯಕ್ತಿಯ ಮೇಲೆ ಪ್ರಭಾವ ಬೀರುತ್ತವೆ. ಈ ಪ್ರಪಂಚವಿರುವುದೇ ಜೀವಿಗಳ ವಿಕಾಸದ ಸಲುವಾಗಿ. ಸಾವು ಎಂಬುದು ಒಂದು ಸರಳವಾದ ಬದಲಾವಣೆ ಮಾತ್ರ. ಇಲ್ಲಿ ನಮಗೆ ದೊರಕುವ ಅವಕಾಶ-ಅನುಕೂಲಗಳನ್ನು ಹೇಗೆ ಉಪಯೋಗಿಸಿಕೊಳ್ಳುತ್ತೇವೆ ಎಂಬುದರ ಮೇಲೆಯೇ ನಮ್ಮ ಸುಖ-ಅಭಿವೃದ್ಧಿಗಳು ನಿಂತಿವೆ. ಇದು ನಮ್ಮ ಉಪನಿಷತ್ತು, ವೇದಾಂತ ಸೂತ್ರ, ಭಾಷ್ಯ, ಗೀತೆಗಳಲ್ಲಿ ಇರುವ ಸಂಸಾರತತ್ತ್ವದ ಸಾರ.

ಪ್ರತಿಯೊಂದು ವ್ಯಾಹೃತಿಯೂ ಪ್ರಣವ, ಓಂಕಾರಗಳ ಓಂ ಎಂಬುದನ್ನು ಹಿಂದೆ ಹೊಂದಿದ್ದು, ಈ ಸಪ್ತಲೋಕಗಳೂ ಪರಬ್ರಹ್ಮನ ಇರುವಿಕೆಯನ್ನು ಸಾರುತ್ತವೆ. ಓಂ ಎನ್ನುವುದು ವೇದವೇದಾಂತದ ಬೋಧನೆಯ ಸಾರವನ್ನು ಒಳಗೊಂಡಿದೆ. ಋಕ್, ಯಜುರ್, ಸಾಮ ಈ ಮೂರೂ ವೇದಗಳ ಸಾರವಾದ ಅಕಾರ, ಉಕಾರ, ಮಕಾರಗಳು ಪರಮಾತ್ಮನ ಅತ್ಯುತ್ತಮ ನಾಮವಾದ ಈ ಓಂನಲ್ಲಿವೆ. ಇದರ ಧ್ಯಾನವು ಶ್ರೇಷ್ಠ ಶಕ್ತಿಯನ್ನು ಕೊಡಬಲ್ಲುದು. ಎಲ್ಲ ಪವಿತ್ರ ಸಾಹಿತ್ಯವು ಇದರಿಂದಲೇ ಆರಂಭವಾಗಿ ಇದರೊಂದಿಗೇ ಅಂತ್ಯಗೊಳ್ಳುತ್ತದೆ. ಭಾಷ್ಯಕಾರರು ಹೇಳುವಂತೆ ಅಕಾರವು ನಾರಾಯಣನನ್ನೂ, ಉಕಾರವು ನಾರಾಯಣನ ಶಕ್ತಿಯಾದ ಲಕ್ಷ್ಮಿಯನ್ನೂ, ಮಕಾರವು 25ನೆ ತತ್ತ್ವವಾದ ಜೀವನನ್ನೂ ತಿಳಿಸುತ್ತದೆ. ಜೀವಾತ್ಮನು ಲಕ್ಷ್ಮೀನಾರಾಯಣರಿಗೆ ಸಂಬಂಧಿಸಿದವನು. ಜೀವಾತ್ಮ-ಪರಮಾತ್ಮರಲ್ಲಿ ಶೇಷ-ಶೇಷಿ ಸಂಬಂಧವಿದೆ. ಜೀವಿಯು ಪರಮಾತ್ಮನಲ್ಲಿ ಜೀವನ, ವ್ಯವಹಾರ ಹೊಂದಿದ್ದಾನೆ ಎಂಬುದನ್ನೇ ಓಂಕಾರವು ಸೂಚಿಸುತ್ತದೆ. ಯಮ, ನಿಯಮ, ಪ್ರಾಣಾಯಾಮ ಗಳಿಂದ ದೇಹವನ್ನು ಶುದ್ಧಿಗೊಳಿಸಿದನಂತರ ಓಂಕಾರವನ್ನು ಸರಿಯಾಗಿ ಉಚ್ಚರಿಸಿ ಜಪಿಸಿದರೆ ದೇಹದಲ್ಲಿ ನವಚೈತನ್ಯ ಮೂಡುವುದು ನಿಜ.

ವ್ಯಾಹೃತಿಯ ಹಿಂದೆ ಇರುವಂತೆ ಗಾಯತ್ರಿಯ ಹಿಂದೆಯೂ ಓಂ ಇದೆ. ಸಾವಿತ್ರಿ, ವಿಶ್ವಾಮಿತ್ರರು ಈ ಮಂತ್ರದ ಋಷಿಗಳು. ಇದೂ ವೈದಿಕ ಬೋಧನೆಯ ಸಾರವನ್ನೊಳಗೊಂಡಿದೆ. ಸೂರ್ಯನಿಗೆ ಸಾವಿತ್ರಿ ಎಂಬ ಹೆಸರಿದ್ದಿತು. ಸಾವಿತ್ರಿಯು ಜೀವಿಗಳ ದೈಹಿಕ, ಮಾನಸಿಕ, ಆಧ್ಯಾತ್ಮಿಕ ಶಕ್ತಿಯನ್ನು ಪ್ರಚೋದಿಸಿ, ಸ್ಫೂರ್ತಿ ಚೈತನ್ಯಗಳನ್ನು ನೀಡಿ ಉದ್ಧರಿಸಿ, ಆ ಮೂಲಕ ಪರಮಾತ್ಮನ ಸಾಕ್ಷಾತ್ಕಾರಕ್ಕೆ ನೆರವಾಗುತ್ತಾನೆ. ಜ್ಞಾನದ ಬೆಳಕಿನಿಂದ ಶುದ್ಧಿ ಹೊಂದಿದ ಜೀವಿಯು, ಧ್ಯಾನದಿಂದ ಸೂರ್ಯನಲ್ಲಿರುವ ನಾರಾಯಣನನ್ನು ನೋಡಬಲ್ಲವನಾಗುತ್ತಾನೆ. ಸರ್ವಾಂತರ್ಯಾಮಿ, ಅನಂತಕಲ್ಯಾಣಗುಣಾರ್ಣವನಾದ ಇವನ ಸಹಾಯದಿಂದಲೇ ಸ್ವಾನುಭೂತಿ, ಅಪರೋಕ್ಷಜ್ಞಾನ ದೊರೆಯುತ್ತವೆ ಹಾಗೂ ಸಚ್ಚಿದಾನಂದ ಜ್ಯೋತಿ ಕಾಣುತ್ತದೆ.

ಆಪಃ, ಜ್ಯೋತಿ, ರಸ, ಅಮೃತಂ, ಬ್ರಹ್ಮ ಇವು ಗಾಯತ್ರಿಯ ಶಿರಸ್ಸು. ಪರಮಾತ್ಮನ ಪ್ರತಿಬಿಂಬ ಅಥವಾ ಕಿಡಿಗಳಾದ ಜೀವಿಗಳು ಮಾಯೆಯಿಂದ ಆವೃತವಾಗಿವೆ ಎಂಬುದೇ ಇದರ ಅರ್ಥ. ಗಾಯತ್ರಿ ಮಂತ್ರವನ್ನು ಮೂರುಸಲ ಜಪಿಸಿದರೆ ಒಂದು ಪ್ರಾಣಾಯಾಮ ಆಗುತ್ತದೆ.

**7. ಸಂಕಲ್ಪ :** ಧಾರ್ಮಿಕ ಚಟುವಟಿಕೆ ಅಥವಾ ಕರ್ಮವನ್ನು ಆರಂಭಿಸುವಾಗ ಅದನ್ನು ಮಾಡಿ ಮುಗಿಸುವೆನೆಂದು ನಮ್ರತೆಯ ದೃಢ ನಿಶ್ಚಯ ಮಾಡಬೇಕು. ಎಡ ಅಂಗೈ ಮೇಲೆ ಬಲ ಅಂಗೈ ಇಟ್ಟು ನೇರಿಸಿದ ಎರಡೂ ಕೈಗಳನ್ನು ಬಲ ತೊಡೆಯ ಮೇಲಿಟ್ಟು,

ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀಭಗವದಾಜ್ಞಯಾ, ಶ್ರೀ ಭಗವತ್ಕೈಂಕರ್ಯ ರೂಪಂ, ಶ್ರೀಮನ್ನಾರಾಯಣ ಪ್ರೀತ್ಯರ್ಥಂ ಪ್ರಾತಃ । ಮಾಧ್ಯಾಹ್ನಿಕ । ಸಾಯಂ ಸಂಧ್ಯಾ ಮುಪಾಸಿಷ್ಯೇ ಎಂದು, ಸಂಕಲ್ಪ ಮಾಡಬೇಕು. ಪಾಪನಾಶನದಿಂದ ಅವನ ಆಜ್ಞೆಯಂತೆ, ಅವನ ಕೈಂಕರ್ಯವೆಂದು, ಲಕ್ಷ್ಮೀ ನಾರಾಯಣನಿಗಾಗಿ ಸೇವೆ-ಪೂಜೆಗಳನ್ನು ಕೈಗೊಳ್ಳುತ್ತೇನೆ ಎಂಬುದೇ ಇದರ ಅರ್ಥ.

ಇದರ ಮೂಲಕ ಮಾನವನು ತನ್ನಲ್ಲಿರುವ ಅಹಂಭಾವವನ್ನು ತ್ಯಜಿಸಿ ತಾನು ಪರಮಾತ್ಮನ ಸೇವಕ ಎಂಬ ದಾಸ್ಯ ಅಥವಾ ಸೇವ್ಯಭಾವವನ್ನು ಸೂಚಿಸುತ್ತಾನೆ. ಪರಮಾತ್ಮನನ್ನು ಪ್ರಾಮಾಣಿಕವಾಗಿ ಪ್ರಾರ್ಥಿಸುವುದರಿಂದ ಅವನ ಕ್ಷಮೆ, ಕೃಪೆ, ಮಾರ್ಗದರ್ಶನ ಸಿಗುವುದು ನಿಜವಾದುದರಿಂದ ಸಂಕಲ್ಪವು ಅವಶ್ಯಕವಾದ ಕ್ರಿಯೆ.

**8. ಮಾರ್ಜನ** (ಪ್ರೋಕ್ಷಣೆ) : ಮಂತ್ರಪೂರಿತವಾದ ನೀರನ್ನು ತನ್ನ ದೇಹದಮೇಲೆ ಚುಮುಕಿಸುತ್ತ, ಕೊನೆಯಲ್ಲಿ ಕಾಲುಗಳ ಮೇಲೆ ಚುಮುಕಿಸಿ, ತಲೆಯ ಸುತ್ತ ನೀರನ್ನು ಚಲ್ಲಬೇಕು.

ಓಂ ಆಪೋಹಿಷ್ಠಾ ಮಯೋಭುವಃ, ತಾನ ಊರ್ಜೇದಧಾತನ, ಮಹೇರ ಣಾಯ ಚಕ್ಷಸೇ, ಯೋವಶ್ಶಿವತಮೋರಸಃ, ತಸ್ಯಭಾಜಯತೇಹನಃ, ಉಷತೀರಿವ ಮಾತರಃ, ತಸ್ಮಾದರಂಗಮಾಮವ-ಎಂದು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಳ್ಳಬೇಕು. ಯಸ್ಯಕ್ಷಯಾಯ ಜಿನ್ವಥ ಎಂದು ಕಾಲುಗಳಲ್ಲಿ ಪ್ರೋಕ್ಷಿಸಿ, ಆಪೋಜನಯಥಾಚನಃ ಎಂದು ಮತ್ತೆ ಶಿರಸ್ಸಿನಲ್ಲಿ ಪ್ರೋಕ್ಷಿಸಿ, ಓಂ ಭೂರ್ಭುವಸ್ಸುವಃ ಎಂದು ತನ್ನನ್ನು ಬಳಸಿ ಪರಿಷೇಚನಮಾಡಬೇಕು.

(ಎಲೈ ಜಲದೇವತೆಗಳೇ, ನೀವು ಯಾವ ಕಾರಣದಿಂದ ಸರ್ವ ಪ್ರಾಣಿಗಳಿಗೂ ಸುಖಸಾಧನಗಳಾಗಿ ಆಗಿದ್ದೀರೋ, ಆ ಕಾರಣದಿಂದ ನೀವು ಪೂಜಿಸಲು ಯೋಗ್ಯ ವಾದ, ಮನೋಹರವಾದ ಬ್ರಹ್ಮಸಾಕ್ಷಾತ್ಕಾರಕ್ಕೆ, ನಮ್ಮ ಅಂಗಗಳನ್ನು ಯೋಗ್ಯ ವನ್ನಾಗಿ ಮಾಡಿರಿ. ಎಲೈ ದೇವತಾಸ್ವರೂಪಿಗಳಿರಾ, ಯಾವ ನಿಮ್ಮ ಆನಂದ ಸ್ವರೂಪವು ಮಂಗಳಕರವಾಗಿದೆಯೋ ಅದನ್ನು, ಪ್ರೇಮಯುಕ್ತಳಾದ ತಾಯಿಯು ತನ್ನ ಮಕ್ಕಳ ಬಗೆಗೆ ಇರುವಂತೆ ಈ ಜನ್ಮದಲ್ಲಿ ನಮಗೆ ಆನಂದವನ್ನುಂಟುಮಾಡಿರಿ. ಎಲೈ ಪರಮಾತ್ಮಸ್ವರೂಪಿಗಳೇ, ಯಾವ ಪಾಪದ ನಾಶನಕ್ಕಾಗಿ ನಮ್ಮನ್ನು ಪ್ರೀತಿಸು ತ್ತೀರೋ, ಆ ಪಾಪ ನಿವಾರಣೆಗಾಗಿ ನಿಮ್ಮನ್ನು ಜಾಗ್ರತೆಯಾಗಿ ಹೊಂದುತ್ತೇವೆ. ಆದುದರಿಂದ ಆನಂದಸ್ವರೂಪವಾಗುವಂತೆ ನಮ್ಮನ್ನು ಅನುಗ್ರಹಿಸಿರಿ. ನೀವು ನಮಗೆ ಅನ್ನಾದಿ ಐಹಿಕ ಐಶ್ವರ್ಯಾದಿಗಳನ್ನೂ, ಬ್ರಹ್ಮಾನುಭವದ ಜ್ಞಾನವನ್ನೂ ಕೊಡಿರಿ.)

ಮಾರ್ಜನ ಎಂದರೆ ಶುಚಿಗೊಳಿಸುವುದು. ಮಂತ್ರದ ಮೂಲಕ ಬರುವ ಜಲದ ಅಧಿಷ್ಠಾತೃ ದೇವತೆಯು ಸಂಧ್ಯೋಪಾಸಕನಿಗೆ ಅವನು ಮಾಡುವ ಉಪಾಸನೆಗೆ ನೆರವು ನೀಡಲಿ, ಎಲ್ಲ ವಿಘ್ನಗಳನ್ನೂ ನಿವಾರಿಸಲಿ ಎಂಬ ದೃಷ್ಟಿಯಿಂದ ಇದನ್ನು ಮಾಡಲಾಗುತ್ತದೆ. ಇದರಿಂದ ದುಷ್ಟ ಪ್ರಭಾವಗಳು ದೂರಾಗುತ್ತವೆ.

ಮಂತ್ರಪೂರಿತವಾದ ನೀರು ಮಾನವನ ದೇಹವನ್ನು ಶುಚಿಮಾಡಿ, ಹೃದಯ ವನ್ನು ಬೆಳೆಸಿ, ಆತ್ಮ ಸಂಪತ್ತನ್ನು ತರುತ್ತದೆ; ನೈತಿಕವಾದ ತಪ್ಪುಗಳನ್ನು ನಾಶ ಮಾಡಿ, ಆಧ್ಯಾತ್ಮಿಕವಾದ ಬೆಳಕನ್ನು ನೀಡಿ, ದೇವತಾದರ್ಶನ ಮಾಡಿಸಿ, ಅಮರ ವಾದ ಬೆಳಕು-ಭವ್ಯತೆಗಳಿರುವೆಡೆಗೆ ಕೊಂಡೊಯ್ಯುತ್ತದೆ. ಈ ಕಾರಣದಿಂದಲೇ ನೀರಿಗೆ ಹೆಚ್ಚು ಪ್ರಾಮುಖ್ಯತೆ ಇರುವುದು. ಪ್ರಕೃತಿಯೊಡನೆ ಹೊಂದಿಕೊಳ್ಳಲು, ಸಮಸ್ತ ಜೀವಿಗಳಲ್ಲೂ ಪರಮಾತ್ಮನನ್ನು ದರ್ಶಿಸಿ ಜೀವನವನ್ನು ಸಾರ್ಥಕಪಡಿಸಿ ಕೊಳ್ಳಲು, ಇದು ನೆರವಾಗುತ್ತದೆ.

**9. ಮಂತ್ರಾಚಮನ (ಜಲಪ್ರಾಶನ) :** ಸ್ವಲ್ಪ ನೀರನ್ನು ಬಲಅಂಗೈ ಯಲ್ಲಿ ತೆಗೆದುಕೊಂಡು ಮಂತ್ರವನ್ನು ಹೇಳಿ ಆಪೋಶನ ತೆಗೆದುಕೊಳ್ಳಬೇಕು. ಈ

ಮಂತ್ರವು ಮೂರು ಸಂಧ್ಯೆಗಳಲ್ಲಿಯೂ ಬೇರೆಬೇರೆಯಾಗಿರುತ್ತದೆ. ಆಲೋಚನೆ, ಮಾತು, ಕೃತಿಗಳಲ್ಲಿ ಹಾಗೂ ಹಗಲು-ರಾತ್ರಿಗಳಲ್ಲಿ ಮಾಡಿದ ತಪ್ಪನ್ನು ಕ್ಷಮಿಸುವಂತೆ ಬೇಡುವುದು ಇದರ ಉದ್ದೇಶ. ಬೆಳಗ್ಗೆ ಅಗ್ನಿಯೇ ಸೂರ್ಯನಾಗಿ, ರಾತ್ರಿ ಸೂರ್ಯನೇ ಅಗ್ನಿಯಾಗಿ ಇರುತ್ತಾನೆ.

ಆಧ್ಯಾತ್ಮಿಕ ವಿಕಾಸದ ಪ್ರಾರಂಭದ ಘಟ್ಟದಲ್ಲಿ ಸ್ಫೂರ್ತಿನೀಡಲು, ಭಕ್ತಿಯನ್ನು ಉದ್ದೀಪಿಸಲು, ಮಾನವನಿಗೆ ದೈವೀಬೆಳಕಿನ ಒಂದು ಚಿಹ್ನೆಯು ಅವಶ್ಯಕವಾಗುತ್ತದೆ. ಹಗಲು ಸೂರ್ಯ, ರಾತ್ರಿ ಅಗ್ನಿ ಎಂಬೀ ಕಾಣುವ ಬೆಳಕಿನ ನೆರವಿನಿಂದ, ಕಾಣದಿರುವ ಬೆಳಕಿನ ಅರಿವಿಗೆ ನಂಬಿಕೆ, ಶ್ರದ್ಧೆ, ಶರಣು ಭಾವಗಳಿಂದ ಅರ್ಜಿ ಸಲ್ಲಿಸಬೇಕಾಗುತ್ತದೆ. ತಪಸ್ಸಿನಿಂದ ಇಚ್ಛಾಶಕ್ತಿಯು ವಿಕಾಸಗೊಂಡು ಬಲಗೊಳ್ಳುತ್ತದೆ. ಮಿದುಳಿನಲ್ಲಿ ಓಜಸ್ಸು ಹುಟ್ಟುತ್ತದೆ. ಚಪಲಚಿತ್ತವಾದ ಇಂದ್ರಿಯ, ಪ್ರಾಣಶಕ್ತಿಗಳು ಇದರ ಅಧೀನವಾಗುತ್ತವೆ. ಇದರ ಫಲವಾಗಿ ಮಾನವನು ಹೆಚ್ಚು ಬುದ್ಧಿವಂತ, ಆಧ್ಯಾತ್ಮ ಜೀವಿ ಆಗುತ್ತಾನೆ.

ಓಜಸ್ಸಿನಿಂದ ಕೂಡಿದ ಮಾನವನ ಭಾವನೆಗಳು ಹಾಗೂ ಭಾಷೆಯು ಸರಳ, ಸಾಮಾನ್ಯ ಆಗಿದ್ದರೂ, ಅದು ಆಲಿಸುವವರ ಮೇಲೆ ಹೆಚ್ಚು ಪ್ರಭಾವ ಬೀರುತ್ತದೆ. ದೇಹದಲ್ಲೆಲ್ಲಾ ಓಡಾಡುತ್ತಿರುವ ಈ ಓಜಸ್ಸು ಶಕ್ತಿಯು ವ್ಯರ್ಥವಾಗದೆ ಮಿದುಳಿಗೆ ಹೋಗಿ ಶೇಖರವಾಗುವಂತೆ ಪ್ರಯತ್ನಿಸಬೇಕು. ಮಂತ್ರಾಚಮನವು ದೇಹವನ್ನು ಪಾಪಕಾರ್ಯಗಳಿಂದ ದೂರವಿಟ್ಟು ಶುದ್ಧೀಕರಣಮಾಡಲು ಹಾಗೂ ಶಕ್ತಿಯನ್ನು ಹೆಚ್ಚಿಸಲು ಸಹಾಯ ಮಾಡುತ್ತದೆ. ಶ್ರದ್ಧಾಭಕ್ತಿಗಳಿಂದ ವೇದಾಧ್ಯಯನ ನಡೆಸಿದ ಪವಿತ್ರ ಋಷಿಗಳ ಪವಿತ್ರ ನಾಡಿನಲ್ಲಿ ವಾಸಿಸುತ್ತ, ಪವಿತ್ರ ಜನರ ಸಂಗದಲ್ಲಿ ಇರುವ ಮಾನವನ ಹೃದಯ ಬುದ್ಧಿಗಳೆರಡೂ ಪವಿತ್ರವಾಗಿದ್ದು, ಅವನು ಮಾಡುವ ಕೆಲಸಗಳೂ ಪವಿತ್ರವಾಗಿರುತ್ತವೆ. ಈ ಸಂದರ್ಭದಲ್ಲಿ ಹೇಳುವ ಮಂತ್ರಗಳು :—

**1. ಪ್ರಾತಃಸಂಧ್ಯೆಯಲ್ಲಿ : ಸೂರ್ಯ**[1]ಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ, ಪಾಪೇಭ್ಯೋ ರಕ್ಷಂತಾಂ । **ಯದ್ರಾತ್ರ್ಯಾ**[2], ಪಾಪಮಕಾರ್ಷಂ, ಮನಸಾವಾಚಾ ಹಸ್ತಾಭ್ಯಾಂ, ಪದ್ಭ್ಯಾಮುದರೇಣಶಿಶ್ನಾ, **ರಾತ್ರಿ**[3]ಸ್ತದವಲುಂಪತು, ಯತ್ಕಿಂಚ ದುರಿತಂಮಯಿ, ಇದಮಹಂ ಮಾಮೃತಯೋನೌ, **ಸೂರ್ಯೇ**[4] ಜ್ಯೋತಿಷಿ ಜುಹೋಮಿಸ್ವಾಹಾ ॥

**2. ಸಾಯಂ ಸಂಧ್ಯೆಯಲ್ಲಿ :** 1 ಇರುವಲ್ಲಿ ಸೂರ್ಯನಿಗೆ ಬದಲು ಅಗ್ನಿ, 2ರಲ್ಲಿ ಯದ್ರಾತ್ರ್ಯಾಗೆ ಬದಲು ಯದಹ್ನಾ, 3ರಲ್ಲಿ ರಾತ್ರಿಗೆ ಬದಲು ಅಹ, 4ರಲ್ಲಿ ಸೂರ್ಯೇಗೆ ಬದಲು ಸತ್ಯೇ ಎಂದು, ಬದಲಾಯಿಸಿ ಹೇಳಬೇಕು.

[ಕ್ರೋಧಾಭಿಮಾನಿ, ಕೋಪಕ್ಕೆ ಅಭಿಮಾನಿ ದೇವತೆಯಾದ ಸೂರ್ಯನು (ಅಗ್ನಿ) ನನ್ನನ್ನು ಕೋಪದ ಆವೇಶದಲ್ಲಿ ಮಾಡುವ ಪಾಪಕಾರ್ಯಗಳಿಂದ ಕಾಪಾಡಲಿ ; ಕಳೆದ ರಾತ್ರಿ (ಹಗಲು) ಮನಸ್ಸು, ಮಾತು, ಕೈಕಾಲು, ಹೊಟ್ಟೆ, ಜನನೇಂದ್ರಿಯ ಗಳ ಮುಖಾಂತರ ಯಾವ ಪಾಪಕಾರ್ಯವನ್ನು ಮಾಡಿರುತ್ತೇನೆಯೋ ಅದನ್ನು ನಿತ್ಯಾ ನಂದವನ್ನುಂಟುಮಾಡುವ ರಾತ್ರಿ (ಹಗಲು) ರೂಪದ ಪರಮಾತ್ಮನು ಹೋಗಲಾಡಿ ಸಲಿ ; ನನ್ನಲ್ಲಿ ಗೊತ್ತಿಲ್ಲದೇ ಮಾಡಿದ ಪಾಪವಿದ್ದರೆ, ಅದರ ನಿವಾರಣಾರ್ಥವಾಗಿ ನಾನು ಈ ಜಲವನ್ನು ಮರಣರಾಹಿತ್ಯಕ್ಕೆ ಕಾರಣವಾದ ಸೂರ್ಯ (ಸತ್ಯ) ಸ್ವರೂಪದ ತೇಜಸ್ಸಿನಲ್ಲಿ, ಸಕಲ ಕಾರ್ಯಗಳ ಕರ್ತೃವೆನಿಸಿಕೊಂಡ ನನ್ನನ್ನು ಹೋಮ ಮಾಡು ತ್ತೇನೆ. ಅದು ಚೆನ್ನಾಗಿ ಹುತವಾಗಲಿ].

**3. ಮಾಧ್ಯಾಹ್ನಿಕದಲ್ಲಿ :** ಆಪಃ ಪುನಂತುಪೃಥಿವೀಂ ಪೃಥಿವೀಂ ಪೂತಾ ಪುನಾತುಮಾಂ, ಪುನಂತು ಬ್ರಹ್ಮಣಸ್ಪತಿರ್ಬ್ರಹ್ಮಪೂತಾ ಪುನಾತುಮಾಂ, ಯದುಚ್ಛಿಷ್ಟ ಮಭೋಜ್ಯಂ ಯದ್ವಾದುಶ್ಚರಿತಂ ಮಮ, ಸರ್ವಂಪುನಂತು ಮಾಮಾ ಪೋ ಸತಾಂಚ ಪ್ರತಿಗ್ರಹಗ್‍ಂ ಸ್ವಾಹಾ ||

(ಸ್ವಾಭಾವಿಕವಾಗಿ ಪರಿಶುದ್ಧವಾದ ಮತ್ತು ನನ್ನ ಕೈಯಲ್ಲಿ ಹಿಡಿದಿರುವ ಈ ನೀರು ಭೂಮಿಯನ್ನು ಪಾವನಮಾಡಲಿ. ಹೀಗೆ ಪಾವನವಾದ ಭೂಮಿಯು ನನ್ನನ್ನು ಶುದ್ಧನನ್ನಾಗಿ ಮಾಡಲಿ, ನನ್ನ ಆಚಾರ್ಯನನ್ನು ಪಾವನಗೊಳಿಸಲಿ. ನಾನು ಒಂದು ವೇಳೆ ಎಂಜಲು, ತಿನ್ನಬಾರದ್ದು ತಿಂದಿದ್ದರೆ, ದುಷ್ಟರ ಮೂಲಕ ದಾನ ಪಡೆದಿದ್ದರೆ, ಸಕಲ ಪಾಪಗಳನ್ನೂ ನಿವಾರಿಸಲು ಈ ಮಂತ್ರಪೂರಿತವಾದ ಜಲವು ನನ್ನ ಮುಖಾಗ್ನಿಯನ್ನು ಪಾವನಗೊಳಿಸಲಿ.)

**10. ಪುನರಾಚಮನ :** ಮತ್ತೆ ಆಚಮನವನ್ನು ಮಾಡಬೇಕು.

**11. ಪುನರ್ಮಾರ್ಜನ :** ಈಗ ಈ ಮಂತ್ರವನ್ನು ಹೇಳಿ, ಹಿಂದೆ ಹೇಳಿದಂತೆ ಶಿರಸ್ಸು, ಕಾಲು, ಶಿರಸ್ಸುಗಳಲ್ಲಿ ನೀರನ್ನು ಪ್ರೋಕ್ಷಣ ಮಾಡಿಕೊಳ್ಳ ಬೇಕು. ಶುದ್ಧಿ ಮಾಡಿಕೊಂಡನಂತರ ಅಸತ್ಯ, ಅಜ್ಞಾನ ಮತ್ತು ರೋಗಗಳ ನಿವಾರಣೆಗಾಗಿ ಅಶ್ವಗಳ ರಾಜನಾದ ಅಗ್ನಿಯನ್ನು ಪ್ರಾರ್ಥಿಸಬೇಕು,

ದಧಿಕ್ರಾವ್ಣ್ಣೋ ಅಕಾರಿಷಂ, ಜಿಷ್ಣೋರಶ್ವಸ್ಯ ವಾಜಿನಃ, ಸುರಭಿನೋ ಮುಖಾಕರತ್, ಪ್ರಣ ಆಯೂಗ್‍ಂಷಿತಾರಿಷತ್ ||

(ಜಯಶೀಲನಾದ, ಒಳಗೆ ಹೊರಗೆ ಸರ್ವವ್ಯಾಪಿಯಾದ, ತ್ವರಿತವಾಗಿ ಭಕ್ತ ರನ್ನು ರಕ್ಷಿಸುವವನಾದ, ಜಗತ್ತನ್ನು ಆಕ್ರಮಿಸುವವನಾದ, ಹವಿಸ್ಸನ್ನು ಸ್ವೀಕರಿಸು

ವವನಾದ, ಸೂರ್ಯರೂಪಿಯಾದ, ಅಗ್ನಿಯನ್ನು ಧ್ಯಾನಿಸುತ್ತೇನೆ. ನಮ್ಮ ಮನಸ್ಸು, ಬುದ್ಧಿಗಳು ಪರಿಶುದ್ಧ, ಪಾವನ ಆಗುವ ಹಾಗೆ ಅವನು ಮಾಡಲಿ. ನಮ್ಮ ಆಯುಸ್ಸನ್ನು, ಯಾವ ಉಪದ್ರವಗಳೂ ಇಲ್ಲದೆ, ಭಗವಂತನನ್ನು ಸ್ತುತಿಸುವಂತೆ, ಚೆನ್ನಾಗಿ ವೃದ್ಧಿ ಮಾಡಲಿ.)

ಮುಂದಿನ ಮಂತ್ರ, ಅರ್ಥಗಳು ಮಾರ್ಜನದಲ್ಲಿದ್ದಂತೆಯೇ ಇರುತ್ತವೆ.

**12. ಪ್ರಾಣಾಯಾಮ**

**13. ಸಂಕಲ್ಪ**

**14. ಅರ್ಘ್ಯಪ್ರದಾನ :** ಮನುಷ್ಯ ಪ್ರಪಂಚದ ಜೀವನಕ್ಕೂ ಸೂರ್ಯ ನಾರಾಯಣ ದೇವನಿಗೂ ಮಹತ್ತರವಾದ ನಿಕಟ ಸಂಬಂಧವಿದೆ. ಸೂರ್ಯನಿಗೆ, ಅವನಿಂದಾಗುವ ಸಹಾಯಕ್ಕಾಗಿ, ಕೃತಜ್ಞತೆಯನ್ನು ಅರ್ಪಿಸುವ ಸಂಕೇತಾರ್ಥವಾಗಿ ಜಲದ ಮೂಲಕ ಅರ್ಘ್ಯವನ್ನು ನೀಡಲಾಗುತ್ತದೆ.

ಸೂರ್ಯನು ಉದಯಿಸುವ ವೇಳೆಗೆ ಅಥವಾ ಮುಳುಗುವ ವೇಳೆಗೆ ಹಿಂದಿನ 13 ಕರ್ಮಗಳೂ ಮುಗಿದಿರಬೇಕು. ಈಗ ಒಳ–ಹೊರ ಶುದ್ಧಿಯಾಗಿರುವುದರಿಂದ ಪರಮಾತ್ಮನನ್ನು ವಂದಿಸಲು ಭಕ್ತ ಅಥವಾ ಸಾಧಕನು ಯೋಗ್ಯನಾಗಿರುತ್ತಾನೆ. ಸೂರ್ಯಮಂಡಲದಲ್ಲಿ ಪ್ರಕಾಶಿಸುತ್ತಿರುವ ಪರಬ್ರಹ್ಮನಿಗೆ ಅರ್ಘ್ಯನೀಡಲು ಅರ್ಹತೆ ಬಂದಿದೆ. ಅರ್ಘ್ಯ ನೀಡುವುದು ಎಂದರೆ ಗೌರವಸ್ಥ ಅತಿಥಿಗೆ ನೀಡುವ ಗೌರವಪೂರ್ಣ ಉದಕ. ಈ ರೀತಿಯ ವಂದನೆ, ಪೂಜೆ ನಮ್ಮ ನಾಡಿನಲ್ಲಿ ಅನೂಚಾನವಾಗಿ ಬಂದಿರುವಂಥದು.

ಓಂ ಭೂರ್ಭುವಸ್ಸುವಃ, ತತ್ಸವಿತುರ್ವರೇಣ್ಯಂ, ಭರ್ಗೋ ದೇವಸ್ಯ ಧೀಮಹಿ, ಧಿಯೋಯೋನಃ ಪ್ರಚೋದಯಾತ್, ಎಂಬ ಗಾಯತ್ರಿ ಮಂತ್ರವನ್ನು ಪ್ರತಿಸಲವೂ ಹೇಳುತ್ತ ಎರಡೂ ಕೈಗಳಿಂದ ಜನಿವಾರ–ಹೆಬ್ಬೆರಳುಗಳನ್ನು ಸೇರಿಸಿ, ಸೂರ್ಯನ ಕಡೆಗೆ ಮೂರು ಬಾರಿ ಗಾಳಿಯಲ್ಲಿ ನೀರನ್ನು ಭಕ್ತಿಪೂರ್ವಕವಾಗಿ ಬಿಡಬೇಕು. ಕಾಲಕ್ಕೆ ಸರಿಯಾಗಿ ಅರ್ಘ್ಯ ನೀಡದಿರುವ ದೋಷವನ್ನು ದೂರಮಾಡಿಕೊಳ್ಳಲೋಸುಗ, ಪ್ರಾಯಶ್ಚಿತ್ತ ರೂಪದಲ್ಲಿ ಮತ್ತೆ ಪ್ರಾಣಾಯಾಮ, ಸಂಕಲ್ಪಗಳನ್ನು ಮಾಡಿ ನಾಲ್ಕನೆಯ ಬಾರಿ ಅರ್ಘ್ಯ ನೀಡಬೇಕು. ಗಾಯತ್ರಿ ಮಂತ್ರದಿಂದ ಕೂಡಿದ ನೀರು ರಾಕ್ಷಸರ ಮೇಲೆ ಬಿದ್ದು ಅವರ ಪ್ರಭಾವವನ್ನು ಕುಗ್ಗಿಸುತ್ತದೆ.

ಆಮೇಲೆ ಅಸೌ ಆದಿತ್ಯ ಬ್ರಹ್ಮ ಎಂಬ ಮಂತ್ರವನ್ನು ಉಚ್ಚರಿಸುತ್ತ ತನ್ನ ಸುತ್ತಲೂ ನೀರನ್ನು ಚಲ್ಲುತ್ತ **ಆತ್ಮ ಪ್ರದಕ್ಷಿಣ**ಮಾಡಿ ಸೂರ್ಯನನ್ನು ನೋಡಿ

ಹೃದಯವನ್ನು ಮುಟ್ಟಬೇಕು. (ನನ್ನ ಹೃದಯದಲ್ಲಿ ನೆಲಸಿ ನನಗೆ ಮಾರ್ಗದರ್ಶನ ನೀಡುತ್ತಿರುವ ಅಂತರ್ಯಾಮಿಯನ್ನೇ ನಾನು ಸೂರ್ಯನಲ್ಲಿರುವ ಪರಮಾತ್ಮನೆಂದು ಹೇಳುತ್ತೇನೆ.

**15. ಆಚಮನ**

**16. ಪ್ರಾಣಾಯಾಮ**

**17. ಸಂಕಲ್ಪ**

**18. ತರ್ಪಣ :** ವಿಷ್ಣುವಿನ ದ್ವಾದಶನಾಮಗಳನ್ನು ಹೇಳುತ್ತ ತರ್ಪ ಯಾಮಿ ಎಂದು ಹೇಳಿ ತುದಿ ಬೆರಳುಗಳ ಮೂಲಕ ನೀರನ್ನು ಬಿಟ್ಟು ತರ್ಪಣ ನೀಡಬೇಕು.

ಇಲ್ಲಿಗೆ ಸಂಧ್ಯಾವಂದನೆಯ ಮೊದಲ ಭಾಗ ಮುಗಿಯುತ್ತದೆ.

**19. ಆಚಮನ**

**20. ಗಾಯತ್ರೀ ಜಪ :** ಶುದ್ಧವಾದ ಸ್ಥಳಕ್ಕೆ ಬಂದು ಓಂ ಭೂರ್ಭುವ ಸ್ಸುವಃ ಎಂದು ನೀರಿನಿಂದ ಸ್ಥಳವನ್ನು ಪ್ರೋಕ್ಷಿಸಬೇಕು. ಆಸನ ಮಂತ್ರಸ್ಯ ಪೃಥಿವ್ಯಾ ಮೇರು ಪೃಷ್ಠ ಋಷಿಃ, ಸುತಲಂ ಛಂದಃ, ಶ್ರೀ ಕೂರ್ಮೋ ದೇವತಾ, ಕೂರ್ಮಾಸನೇ ವಿನಿಯೋಗಃ ಎಂದು ಹೇಳಿ ಶುದ್ಧವಾದ ದಾರದ ತುಂಡನ್ನು ಹಾಕಬೇಕು.

ಪೃಥ್ವಿತ್ವಯಾ ಧೃತಾ ಲೋಕಾಃ ದೇವಿತ್ವಂ ವಿಷ್ಣುನಾಧೃತಾ ।
ತ್ವಂ ಚಧಾರಯ ಮಾಂದೇವಿ ಪವಿತ್ರಂ ಕುರುಚಾಸನಂ ॥

(ಭೂದೇವಿಯೇ ನಿನ್ನಿಂದ ಜಗತ್ತಿನ ಎಲ್ಲ ಜನರು ಧರಿಸಲ್ಪಟ್ಟಿದ್ದಾರೆ. ನೀನು ವಿಷ್ಣುವಿನಿಂದ ಧಾರಣವಾಗಿದ್ದೀಯೆ. ನೀನು ನನ್ನನ್ನೂ ಸಹ ಧರಿಸು. ನಾನು ಕೂಡುವ ಈ ಸ್ಥಳವನ್ನು ಪರಿಶುದ್ಧವಾಗಿ ಮಾಡು).

ಹೀಗೆ ಹೇಳಿ ಭೂ ತಾಯಿಯನ್ನು ಪ್ರಾರ್ಥಿಸಿ ಆಸನವನ್ನು ಸ್ವೀಕರಿಸಬೇಕು.

ಸರ್ವಭೂತ ನಿವಾರಣಾಯ ಅಸ್ತ್ರಾಯಫಟ್ ಎಂದು ಹೇಳಿ ಎರಡೂ ಕೈಗಳನ್ನು ಸೇರಿಸಿ ಚಪ್ಪಾಳೆ ತಟ್ಟಬೇಕು. ಅಚ್ಯುತಾಯ ನಮಃ, ಅನಂತಾಯ ನಮಃ, ಗೋವಿಂದಾಯ ನಮಃ ಎಂದು ಹೇಳಿ, ಮೂರು ಬಾರಿ ತಲೆಯ ಸುತ್ತ ಹೆಬ್ಬೆರಳು–ಮಧ್ಯದ ಬೆರಳು ಸೇರಿಸಿ ಚಿಟಿಕಿ ಹೊಡೆಯಬೇಕು. ಇದರಿಂದ ಭೂತ ಪ್ರೇತಾದಿಗಳು ಆ ಸ್ಥಳ ಬಿಟ್ಟು ಹೋಗುತ್ತವೆ.

ಪ್ರಾಣಾಯಾಮ, ಸಂಕಲ್ಪಗಳನ್ನು ಮಾಡಿದ ನಂತರ ಹತ್ತು ಬಾರಿ ಪ್ರಾಣಾಯಾಮ ಮಂತ್ರವನ್ನು ಮಾನಸಿಕವಾಗಿ ಜಪಿಸಬೇಕು.

**ಧ್ಯಾನ :**

ಅರ್ಕಮಂಡಲ ಮಧ್ಯಸ್ಥಂ ಸೂರ್ಯಕೋಟಿ ಸಮಪ್ರಭಂ ।
ಬ್ರಹ್ಮಾದಿ ಸೇವ್ಯಪಾದಾಬ್ಜಂ ನೌಮಿ ಬ್ರಹ್ಮರಮಾಸಖಂ ॥

(ಸೂರ್ಯಮಂಡಲದ ಮಧ್ಯದಲ್ಲಿರುವ, ಕೋಟಿ ಸೂರ್ಯರ ಪ್ರಕಾಶಕ್ಕೆ ಸಮನಾದಂತಹ, ಬ್ರಹ್ಮಾದಿಗಳಿಂದ ಸೇವಿಸಲ್ಪಡುವ, ಪಾದಪದ್ಮವುಳ್ಳವನಾದ, ಮಹಾಲಕ್ಷ್ಮಿಯ ಸಖನಾದ, ಬ್ರಹ್ಮಸ್ವರೂಪನಾದ ವಿಷ್ಣುವನ್ನು ವಂದಿಸುತ್ತೇನೆ)

ಹೀಗೆ ಹೇಳಿ ಸೂರ್ಯನನ್ನು ಧ್ಯಾನಿಸಬೇಕು.

**ಗಾಯತ್ರಿ ಆವಾಹನ :** ಪ್ರಾಣಾಯಾಮ, ಸಂಕಲ್ಪಮಾಡಿ ಗಾಯತ್ರಿಯನ್ನು ಆವಾಹಿಸಬೇಕು. ಹಿಂದೂ ಸಂಸ್ಕೃತಿಯ ಪಂಚ ಆಧಾರ ಸ್ತಂಭಗಳಾದ ಗೀತೆ, ಗೋವು, ಗೋವಿಂದ, ಗಾಯತ್ರಿ, ಗಂಗೆ ಎಂಬ ಐದು ಗಕಾರ ವಸ್ತುಗಳಲ್ಲಿ ಒಂದಾದ ಗಾಯತ್ರಿಯು ನಾಲ್ಕು ವೇದಗಳಲ್ಲಿಯೂ ಸ್ಥಾನ ಪಡೆದಿದೆ. ಗಾಯತ್ರಿಯ ಉಪಾಸನೆ ಎಂದರೆ ಸರ್ವಶಕ್ತ, ಸರ್ವೋತ್ಕೃಷ್ಟ, ಸನಾತನ, ಏಕ–ಆಗಿರುವ ಬ್ರಹ್ಮನ ಉಪಾಸನೆಯೇ. ಗಾಯಂತಂ ತ್ರಾಯತೇ ಇತಿ ಗಾಯತ್ರಿ ಎಂಬಂತೆ ದೈವೀಜ್ಞಾನಕ್ಕೆ ಅಧಿದೇವತೆಯಾದ ಗಾಯತ್ರಿಯ ಕರುಣೆ ನಮಗೆ ಅವಶ್ಯಕ. ಈ ಮಂತ್ರದ ಜಪದಲ್ಲಿ ಅಗೌರವ, ಉದಾಸೀನ ತೋರಿಸಬಾರದು. ಪ್ರಾಮಾಣಿಕವಾದ ಗೌರವಾದರ ವಿನಯಗಳನ್ನು ತೋರಿಸಬೇಕು. ಆಗಮಾತ್ರ ದೈವೀಕರುಣೆ ದೊರೆತು ನಮ್ಮಲ್ಲಿ ಅಪೂರ್ವವಾದ ಬೆಳಕು ಗೋಚರಿಸಿ ಜ್ಞಾನವು ಸ್ಫುರಿಸುತ್ತದೆ. ಇದರ ಅಭ್ಯಾಸ ಚೆನ್ನಾಗಿ ಆದಾಗ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ. ಗಾಯತ್ರಿ ಜಪಕ್ಕೆ ಬೆರಳು, ಕೈ, ಕರ, ತಲೆ, ಹೃದಯ, ಕಣ್ಣು ಮುಂತಾದುವುಗಳ ನ್ಯಾಸ ಆಗಿ ಶುದ್ಧಿಗೊಳ್ಳಬೇಕು.

ಪ್ರಣವಸ್ಯ ಋಷಿಃ ಬ್ರಹ್ಮಾ (ಶಿರಸ್ಸು), ದೇವೀ ಗಾಯತ್ರೀ ಛಂದಃ (ಜಿಹ್ವೆ), ಪರಮಾತ್ಮಾ ಶ್ರೀಮನ್ನಾರಾಯಣೋ ದೇವತಾ (ಹೃದಯ) ಅತ್ರಿ ಭೃಗು ಕುತ್ಸವಸಿಷ್ಠ ಗೌತಮ ಕಾಶ್ಯಪ ಆಂಗೀರಸ ಋಷಯಃ (ಶಿರಸ್ಸು) ಗಾಯತ್ರ್ಯುಷ್ಣೀರ್ ಅನುಷ್ಟುಪ್ ಬೃಹತೀ ಪಂಕ್ತಿ ತ್ರಿಷ್ಟುಪ್ ಜಗತ್ಯಃ ಛಂದಾಗ್‌ಂಸಿ (ಜಿಹ್ವೆ) ಅಗ್ನಿವಾಯ್ವರ್ಕವಾಗೀಶ ವರುಣೇಂದ್ರ ವಿಶ್ವದೇವಾ ದೇವತಾಃ (ಹೃದಯ) ಸಾವಿತ್ರ್ಯಾ ಋಷಿ ವಿಶ್ವಾಮಿತ್ರಃ (ಶಿರಸ್ಸು) ದೇವೀ ಗಾಯತ್ರೀ ಛಂದಃ (ಜಿಹ್ವೆ) ಸವಿತಾದೇವತಾ (ಹೃದಯ) ಗಾಯತ್ರೀ ಶಿರಸಃ ಬ್ರಹ್ಮಾಋಷಿಃ ಅನುಷ್ಟುಪ್ ಛಂದಃ ಪರಮಾತ್ಮಾ ದೇವತಾ ಎಂದು ನ್ಯಾಸಮಾಡಿ ಜಪೇವಿನಿಯೋಗಃ ಎಂದು ಹೇಳಬೇಕು.

ಪ್ರಾತರ್ಧ್ಯಾಯಾಮಿ ಗಾಯತ್ರಿಂ ರವಿಮಂಡಲ ಮಧ್ಯಗಾಂ ।
ಋಗ್ವೇದ ಮುಚ್ಚಾರಯಂತೀಂ ರಕ್ತವರ್ಣಾಂ ಕುಮಾರಿಕಾಂ ।

ಅಕ್ಷಮಾಲಾಕರಾಂ ಬ್ರಹ್ಮ ದೈವತ್ಯಾಂ ಹಂಸವಾಹನಾಂ ||
ಮುಕ್ತಾವಿದ್ರುಮ ಹೇಮ ನೀಲಧವಲಚ್ಛಾಯೈರ್ಮುಖೈ ಸ್ತ್ರೀಕ್ಷಣೈಃ
ಯುಕ್ತಾಮಿಂದುಕಲಾನಿಬದ್ಧ ಮುಕುಟಾಂ ತತ್ತ್ವಾರ್ಥ ವರ್ಣಾತ್ಮಿಕಾಂ ||
ಗಾಯತ್ರೀಂ ವರದಾಭಯಾಂಕುಶಕಶಾಃ ಶುಭ್ರಂ ಕಪಾಲಂ ಗದಂ
ಶಂಖಂ ಚಕ್ರಮಥಾರವಿಂದ ಯುಗಲಂ ಹಸ್ತೈರ್ವ ಹಂತೀಂ ಭಜೇ ||

ಎಂದು ಧ್ಯಾನಮಾಡಬೇಕು.

ಸಾಮಾನ್ಯವಾಗಿ ಗಾಯತ್ರಿಯನ್ನು ದಶ (10), ಅಷ್ಟಾವಿಂಶತಿ (28), ಅಷ್ಟೋತ್ತರ ಶತ (108), ಅಷ್ಟೋತ್ತರ ಸಹಸ್ರ (1008) ಸಲ ಜಪಿಸುವುದುಂಟು. ಎಷ್ಟಾದರೂ ಆಗಲಿ ಸಂಖ್ಯೆ ಮುಖ್ಯವಲ್ಲ. ಜಪದ ಕಾಲದಲ್ಲಿ ನಮ್ಮ ಮನಸ್ಸು ಕೇವಲ ಪರಮಾತ್ಮನ ಕಡೆಗೆ ಗಮನವಿದ್ದು, ಆದಷ್ಟು ಹೆಚ್ಚು ಕಾಲ ಅವನಲ್ಲಿ ಲೀನ ವಾಗಿರಬೇಕು.

**ಧ್ಯಾನಶ್ಲೋಕ:**

ಯೋದೇವಸ್ಸವಿತಾಸ್ಮಾಕಂ ಧಿಯೋ ಧರ್ಮಾದಿ ಗೋಚರಾಃ |
ಪ್ರೇರಯೇತ್ತಸ್ಯಯದ್ಭರ್ಗಃ ತದ್ವರೇಣ್ಯ ಮುಪಾಸ್ಮಹೇ ||

(ಸ್ವಪ್ರಕಾಶನಾದ ಸೂರ್ಯನು ನನ್ನ ಬುದ್ಧಿ ಪ್ರವೃತ್ತಿಯನ್ನು ಧರ್ಮಕಾರ್ಯ ಗಳಲ್ಲಿ ತೊಡಗುವಂತೆ ಪ್ರೇರೇಪಿಸಲಿ. ಅಂತಹ ತೇಜಃಪುಂಜನನ್ನು, ಪರಮಪೂಜ್ಯ ನನ್ನು ಉಪಾಸಿಸುತ್ತೇನೆ).

ಆಯಾತು ವರದಾದೇವಿ ಅಕ್ಷರಂ ಬ್ರಹ್ಮಸಂಹಿತಂ |
ಗಾಯತ್ರೀಂ ಛಂದಸಾಂ ಮಾತೇದಂ ಬ್ರಹ್ಮಜುಷಸ್ವನಃ ||

ಓಜೋಸಿ ಸಹೋಸಿ ಬಲಮಸಿ ಭ್ರಾಜೋಸಿ ದೇವಾನಾಂ ಧಾಮನಾಮಾಸಿ ವಿಶ್ವಮಸಿ ವಿಶ್ವಾಯುಃ, ಸರ್ವಮಸಿ ಸರ್ವಾಯುಃ, ಅಭಿಭೂರೋಂ ಗಾಯತ್ರೀಂ ಆವಾಹಯಾಮಿ, ಸಾವಿತ್ರೀಂ ಆವಾಹಯಾಮಿ, ನರಸ್ವತೀಂ ಆವಾಹಯಾಮಿ, ಎಂದು ಗಾಯತ್ರಿಯನ್ನು ಆಹ್ವಾನಿಸಿ, ಸಾವಿತ್ರ್ಯಾಯಷಿಃ, ವಿಶ್ವಾಮಿತ್ರಃ ದೇವೀ ಗಾಯತ್ರೀ ಛಂದಃ, ಪರಮಾತ್ಮಾ ಸವಿತಾದೇವತಾ ಎಂದು ನ್ಯಾನಮಾಡಬೇಕು.

(ಇಷ್ಟಾರ್ಥಗಳನ್ನು ನೀಡುವ ಈ ದೇವಿಯು ನಾಶರಹಿತಳು. ವೇದಾಂತ ಪ್ರಮಾಣಗಳಿಂದ ಚೆನ್ನಾಗಿ ನಿಶ್ಚಿತವಾದವಳು. ಜಗತ್ಕಾರಣವಾದ ಪರತತ್ತ್ವ ಜ್ಞಾನಕ್ಕಾಗಿ ನನ್ನಲ್ಲಿ ಬರಲಿ. ಆಕೆ ಎಲ್ಲ ಛಂದಸ್ಸುಗಳಿಗೂ ತಾಯಿ. ಇಂತಹ ಬ್ರಹ್ಮಸ್ವರೂಪಿಯಾದವಳು ನನಗೆ ಉಪದೇಶ ಮಾಡಲಿ. ಈಕೆ ಜ್ಞಾನದ ಕೇಂದ್ರ·

ದುರ್ಗುಣ ನಿವಾರಕಳು. ಶರೀರದಾರ್ಢ್ಯಕ್ಕೆ ಕೇಂದ್ರವೂ, ಪ್ರಕಾಶದ ಗಣಿಯೂ ಆಗಿದ್ದಾಳೆ. ಸಮಸ್ತ ದೇವತೆಗಳ ನಿವಾಸಸ್ಥಾನವಾಗಿದ್ದಾಳೆ. ಈಕೆ ವಿಶ್ವಸ್ವರೂಪಳು. ವಿಶ್ವದ ಆಯಸ್ಸು, ಸರ್ವವೂ ಆಗಿದ್ದಾಳೆ. ಸಕಲಕ್ಕೂ ಪ್ರಾಣಸ್ವರೂಪಳು. ಸಕಲ ಪಾಪನಿವಾರಕಳೂ ಆಗಿದ್ದಾಳೆ. ಅಂತಹ ರಕ್ಷಕಿಯಾದ ಗಾಯತ್ರಿಯನ್ನೂ, ವೇದಮಾತೆಯಾದ ಸಾವಿತ್ರಿಯನ್ನೂ, ಜ್ಞಾನಿಯಾದ ಸರಸ್ವತಿಯನ್ನೂ, ಛಂದಸ್ಸನ್ನು ರಚಿಸಿದ ಋಷಿಗಳ ಅಧಿದೇವತೆಯಾದವಳನ್ನೂ, ಲಕ್ಷ್ಮೀಸ್ವರೂಪಳನ್ನೂ, ನನ್ನ ಹೃದಯ ಗುಹೆಗೆ ಬಿಜಯಮಾಡಿಸಿಕೊಳ್ಳುತ್ತೇನೆ. ತಾಯಿ, ಬಾ, ನನ್ನ ಶೂನ್ಯದ ಎದೆಯನ್ನು ತುಂಬು.)

**ಮುಖ್ಯಮಂತ್ರ :**

ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯ ದೀಮಹಿ ಧಿಯೋಯೋನಃ ಪ್ರಚೋದಯಾತ್ ॥

(ವಿಶ್ವವನ್ನು ಸೃಷ್ಟಿಸಿದವನೂ, ಪೂಜನೀಯನೂ, ಸರ್ವಪಾಪಗಳ ಹಾಗೂ ಅಜ್ಞಾನದ ಪರಿಹಾರಕನೂ ಆದ ಸವಿತೃವನ್ನೂ, ಆ ದೇವರ ಜ್ಞಾನ ತೇಜಸ್ಸನ್ನೂ ಧ್ಯಾನಮಾಡುತ್ತೇವೆ. ಆತನು ನಮ್ಮ ಧೀ ಅಥವಾ ಬುದ್ಧಿಶಕ್ತಿಯನ್ನು ಪ್ರಚೋದಿಸಲಿ.)

ಗಾಯತ್ರಿಯು ಬ್ರಹ್ಮಚೇತನವನ್ನು ಒಳಗೊಂಡ, ಮಹಿಮಾನ್ವಿತ, ಪವಿತ್ರ ಆದ ಮಂತ್ರ. ಧ್ಯಾನ ಮತ್ತು ಪಠನಮಾಡುವವರನ್ನು ಮಂತ್ರಗಳ ರಾಜನಾದ ಗಾಯತ್ರಿಯು ರಕ್ಷಿಸುತ್ತದೆ. ಗಾಯತ್ರಿದೇವಿಯ ಆಹ್ವಾನಪೂರ್ವಕವಾದ ಪ್ರಾಣಾಯಾಮ ಮಂತ್ರದ ಜಪವು, ಪಾಪವನ್ನು ನಾಶಮಾಡಿ, ಆಯುಸ್ಸು–ಆರೋಗ್ಯಗಳ ವರ್ಧನೆಗೆ ನೆರವಾಗುತ್ತದೆ ; ಪಂಚಭೂತಮಯವಾಗಿರುವ ಶರೀರವನ್ನು ಜೀವನ್ಮುಕ್ತವಾಗಿಸುತ್ತದೆ ; ತಮೋಮಯವಾಗಿರುವ ಅಂತಃಕರಣವನ್ನು ಮಡಿ ಮಾಡಿ, ಅಲ್ಲಿ ಜ್ಞಾನದ ಬೆಳಕು ಬೆಳಗುವಂತೆ ಮಾಡುತ್ತದೆ ; ಪ್ರತ್ಯೇಕತೆಯನ್ನು ನಾಶಮಾಡಿ, ದೇವಮಾನವರಲ್ಲಿ ಸಂಪರ್ಕತಂತುವನ್ನು ಸ್ಥಾಪಿಸಿ, ವಿದ್ಯುತ್ಪ್ರಭೆಯಂತಹ ಶಕ್ತಿಯನ್ನು ನೀಡುತ್ತದೆ. ಒಟ್ಟಿನಲ್ಲಿ ಗಾಯತ್ರಿದೇವಿಯ ಉಪಾಸನೆ ಎಂದರೆ ನಾಲ್ಕು ವೇದಗಳ ಅಧ್ಯಯನದಷ್ಟೇ ಮಹತ್ವದ್ದು ಎಂದು ಮಹರ್ಷಿಗಳು ಸಾರಿ ಹೇಳಿದ್ದಾರೆ

ಅಜ್ಞಾನದಿಂದ ಉಂಟಾದ ಆಸೆ ಆಕಾಂಕ್ಷೆಗಳು ಹೋಗಿ ಜ್ಞಾನವು ಉದಯಿಸಲಿ ಎಂಬ ಪ್ರಾರ್ಥನೆಯಿಂದ ಇದು ಜ್ಞಾನಯೋಗವಾಗುತ್ತದೆ ; ನಮ್ಮ ಬುದ್ಧಿಗೆ

ಪ್ರಚೋದನೆ, ಪ್ರಕಾಶಗಳನ್ನು ನೀಡಿ ನಾವು ಮಾಡುವ ಕರ್ಮಗಳಿಗೆಲ್ಲ ಭಗವಂತನ ಇಚ್ಛೆಯು ಆಧಾರವಾಗಲಿ ಎಂಬುದರಿಂದ ಕರ್ಮಯೋಗವಾಗುತ್ತದೆ; ಪೂಜನೀಯನೂ, ಸರ್ವ ಪಾಪ ಪರಿಹಾರಕನೂ ಆದವನನ್ನು ಪ್ರಾರ್ಥಿಸುವುದರಿಂದ ಭಕ್ತಿಯೋಗವಾಗುತ್ತದೆ; ಧ್ಯಾನದ ವಸ್ತುವಾಗಿರುವುದರಿಂದ ಧ್ಯಾನಯೋಗವಾಗುತ್ತದೆ. ಹೀಗೆ ಗಾಯತ್ರಿಯಲ್ಲಿ ನಾಲ್ಕು ಯೋಗಗಳೂ ಸೇರಿದ್ದು, ಅದು ಸರ್ವಯೋಗ ಮಾರ್ಗಗಳ ಸಾರಸಂಗ್ರಹವಾಗಿ ಸರ್ವ ಕಲ್ಯಾಣಸಿದ್ಧಿ ಆಗುತ್ತದೆಂಬುದು ಸತ್ಯ.

**ಗಾಯತ್ರಿ ವಿಸರ್ಜನ :** ಜಪದನಂತರ ಈ ಶ್ಲೋಕದ ಮೂಲಕ ಗಾಯತ್ರಿಯನ್ನು ಮೊದಲಿನ ಸ್ಥಾನಕ್ಕೆ ಹೋಗುವಂತೆ ಪ್ರಾರ್ಥಿಸಬೇಕು.

ಉತ್ತಮೇ ಶಿಖರೇದೇವಿ ಭೂಮ್ಯಾಂ ಪರ್ವತ ಮೂರ್ಧನಿ ।
ಬ್ರಾಹ್ಮಣೇಭ್ಯೋಹ್ಯನುಜ್ಞಾನಂ ಗಚ್ಛ ದೇವಿ ಯಥಾ ಸುಖಂ ॥

(ಗಾಯತ್ರಿಯೇ, ಭೂಮಿಯ ಮೇಲೂ, ಶಿಖರದಲ್ಲಿಯೂ ಇರುವ ನೀನು ಶ್ರೇಷ್ಠನಾದ ಹಿಮವತ್ಪರ್ವತದ ತುದಿಯಲ್ಲಿ ನೆಲೆಸಲು, ಸಂಧ್ಯೆಯನ್ನು ಅನುಷ್ಠಾನ ಮಾಡಿದ ಬ್ರಾಹ್ಮಣರ ಅನುಮತಿಯಿಂದ, ಸುಖವಾಗಿ ನಿನ್ನ ಸ್ಥಾನಕ್ಕೆ ದಯಮಾಡಿಸು.)

**21. ಉಪಸ್ಥಾನ :** ಉಪಸ್ಥಾನ ಎಂದರೆ ಸಮೀಪದಲ್ಲಿರುವಿಕೆ ಎಂದರ್ಥ. ಅಂದರೆ ಇದರಿಂದ ಸರ್ವಶಕ್ತನಾದ ಭಗವಂತನ ಸಮೀಪದಲ್ಲಿ ತ್ರಿಕರಣಪೂರ್ವಕ ಇರುವುದು ಎಂದರ್ಥ. ಸೂರ್ಯ–ನಕ್ಷತ್ರಗಳೆಲ್ಲವೂ ಉನ್ನತಿ ಹೊಂದಿ, ಮೇಲೇರಿ, ಅಭಿವೃದ್ಧಿ ಹೊಂದಲಿರುವ ಸ್ಥಿತಿಗತಿಗಳ ಸಂಕೇತವಾಗಿರುವುದು ಪೂರ್ವದಿಕ್ಕು. ಆದರಂತೆ ನಮ್ಮ ಲೌಕಿಕ ಹಾಗೂ ಪಾರಲೌಕಿಕ ಜೀವನದಲ್ಲಿ ಅಭಿವೃದ್ಧಿ ಹೊಂದಲು ಅವಶ್ಯವಾದ ಶಕ್ತಿಯು ಪೂರ್ವದಿಕ್ಕಿನಲ್ಲಿ ಉದಯಿಸುವ ಸವಿತೃವಿನಿಂದ ಬರಲೆಂದು ಹಾರೈಸುವುದು ಉಪಸ್ಥಾನದ ಉದ್ದೇಶ.

ಗಾಯತ್ರಿ ಜಪ ಮುಗಿದನಂತರ ಭಕ್ತನು ಎದ್ದು ನಿಂತು, ಸೂರ್ಯನಿಗೆದುರಾಗಿ ನಿಂತು ಕೈ ಮುಗಿದುಕೊಂಡು, ಹೇಳುವ ಉಪಸ್ಥಾನ ಮಂತ್ರವು ಮೂರು ಸಂಧ್ಯೆಗಳಲ್ಲಿಯೂ ಬೇರೆಬೇರೆಯಾಗಿರುತ್ತದೆ.

**1. ಪ್ರಾತಃಕಾಲದಲ್ಲಿ :** ಮಿತ್ರಸ್ಯ ಚರ್ಷಣೀಧೃತಃ, ಶ್ರವೋದೇವಸ್ಯ ಸಾನಸಿಂ, ಸತ್ಯಂಚಿತ್ರ ಶ್ರವಸ್ತಮಂ, ಮಿತ್ರೋಜನಾನ್ಯಾತಯತಿಪ್ರಜಾನನ್, ಮಿತ್ರೋದಾಧಾರ ಪೃಥಿವೀ ಮುತದ್ಯಾಂ, ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ, ಸತ್ಯಾಯಹವ್ಯಂ ಘೃತವದ್ವಿಧೇಮ, ಪ್ರಸಮಿತ್ರಮರ್ತೋಅಸ್ತು, ಪಯಸ್ವಾನ್ಯಸ್ತ

ಆದಿತ್ಯ ಶಿಕ್ಷತಿರ್ವ್ರತೇನ, ನಹನ್ಯತೇ ನಜೀಯತೇ ತ್ವೋತೋನೈನಮಗ್ಂ ಹೋ ಅಶ್ನೋತ್ಯಂತಿತೋನದೂರಾತ್ ॥

(ಮನುಷ್ಯರನ್ನು ಧರಿಸಿದವನಾಗಿ ರಕ್ಷಕನಾದ, ತ್ರಿಕಾಲವೂ ಅಬಾಧ್ಯನಾದವನನ್ನು, ಸೂರ್ಯನ ಶ್ರಾವ್ಯ ಯೋಗ್ಯವಾದ ಯಶಸ್ಸನ್ನು ನಾನು ಚೆನ್ನಾಗಿ ಭಜಿಸುತ್ತೇನೆ; ಸರ್ವರಕ್ಷಕನು ಎಲ್ಲ ಪ್ರಜೆಗಳನ್ನೂ ಅವರವರ ಧರ್ಮಾಧರ್ಮವನ್ನು ತಿಳಿದು ಅವರವರ ಕರ್ಮಗಳಲ್ಲಿ ಪ್ರೇರೇಪಿಸಿ ತೊಡಗಿಸುತ್ತಾನೆ. ಈ ಸೂರ್ಯನು ಭೂಮಿ-ಆಕಾಶಗಳನ್ನು ಧರಿಸಿದವನಾಗಿದ್ದಾನೆ. ಆತನ ಆಧಾರದಿಂದ ಭೂಮಂಡಲ–ಆಕಾಶಗಳು ನಿಂತಿವೆ; ಈ ಸೂರ್ಯನು ಜೀವಿಗಳು ತ್ರಿಕರಣಪೂರ್ವಕವಾಗಿ ಮಾಡುವ ಪಾಪ ಪುಣ್ಯಗಳನ್ನೆಲ್ಲ ಪ್ರತಿಕ್ಷಣವೂ ಸಾಕ್ಷೀಭೂತನಾಗಿ ನೋಡುತ್ತಿರುತ್ತಾನೆ. ಅಂತಹ ಸೂರ್ಯಪರಮಾತ್ಮನಿಗೆ ಹೋಮದ್ರವ್ಯವನ್ನು ತುಪ್ಪದೊಂದಿಗೆ ಅರ್ಪಿಸುತ್ತೇನೆ; ಹೇ ಸೂರ್ಯನೇ, ಯಾವ ಮಿತ್ರ ಪೂಜಕನು ಅಥವಾ ಯಜ್ಞ ಮಾಡುವವನು ನಿನ್ನ ಸಂಬಂಧವಾದ ವ್ರತದಿಂದ ಅನುಷ್ಠಾನಮಾಡಲು ಶಕ್ತನಾಗಲು ಬಯಸುತ್ತಾನೋ ಆ ಯಜಮಾನನು ಅಥವಾ ಮಾನವನು ಕರ್ಮಫಲಯುಕ್ತವಾಗಿ ಚೆನ್ನಾಗಿ ಮಾಡುವಂತೆ ಪ್ರೇರೇಪಿಸು; ನಿನ್ನಿಂದ ರಕ್ಷಿಸಲ್ಪಟ್ಟ ಆ ಯಜಮಾನನು ರೋಗರುಜಿನಗಳಿಂದಾಗಲೀ, ಶತ್ರುಗಳಿಂದಾಗಲೀ ತೊಂದರೆ–ಸೋಲುಗಳನ್ನು ಅನುಭವಿಸುವುದಿಲ್ಲ. ಅಂತಹ ಯಜಮಾನನ ಹತ್ತಿರ ಪಾಪಗಳು ಸುಳಿಯುವುದಿಲ್ಲ, ದೂರದಿಂದಲೂ ಆವನನ್ನು ಸ್ಪರ್ಶಿಸುವುದಿಲ್ಲ.)

**2. ಮಾಧ್ಯಾಹ್ನಿಕದಲ್ಲಿ :** ಆಸತ್ಯೇನರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂಚ, ಹಿರಣ್ಯಯೇನ ಸವಿತಾರಥೇನಾ ದೇವೋಯಾತಿ ಭುವನಾವಿಪಶ್ಯನ್, ಉದ್ವಯಂ ತಮಸಸ್ಪರಿ ಪಶ್ಯಂತೋ ಜ್ಯೋತಿರುತ್ತರಂ, ದೇವಂದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ, ಉದುತ್ಯಂ ಜಾತವೇದಸಂ ದೇವಂ ವಹತಿ ಕೇತವಃ, ದೃಶೇವಿಶ್ವಾಯಸೂರ್ಯಂ, ಚಿತ್ರಂದೇವಾನಾಮುದಗಾದನೀಕಂ, ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ, ಆಪ್ರಾದ್ಯಾವಾಪೃಥಿವೀ ಅಂತರಿಕ್ಷಗ್ಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ, ತಚ್ಚಕ್ಷುರ್ದೇವಹಿತಂ, ಪುರಸ್ತಾಚ್ಛುಕ್ರಮುಚ್ಚರತ್, ಪಶ್ಯೇಮ ಶರದಶ್ಶತಂ, ಜೀವೇಮಶರದಶ್ಶತಂ, ನಂದಾಮಶರದಶ್ಶತಂ, ಮೋದಾಮಶರದಶ್ಶತಂ, ಭವಾಮಶರದಶ್ಶತಂ, ಶೃಣವಾಮಶರದಶ್ಶತಂ, ಪ್ರಬ್ರವಾಮ ಶರದಶ್ಶತಂ, ಅಜೀತಾಸ್ಯಾಮಶರದಶ್ಶತಂ, ಜ್ಯೋಕ್ಚಸೂರ್ಯಂದೃಶೇ, ಯ ಉದಗಾನ್ಮಹತೋರ್ಣವಾತ್ ವಿಭ್ರಾಜಮಾನಸ್ಸರಿರಸ್ಯ ಮಧ್ಯಾತ್ಸಮಾ ವೃಷಭೋ ರೋಹಿತಾಕ್ಷಸ್ಸೂರ್ಯೋ ವಿಪಶ್ಚಿನ್ಮನಸಾಪುನಾತು ।

(ಆ ಸತ್ಯಸ್ವರೂಪನಾದ, ಸ್ವಯಂ ಪ್ರಕಾಶನಾದ, ಸೂರ್ಯನು ಮೋಕ್ಷವನ್ನು ಅವರವರ ಕರ್ಮಾನುಸಾರವಾಗಿ ನೀಡುತ್ತಾನೆ. ಸುವರ್ಣಮಯವಾದ ರಥದಲ್ಲಿ ಕುಳಿತು ಸಂಚರಿಸುತ್ತ, ಸೂರ್ಯನು ಪ್ರಪಂಚವನ್ನು ನೋಡುತ್ತಾ ಹೋಗುತ್ತಾನೆ; ನಾನು ಪ್ರಕೃತಿ ತತ್ತ್ವದ ತಮಸ್ಸಿನಿಂದ ಮೇಲೆದ್ದು, ಪ್ರಕೃತಿಗಿಂತಲೂ ಶ್ರೇಷ್ಠತರ, ಸುಖದಾಯಕ, ಆದ ಆತ್ಮನನ್ನು ನೋಡುತ್ತ ದಿವ್ಯ ತತ್ತ್ವಗಳ ನಡುವೆ ಶ್ರೇಷ್ಠತಮ, ಜ್ಯೋತಿರ್ಮಯ, ಆದ ಸೂರ್ಯನನ್ನು ಸಾಕ್ಷಾತ್ಕರಿಸಿಕೊಳ್ಳುತ್ತೇನೆ; ಎಲ್ಲರೂ ತಿಳಿಯಲು ಅನುಕೂಲಿಸುವಂತೆ ಸಮಸ್ತ ಜ್ಞಾನ ವಿಜ್ಞಾನಗಳಲ್ಲಿಯೂ, ನಿಜವಾಗಿ ಅಣುವಿನಲ್ಲಿಯೂ ವ್ಯಾಪಕನಾಗಿರುವ, ಅಣುವನ್ನು ಬಲ್ಲ, ವಿಶ್ವಕ್ಕೆ ಚಲನೆ ನೀಡುವ ಆ ಸ್ವಾಮಿಯನ್ನು ಎತ್ತಿಹಿಡಿಯುತ್ತವೆ ಎಂದು ಸಾರಿ ಹೇಳುತ್ತೇವೆ; ಚರಾಚರ ವಿಶ್ವದ ಆತ್ಮನಾದ ಸೂರ್ಯನು ಬ್ರಹ್ಮಾಂಡಕ್ಕೆ ಅಧಿಪತಿ. ಪೃಥ್ವಿ–ಅಂತರಿಕ್ಷಗಳಲ್ಲಿ ವ್ಯಾಪಿಸಿಕೊಂಡಿದ್ದಾನೆ. ಆತ ನಿರ್ವೈರಿ, ದಯಾಮಯ, ಸಂಯಮಿ, ಜಿತೇಂದ್ರಿಯ, ಸ್ವಪ್ರಕಾಶ, ಜ್ಞಾನಿಗಳ ಕಣ್ಣು, ದೇವತೆಗಳ ಪ್ರಭು. ಆತನು ಸಕಲ ಭೌತಿಕ ವಿಷಯಗಳಿಂದಲೂ ಮೇಲೆದ್ದು ನಮ್ಮ ಅಂತಃಕರಣಕ್ಕೆ ಗೋಚರವಾಗುತ್ತಾನೆ; ವಿದ್ವಜ್ಜನರಿಗೆ, ಉದಾರಾತ್ಮರಿಗೆ, ಹಿತನಾದ, ತೇಜೋಮಯನಾದ, ಸರ್ವದ್ರಷ್ಟನಾದ, ಪರಮಾತ್ಮನು ಅನಾದಿಕಾಲದಿಂದ ವಿರಾಜಿಸುತ್ತಿದ್ದಾನೆ; ಆತನನ್ನು ನಾವು **ನೂರುವರ್ಷಗಳ** ಕಾಲ ನೋಡುತ್ತಿರೋಣ, ಜೀವಿಸೋಣ, ಕೇಳುತ್ತಿರೋಣ, ಉತ್ಕೃಷ್ಟವಾಗಿ ಮಾತನಾಡುತ್ತಿರೋಣ. ಆತನಿಗೆ ಅಧೀನರಾಗಿರೋಣ. ಆದರ್ಶ ಜೀವನವನ್ನು ನಡೆಸುತ್ತ ಉಜ್ಜ್ವಲರಾಗಿ, ಜೀವಂತವಾಗಿ ಅಜೇಯರಾಗಿ ಇರೋಣ. ಸೂರ್ಯನನ್ನು ದರ್ಶಿಸುತ್ತ, ಸಂಪದ್ಯುಕ್ತರಾಗಿ, ಸ್ವಸ್ಥಾನದಲ್ಲಿರೋಣ. ಯಾವ ಪರಮಾತ್ಮನು ಅಗಾಧವಾದ ಸಮುದ್ರದಿಂದ ಹುಟ್ಟಿದನೋ, ನೀರಿನ ಮಧ್ಯದಿಂದ ಪ್ರಕಾಶಿಸುತ್ತಿರುವನೋ, ಯಾವನು ಧರ್ಮಪ್ರಕಾಶನೋ, ಕೆಂಪಾದ ಕಣ್ಣುಳ್ಳವನೋ, ಸರ್ವಜ್ಞನಾದ ಸೂರ್ಯನೋ, ಆತನು ನನ್ನನ್ನು ಕರುಣೆಯಿಂದ ಪವಿತ್ರವನ್ನಾಗಿ ಮಾಡಲಿ.)

**3. ಸಾಯಂಕಾಲದಲ್ಲಿ :** ಇಮಂ ಮೇ ವರುಣಶ್ರುಧೀಹವಮದ್ಯಾಚ ಮೃಡಯ, ತ್ವಾಮ ವಸ್ಯುರಾಚಕೇ, ತತ್ತ್ವಾಯಾಮಿ ಬ್ರಹ್ಮಣಾವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ, ಆಹೇಡಮಾನೋ ವರುಣೇಹಬೋಧ್ಯುರುಶಗ್ಂ ಸಮಾನ ಆಯುಃ ಪ್ರಮೋಷೀಃ, ಯಚ್ಚಿದ್ಧಿತೇ ವಿಶೋಯಥಾ ಪ್ರದೇವ ವರುಣ ವ್ರತಂ, ಮಿನೀಮಸಿದ್ಯವಿದ್ಯವಿ, ಯತ್ಕಿಂಚೇದಂ ವರುಣ ದೈವ್ಯೇಜನೇಭಿದ್ರೋಹಂ ಮನುಷ್ಯಾಶ್ಚರಾಮಸಿ, ಅಚಿತ್ತೀಯತ್ತವಧರ್ಮಾಯುಯೋಪಿಮ ಮಾನಸ್ತಸ್ಮಾದೇನಸೋದೇವರೀರಿಷಃ, ಕಿತವಾಸೋಯದ್ರಿರಿಪುರ್ನದಿವಿ ಯದ್ವಾಘಾಸತ್ಯ ಮುತಯನ್ನವಿದ್ಮ, ಸರ್ವಾತಾವಿಷ್ಯಶಿಧಿರೇವದೇವಾ ಅಥಾತೇಸ್ಯಾಮ ವರುಣಪ್ರಿಯಾಸಃ ||

(ಹೇ ವರುಣ, ನಮ್ಮ ಆಹ್ವಾನವನ್ನು ಆಲಿಸು. ನಮ್ಮ ಮಾತು ಕೇಳಿ ಈಗ ನಮ್ಮನ್ನು ಸುಖವಾಗಿರಿಸು, ನಾವು ಜೀವಿಸುವುದಕ್ಕಾಗಿ ನಿನ್ನನ್ನು ಸರ್ವಪ್ರಕಾರದಿಂದ ಪ್ರಾರ್ಥಿಸುತ್ತೇವೆ. ಅಂತಹ ರಕ್ಷಣೆಗೋಸ್ಕರ ವೇದಮಂತ್ರದಿಂದ ನಮಸ್ಕರಿಸುತ್ತಾ ನಿನ್ನನ್ನೇ ಹೊಂದುತ್ತೇವೆ. ಯಜ್ಞಮಾಡುವ ಯಜಮಾನನು ಹವಿಸ್ಸುಗಳಿಂದ ಆರಾಧನೆಮಾಡಿ ನಿನ್ನಿಂದ ರಕ್ಷಣೆಯನ್ನು ಬಯಸುತ್ತಾನೆ. ಆದಕಾರಣ ಹೇ ವರುಣ, ಕೋಪಿಸಿಕೊಳ್ಳದೆ, ಈ ಯಜ್ಞದಲ್ಲಿ ನಮ್ಮ ವಿಜ್ಞಾಪನೆಯನ್ನು ಕೇಳು. ಸ್ತುತಿಗೆ ಅರ್ಹನಾದವನೇ ನಮ್ಮ ಆಯುಸ್ಸನ್ನು ಕ್ಷೀಣಿಸಬೇಡ; ಹೇ ವರುಣ, ನಿನ್ನನ್ನು ಉದ್ದೇಶಿಸಿ ಮಾಡುವ ಕರ್ಮವನ್ನು ಪ್ರಜೆಗಳಾದ ನಾವು ಹೇಗೆ ಚೆನ್ನಾಗಿ ಮಾಡುತ್ತೇವೆಯೋ ಹಾಗೆ ಪ್ರತಿದಿನವೂ ವಿಮರ್ಶಿಸಿ ತಿಳಿಯುತ್ತೇವೆ. ಇದು ಸತ್ಯ; ಹೇ ವರುಣ, ಮಾನವರಾದ ನಾವು ದೇವತೆಗಳ ಬಗೆಗೆ ಅಜ್ಞಾನದಿಂದಲೋ, ಸ್ವಲ್ಪವೋ ಅಧಿಕವೂ ಅಂತೂ ದ್ರೋಹಮಾಡುತ್ತೇವೆ. ಯಾವುದಾದರೂ ಸರಿ, ದೇವತೆಗಳ ಸಂಬಂಧವಾದ ಕರ್ಮಮಾಡುವಾಗ ಯಾವುದೇ ಪಾಪ ಉಂಟಾದರೂ ಸಹ ನಮ್ಮನ್ನು ಪಾಪದ ದೆಸೆಯಿಂದ ಹಿಂಸೆಮಾಡಬೇಡ; ಹೇ ವರುಣ, ನಾವು ವಂಚಕರಾಗಿ ಯಾವ ಕರ್ಮವನ್ನು ನಾಶಪಡಿಸಿದೆವೋ, ಯಾವುದರಲ್ಲಿ ನ್ಯಾಯವಾಗಿ ವ್ಯವಹಾರ ಮಾಡಿಲ್ಲವೋ, ಯಾವ ಪಾಪ ಮಾಡಿದ್ದೇವೋ, ಯಾವ ಪಾಪವನ್ನು ಅರಿವಿಲ್ಲದೆ ಮಾಡಿದ್ದೇವೆಯೋ, ಅಂತಹ ಎಲ್ಲ ಶಿಥಿಲಗಳನ್ನೂ ವಿನಾಶಮಾಡು. ಹಾಗೆ ನೀನು ಮಾಡಿದರೇನೇ ನಾವು ನಿನಗೆ ಪ್ರಿಯರಾಗಬಲ್ಲೆವು. ನಮ್ಮನ್ನು ಕ್ಷಮಿಸಿ, ರಕ್ಷಿಸು.)

ಹೀಗೆ ತ್ರಿಕಾಲದಲ್ಲಿಯೂ ಸೂರ್ಯನನ್ನು ನಮಸ್ಕರಿಸಿದನಂತರ ದೇವತೆಗಳನ್ನು ವಂದಿಸಬೇಕು. ಓಂ ಸಂಧ್ಯಾಯೈ ನಮಃ, ಸಾವಿತ್ರ್ಯೈ ನಮಃ, ಗಾಯತ್ರ್ಯೈ ನಮಃ, ಸರಸ್ವತ್ಯೈ ನಮಃ ಎಂದು ಹೇಳುತ್ತ ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಿಗೆ ಅಂಜಲಿಮಾಡಿ ಸರ್ವಾಭ್ಯೋ ದೇವತಾಭ್ಯೋನಮಃ ಎಂದು ಎಲ್ಲಾ ದೇವತೆಗಳಲ್ಲಿ ಅಂತರ್ಯಾಮಿಯಾಗಿರುವನನ್ನು ನಮಸ್ಕರಿಸಬೇಕು.

**22. ಕ್ಷಮಾಪ್ರಾರ್ಥನೆ:** ಓಂ ಕಾಮೋಕಾರ್ಷೀನ್ಮನ್ಯುರ ಕಾರ್ಷೀನ್ನಮೋ ನಮಃ ಎಂಬ ಈ ಮಂತ್ರವನ್ನು ಶಕ್ತ್ಯಾನುಸಾರ ಉಚ್ಚರಿಸಬೇಕು.

**23. ಅಭಿವಾದನ:** ತನ್ನ ಕುಲಗೋತ್ರಗಳಿಗೆ ಸಂಬಂಧಿಸಿದ ಮೂಲ ಋಷಿಗಳ ಹಾಗೂ ಆ ಸಂಬಂಧದ ಪರಂಪರೆಯನ್ನು ಸ್ಮರಿಸಿಕೊಂಡು, ಅಭಿಮಾನ–ಕೃತಜ್ಞತೆಗಳಿಂದ ಅವರನ್ನೆಲ್ಲಾ ವಂದಿಸಬೇಕು. ಇದರಿಂದ ಜೀವನದ ಕರ್ತವ್ಯ ಪಥದಲ್ಲಿ ಪ್ರಗತಿಹೊಂದಲು ಪ್ರೋತ್ಸಾಹ–ಉತ್ಸಾಹಗಳು ಸಿಗುತ್ತವೆ.

ಅಭಿವಾದಯೇ........ಋಷಯ ಪ್ರವರಾನ್ವಿತ........ಗೋತ್ರ........ಸೂತ್ರ.... ...ಶಾಖಾಧ್ಯಾಯೀ....... ಶರ್ಮಾನಾಂ ಅಹಂ ಅಸ್ಮಿ ಭೋಃ ಎಂದು ತನ್ನ ಪ್ರವರವನ್ನು ಹೇಳಿ ಅಭಿವಾದನ ಮಾಡಬೇಕು.

**24. ದಿಗುಪಸ್ಥಾನ :** ಆಮೇಲೆ ದಿಕ್ಕುಗಳನ್ನು ವಂದಿಸಬೇಕು. ವಿವಿಧ ದಿಕ್ಕುಗಳ ಉಪಸ್ಥಾನವನ್ನು ಮಾಡುವುದರ ಮೂಲಕ ದೈನಂದಿನ ಜೀವನಕ್ಕೆ ಬೇಕಾದ ಶಕ್ತಿ, ಭರವಸೆ, ಅಭಯಗಳನ್ನು ಪಡೆಯಬಹುದು. ಓಂ ಪ್ರಾಚ್ಯೈ ದಿಶೇನಮಃ, ದಕ್ಷಿಣಾಯೈ ದಿಶೇ ನಮಃ, ಪ್ರತೀಚ್ಯೈ ದಿಶೇ ನಮಃ, ಉದೀಚ್ಯೈ ದಿಶೇ ನಮಃ ಎಂದು ಹೇಳುತ್ತ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಿಗೆ ನಮಸ್ಕರಿಸಿ, ಆಮೇಲೆ ಊರ್ಧ್ವಾಯ ನಮಃ, ಅಧರಾಯ ನಮಃ, ಅಂತರಿಕ್ಷಾಯ ನಮಃ, ಭೂಮ್ಯೈ ನಮಃ ಎಂದು ಹೇಳುತ್ತ ಮೇಲೆ–ಕೆಳಗೆ, ಆಕಾಶ-ಭೂಮಿಗಳಲ್ಲಿರುವ ಪರಮಾತ್ಮನನ್ನು ನಮಸ್ಕರಿಸಬೇಕು.

**25. ಪೌರಾಣಿಕ ಸ್ತೋತ್ರಾವಳಿ :**

ನಮಸ್ಸವಿತ್ರೇ ಜಗದೇಕ ಚಕ್ಷುಸೇ
ಜಗತ್ಪ್ರಸೂತಿಸ್ಥಿತಿನಾಶಹೇತವೇ ।
ತ್ರಯೀಮಯಾಯ ತ್ರಿಗುಣಾತ್ಮಧಾರಿಣೇ
ವಿರಿಂಚಿ ನಾರಾಯಣ ಶಂಕರಾತ್ಮನೇ ॥ ೧ ॥
ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಃ ಸರಸಿಜಾಸನ ಸನ್ನಿವಿಷ್ಟಃ ॥
ಕೇಯೂರವಾನ್ಮಕರ ಕುಂಡಲವಾನ್ಕಿರೀಟೀ
ಹಾರೀ ಹಿರಣ್ಮಯವಪುರ್ಧೃತ ಶಂಖಚಕ್ರಃ ॥ ೨ ॥
ಶಂಖಚಕ್ರಗದಾಪಾಣೇ ದ್ವಾರಕಾನಿಲಯಾಚ್ಯುತ ।
ಗೋವಿಂದ ಪುಂಡರೀಕಾಕ್ಷ ರಕ್ಷಮಾಂ ಶರಣಾಗತಂ ॥ ೩ ॥
ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ ।
ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥ ೪ ॥
ನಮೋ ಬ್ರಹ್ಮಣ್ಯ ದೇವಾಯ ಗೋ ಬ್ರಾಹ್ಮಣ ಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥ ೫ ॥
ಶ್ರೀರಂಗ ಮಂಗಳಮಣಿಂ ಕರುಣಾ ನಿವಾಸಂ
ಶ್ರೀ ವೇಂಕಟಾದ್ರಿ ಶಿಖರಾಲಯ ಕಾಳಮೇಘಂ ।
ಶ್ರೀ ಹಸ್ತಿಶೈಲ ಶಿಖರೋಜ್ವಲ ಪಾರಿಜಾತಂ
ಶ್ರೀಶಂ ನಮಾಮಿ ಶಿರಸಾ ಯದುಶೈಲದೀಪಂ ॥ ೬ ॥

ದೇಶಾಂತರಗತೋವಾಪಿ ದ್ವೀಪಾಂತರಗತೋಽಪಿವಾ ।
ಶ್ರೀರಂಗಾಭಿಮುಖೋಭೂತ್ವಾ ಪ್ರಣಿಪತ್ಯನಸೀದತಿ ॥ ೭ ॥

ಕಾವೇರೀ ವಿರಜಾತೋಯಂ ವೈಕುಂಠಂ ರಂಗಮಂದಿರಂ ।
ಸವಾಸುದೇವೋ ರಂಗೇಶಃ ಪ್ರತ್ಯಕ್ಷಂ ಪರಮಂ ಪದಂ ॥ ೮ ॥

ವಿಮಾನಂ ಪ್ರಣವಾಕಾರಂ ವೇದಶೃಂಗಂ ಮಹಾದ್ಭುತಂ ।
ಶ್ರೀರಂಗಶಾಯೀ ಭಗವಾನ್ ಪ್ರಣತಾರ್ತಿ ಪ್ರಕಾಶಕಃ ॥ ೯ ॥

**ಸಾಷ್ಟಾಂಗ ದಂಡವತ್ ಪ್ರಣಾಮ, ಆಚಮನ–ಪ್ರಾಣಾಯಾಮ-ಸಂಕಲ್ಪ.**

**26. ಮಂತ್ರಜಪ :** ಪಂಚಸಂಸ್ಕಾರಗಳಲ್ಲಿ ಮಂತ್ರವೂ ಒಂದು. ಶ್ರೀವೈಷ್ಣವ ಮತದಲ್ಲಿ ನಿಷ್ಠೆಯುಳ್ಳವರಿಗೆ ಉಪದೇಶಿಸಿದ ಮೂರು ಸತ್ಯಾರ್ಥಪೂರಿತ ಮಂತ್ರಗಳಿಗೆ **ರಹಸ್ಯತ್ರಯ**ವೆಂದು ಹೆಸರು. ಇದು ಶ್ರೀವೈಷ್ಣವ ಮತದ ಮುಖ್ಯ ತತ್ತ್ವಗಳನ್ನು ತಿಳಿಸುತ್ತದೆಯಾದುದರಿಂದ ಇದರ ಮೇಲೆ ಅನೇಕ ಆಚಾರ್ಯರು ಹತ್ತಾರು ಗ್ರಂಥಗಳನ್ನು ರಚಿಸಿದ್ದಾರೆ. ಎಲ್ಲಕ್ಕಿಂತಲೂ ವೇದಾಂತದೇಶಿಕರ 'ರಹಸ್ಯ ತ್ರಯಸಾರ' ಗ್ರಂಥವು ಪರಿಪೂರ್ಣವಾದುದು ಹಾಗೂ ಸರ್ವೋತ್ಕೃಷ್ಟವಾದುದು ಎಂಬುದು ಅನೇಕರ ಅಭಿಪ್ರಾಯವಾಗಿದೆ.

ಶ್ರಿಯಃ ಪತಿಯಾದ ನಾರಾಯಣನ ಪಾದಾರವಿಂದಗಳನ್ನು ಸೇರಬೇಕೆಂದು ಅಪೇಕ್ಷಿಸುವ ಮುಮುಕ್ಷುವಿಗೆ ಈ ರಹಸ್ಯತ್ರಯದ ಜ್ಞಾನವು ಅತ್ಯವಶ್ಯಕವಾದುದು. ಏಕೆಂದರೆ ಇದು ತತ್ತ್ವ, ಹಿತ, ಪುರುಷಾರ್ಥಗಳ ಸ್ವರೂಪವನ್ನು ಸಂಶಯ ವಿಪ ರ್ಯಾಯಗಳಿಗೆ ಅವಕಾಶವಿಲ್ಲದಂತೆ, ಯಥಾವತ್ತಾಗಿ ತಿಳಿಸುತ್ತದೆ. ವೇದದಲ್ಲಿ ಒಂದು ಭಾಗವಾದ ಮೂಲಮಂತ್ರವು ಸಮಸ್ತ ವೇದ ಪ್ರತಿಪಾದ್ಯ ಸಾರ ಸಂಗ್ರಹರೂಪ ವಾಗಿದೆ. ಈ ಮೂಲಮಂತ್ರವನ್ನು ಸರ್ವೇಶ್ವರನು ಬದರಿಕಾಶ್ರಮದಲ್ಲಿ ನಾರಾಯಣನ ರೂಪದಿಂದ ತನ್ನ ಅಂಶಸಂಭೂತನಾದ ನರನಿಗೆ ಉಪದೇಶಿಸಿದನು. ಪರಮಪವಿತ್ರ, ಪರಮಗುಹ್ಯ, ಶ್ರೇಷ್ಠ ವ್ಯಾಪಕ ಆಗಿರುವ ಈ ಮೂಲ ಮಂತ್ರಕ್ಕೆ ಮಹರ್ಷಿಗಳು, ಆಳ್ವಾರುಗಳು, ಆಚಾರ್ಯರು ತುಂಬಾ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಇದರ ವ್ಯಾಖ್ಯಾನ ರೂಪವಾದ ದ್ವಯಮಂತ್ರವು ಪುರುಷಾರ್ಥವನ್ನೂ, ದ್ವಯಮಂತ್ರದ ವಿವರಣವಾದ ಚರಮಶ್ಲೋಕ ಮಂತ್ರವು, ಹಿತವನ್ನೂ ತಿಳಿಸುತ್ತವೆ. ಭೂದೇವಿಗೆ ವರಾಹನಾಗಿ ದ್ವಯಮಂತ್ರವನ್ನೂ, ಅರ್ಜುನನಿಗೆ ಶ್ರೀಕೃಷ್ಣನಾಗಿ ಹಾಗೂ ವಿಭೀಷಣನಿಗೆ ಶ್ರೀರಾಮನಾಗಿ ಚರಮಶ್ಲೋಕವನ್ನೂ, ನಾರಾಯಣನೇ ಉಪದೇಶಿ ಸಿದ್ದಾನೆ

ಈ ರಹಸ್ಯತ್ರಯವು ಸದಾಚಾರ್ಯಾಭಿಮಾನ ಪುರಸ್ಸರವಾದ ಉಪದೇಶ ಮೂಲಕವಾಗಿ ಪ್ರಾಪ್ತವಾದಾಗ ಮಾತ್ರ ಶ್ರೇಷ್ಠವೆನಿಸಿ, ಸಫಲವಾಗುತ್ತದೆಂದು ಹಿರಿಯರ ಅಭಿಪ್ರಾಯ.

## 1. ಮೂಲಮಂತ್ರ

"ಯಥಾ ಸರ್ವೇಷು ದೇವೇಷು ನಾಸ್ತಿನಾರಾಯಣಾತ್ಪರಂ ।
ತಥಾ ಸರ್ವೇಷು ಮಂತ್ರೇಷು ನಾಸ್ತಿಚಾಷ್ಟಾಕ್ಷರಾತ್ಪರಃ ॥ ೧ ॥
ಸರ್ವವೇದಾಂತ ಸಾರಾರ್ಥಃ ಸಂಸಾರಾರ್ಣವ ತಾರಕಃ ॥
ಗತಿರಷ್ಟಾಕ್ಷರೋ ನೃಣಾಮಪುನರ್ಭವಕಾಂಕ್ಷಿಣಾಂ ॥ ೨ ॥
ಯತ್ರಾಽಷ್ಟಾಕ್ಷರ ಸಂಸಿದ್ಧೋ ಮಹಾಭಾಗೋಮಹೀಯತೇ ॥
ನತತ್ರ ಸಂಚರಿಷ್ಯಂತಿ ವ್ಯಾಧಿದುರ್ಭಿಕ್ಷ ತಸ್ಕರಾಃ ॥ ೩ ॥
ಐಹಲೌಕಿಕಮೈಶ್ವರ್ಯಂ ಸ್ವರ್ಗಾದ್ಯಂಪಾರ ಲೌಕಿಕಂ ॥
ಕೈವಲ್ಯಂ ಭಗವಂತಂಚ ಮಂತ್ರೋಽಯಂ ಸಾಧಯಿಷ್ಯತಿ ॥ ೪ ॥
ಕಿಂ ತತ್ರ ಬಹುಭಿರ್ಮಂತ್ರೈಃ ಕಿಂತತ್ರ ಬಹುಭಿರ್ವ್ರತೈಃ ॥
ನಮೋ ನಾರಾಯಣಾಯೇತಿ ಮಂತ್ರಸ್ಸರ್ವಾರ್ಥ ಸಾಧಕಃ" ॥ ೫ ॥

ಎಂಬಂತೆ ಈ ಮೂಲ ಮಂತ್ರಕ್ಕೆ ಸಕಲ ಫಲಪ್ರದ ಶಕ್ತಿಯುಂಟೆಂದು ಅರಿತವರು ಹೇಳುತ್ತಾರೆ.

ಸವ್ಯಂಪಾದಂ ಪ್ರಸಾರ್ಯಶ್ರಿತದುರಿತಹರಂ ದಕ್ಷಿಣಂ ಕುಂಚಯಿತ್ವಾ
ಜಾನುನ್ಯಾದಾಯ ಸವ್ಯೇತರಮಿತರಭುಜಂ ನಾಗಭೋಗೇನಿಧಾಯ ॥
ಪಶ್ಚಾದ್ಬಾಹುದ್ವಯೇನ ಪ್ರತಿಭಟಶಮನೇ ಧಾರಯನ್ ಶಂಖಚಕ್ರೇ
ದೇವೀ ಭೂಷಾದಿಜುಷ್ಟೋ ಜನಯತು ಜಗತಾಂ ಶರ್ಮವೈಕುಂಠನಾಥಃ ॥

ಆಶ್ರಿತರುಗಳ ಪಾಪನಾಶಕವಾದ ಎಡಪಾದವನ್ನು ನೀಡಿ ಬಲಪಾದವನ್ನು ಬಗ್ಗಿಸಿಕೊಂಡು ಬಲಮಂಡಿಯ ಮೇಲೆ ಬಲಹಸ್ತವನ್ನು ಇಟ್ಟು ಎಡಗೈಯನ್ನು ಮಹಾಶೇಷನಲ್ಲಿ ಊರಿ ಹಿಂಭಾಗದ ಹಸ್ತದ್ವಯಗಳಿಂದ ಶತ್ರುನಾಶಕಗಳಾದ ಶಂಖ ಚಕ್ರಗಳನ್ನು ಧರಿಸಿದವನಾಗಿ ಶ್ರೀ ಭೂದೇವಿಯರಿಂದಲೂ, ಆಭರಣಗಳಿಂದಲೂ ಸೇವಿತನಾದ ವೈಕುಂಠನಾಥನಾದ ನಾರಾಯಣನು ಜಗತ್ತಿಗೆ ಸುಖವನ್ನುಂಟು ಮಾಡಲಿ.

ಓಂ ನಮೋ ನಾರಾಯಣಾಯ–ಎಂಬೀ ಅಷ್ಟಾಕ್ಷರಗಳನ್ನು ಹೊಂದಿರುವುದೇ ಪ್ರಸಿದ್ಧವಾದ ಮೂಲಮಂತ್ರ. ಇದರಲ್ಲಿನ ಓಂ ಎಂಬ ಪ್ರಣವವು ಅಕಾರ, ಉಕಾರ, ಮಕಾರಗಳಿಂದ ಕೂಡಿದ್ದು ಅದನ್ನು ಹೀಗೆ ವಿವರಿಸಲಾಗಿದೆ.

ಪ್ರಣವವು ಸಕಲ ವೇದಗಳ ಸಾರಸಂಗ್ರಹವಾದುದು. ಸಕಲ ವೇದಶಾಸ್ತ್ರಗಳೂ ಅರ್ಥಪಂಚಕವನ್ನೇ ಪ್ರತಿಪಾದಿಸುವ ಪ್ರಯುಕ್ತ, ಅದರ ಸಂಗ್ರಹವಾದ ಮೂಲ ಮಂತ್ರದಲ್ಲಿಯೂ ಅರ್ಥಪಂಚಕವು ಪ್ರತಿಪಾದಿಸಲ್ಪಟ್ಟಿದೆ.

ಓಂಕಾರ ಪ್ರಭವಾ ವೇದಾಃ ಓಂಕಾರ ಪ್ರಭವಾಃ ಸ್ವರಾಃ ||
ಓಂಕಾರ ಪ್ರಭವಂ ಸರ್ವಂ ಜಗತ್‌ಸ್ಥಾವರ ಜಂಗಮಂ || ೧ ||

ಸಕಲವಾದ ವೇದಗಳೂ, ಸಕಲವಾದ ಸ್ವರಗಳೂ, ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೂ, ಓಂಕಾರದಿಂದಲೇ ಉತ್ಪನ್ನವಾದುವು.

ಅಕಾರೋ ವಿಷ್ಣುರಿತ್ಯುಕ್ತೋ ಮಕಾರೋ ಜೀವವಾಚಕಃ ||
ತಯೋಸ್ತು ನಿತ್ಯ ಸಂಬಂಧಃ ಉಕಾರೇಣ ಪ್ರಕೀರ್ತಿತಃ || ೨ ||
ಅಕಾರಾರ್ಥೋ ವಿಷ್ಣುರ್ಜಗದುದಯ ರಕ್ಷಾ ಪ್ರಲಯಕೃತ್
ಮಕಾರಾರ್ಥೋ ಜೀವಸ್ತದುಪಕರಣಂ ವೈಷ್ಣವಮಿದಂ ||
ಉಕಾರೋಽನನ್ಯಾರ್ಹಂ ನಿಯಮಯತಿ ಸಂಬಂಧಮನಯೋಃ
ತ್ರಯೀಸಾರಸ್ತ್ರ್ಯಾತ್ಮಾ ಪ್ರಣವ ಇಮಮರ್ಥಂ ಸಮದಿಶತ್ || ೩ ||

ಜಗತ್ತಿನ ಉತ್ಪತ್ತಿ, ರಕ್ಷಣ, ನಾಶಗಳಿಗೆಲ್ಲ ಕಾರಣಭೂತನಾದ ವಿಷ್ಣುವು ಅಕಾರ ವಾಚ್ಯನು ; ನಿತ್ಯ, ಮುಕ್ತ, ಬದ್ಧರೆಂಬ ತ್ರಿವಿಧ ಚೇತನವರ್ಗವೂ ಮಕಾರವಾಚ್ಯವು ; ಮಕಾರ ಶಬ್ದನಾದ ಜೀವನೂ, ಜೀವಾತ್ಮನಿಗೆ ಶೇಷಭೂತವಾದ ಶುದ್ಧ ಸತ್ವ, ಮಿಶ್ರ ತತ್ತ್ವ, ಸತ್ವ ಶೂನ್ಯ ಎಂಬ ಭೇದದಿಂದ ಮೂರು ಪ್ರಕಾರವಾದ ಅಚೇತನವೂ ವಿಷ್ಣುವಿಗೇ ಶೇಷಭೂತವಾದುದು ; ಅಕಾರ, ಮಕಾರ ವಾಚ್ಯನಾದ ಪರಮಾತ್ಮ ಜೀವಾತ್ಮರುಗಳ ಸಂಬಂಧವು ಅನನ್ಯಾರ್ಹವೆಂದು ಉಕಾರವು ಹೇಳುತ್ತದೆ.

ಅಕಾರೇಣೋಚ್ಯತೇ ವಿಷ್ಣುಸ್ಸರ್ವಲೋಕೇಶ್ವರೋ ಹರಿಃ |
ಉದ್ಧೃತಾವಿಷ್ಣುನಾಲಕ್ಷ್ಮೀರುಕಾರೇಣೋಚ್ಯತೇ ಸದಾ ||
ಮಕಾರಸ್ತು ತಯೋರ್ದಾಸ ಇತಿ ಪ್ರಣವಲಕ್ಷಣಂ || ೪ ||
ಅಕಾರಶ್ಚಿತ್ಸ್ವರೂಪಸ್ಯ ವಿಷ್ಣೋರ್ವಾಚಕ ಇಷ್ಯತೇ ||
ಉಕಾರಶ್ಚಿತ್ಸ್ವರೂಪಾಯಾ ಶ್ರಿಯೋ ವಾಚೀ ತಥಾವಿದುಃ ||
ಮಕಾರಸ್ತು ತಯೋರ್ವಿಪ್ರ ಶ್ರೀನಾರಾಯಣಯೋಸ್ಸದಾ
ಆತ್ಮನಶ್ಶೇಷ ಭೂತಸ್ಯ ವಾಚಕ ಶ್ಶ್ರುತಿಚೋದಿತಃ || ೫ ||
ಲಕ್ಷ್ಮ್ಯಾ ಸಹಹೃಷಿಕೇಶೋ ದೇವ್ಯಾ ಕಾರುಣ್ಯ ರೂಪಯಾ |
ರಕ್ಷಕಸ್ಸರ್ವ ಸಿದ್ಧಾಂತೇ ವೇದಾಂತೇಷು ಹಿ ಗೀಯತೇ || ೬ ||
ಪಿತಾಚರಕ್ಷಕಶ್ಶೇಷೀ ಭರ್ತಾಜ್ಞೇಯೋ ರಮಾಪತಿಃ ||
ಸ್ವಾಮ್ಯಾಧಾರೋ ಮಮಾತ್ಮಾಚ ಭೋಕ್ತಾಚಾದ್ಯ ಸಮಾಹಿತಃ || ೭ ||

ಮುಖ್ಯವಾಗಿ ಸರ್ವಲೋಕನಿಯಾಮಕನಾದ ವಿಷ್ಣುವೇ ಅಕಾರಾರ್ಥವು, ಲಕ್ಷ್ಮಿಯೇ ಉಕಾರಾರ್ಥವು, ಲಕ್ಷ್ಮೀನಾರಾಯಣರುಗಳಿಗೆ ದಾಸನಾದ ಜೀವಾತ್ಮನೇ ಮಕಾರ ಶಬ್ದಾರ್ಥವು.

ಅಕಾರವು ಪಿತಾಪುತ್ರ, ರಕ್ಷ್ಯರಕ್ಷಕ, ಶೇಷ ಶೇಷಿ ಸಂಬಂಧ ದ್ಯೋತಕವು ; ಉಕಾರವು ಭರ್ತೃಭಾರ್ಯಾ ಸಂಬಂಧವನ್ನು ಸೂಚಿಸುತ್ತದೆ ; ಮಕಾರದಿಂದ ಜ್ಞಾತೃಜ್ಞೇಯ ಸಂಬಂಧವೂ, ನಮಸ್ ಶಬ್ದದಿಂದ ಸ್ವಸ್ವಾಮಿ ಸಂಬಂಧವೂ, ನಾರ ಶಬ್ದದಿಂದ ಶರೀರಿ ಶರೀರ ಸಂಬಂಧವೂ,ಅಯನಶಬ್ದದಿಂದ ಆಧಾರಾಧೇಯ ಸಂಬಂಧವೂ, ಆಯಶಬ್ದದಿಂದ ಭೋಕ್ತೃಭೋಗ್ಯ ಸಂಬಂಧವೂ ಸೂಚಿತವಾಗಿದೆ.

ಹೀಗೆ ಈ ತಿರುಮಂತ್ರದಲ್ಲಿ ಈಶ್ವರ-ಚೇತನರ ಮಧ್ಯೆ ಇರುವ ನವವಿಧ ಸಂಬಂಧಗಳೂ ವ್ಯಕ್ತಪಡಿಸಲ್ಪಟ್ಟಿವೆ. ಆದುದರಿಂದಲೇ ಇದು ಮುಮುಕ್ಷುವಿಗೆ ನಿತ್ಯಾನುಸಂಧೇಯವಾದುದು.

ಒಟ್ಟಿನಲ್ಲಿ ಈ ಮಂತ್ರದಲ್ಲಿನ ಓಂ, ನಮಃ, ನಾರಾಯಣಾಯ ಎಂಬ ಮೂರು ಶಬ್ದಗಳಲ್ಲಿ, ಪ್ರಣವದಲ್ಲಿ ಶೇಷತ್ವ, ನಮಶ್ಶಬ್ದದಲ್ಲಿ ಪಾರತಂತ್ರ್ಯ, ನಾರಾಯಣಾಯ ಶಬ್ದದಲ್ಲಿ ಕೈಂಕರ್ಯ ಎಂಬ ಮೂರು ಪ್ರಧಾನ ಅರ್ಥಗಳು ಸೂಚಿಸಲ್ಪಟ್ಟಿವೆ. ಭಗವಂತನಿಗೆ ಅಧೀನವಾಗಿರುವುದು ಪಾರತಂತ್ರ್ಯ, ಶೇಷತ್ವ; ಭಗವದ್ಭಾಗವತರಿಗೆ ಸೇವೆ ಮಾಡುತ್ತ, ಗಂಧ, ಹೂ, ಕರ್ಪೂರ, ಮರಗಳಂತೆ, ಮಧುರ, ನಿಸ್ವಾರ್ಥ ಜೀವನ ನಡೆಸುವುದು ಕೈಂಕರ್ಯ.

ಜೀವಾತ್ಮನು ಸ್ವತಂತ್ರನಲ್ಲ, ನಾರಾಯಣನಿಗೆ ಶೇಷಭೂತನು. ಜೀವಾತ್ಮನಿಗೆ ಭಗವಂತನೇ ರಕ್ಷಕನು. ಸರ್ವಶೇಷಿಯಾದ ನಾರಾಯಣನಿಗಾಗಿಯೇ ಸಕಲವಿಧ ಕೈಂಕರ್ಯಗಳೂ ಮಾಡಲ್ಪಡಬೇಕೇ ಹೊರತು ಸ್ವಾರ್ಥಕ್ಕಾಗಿ, ತನ್ನ ಭೋಗಕ್ಕಾಗಿ ಮಾಡಬಾರದು.

ಆದುದರಿಂದ ನಾನು ವಿಷ್ಣುವಿಗೇ ಶೇಷಭೂತ, ಸ್ವತಂತ್ರನಲ್ಲ ; ನನಗೆ ಭಗವಂತನೇ ರಕ್ಷಕ, ನಾನಲ್ಲ ; ನಾನು ಸರ್ವಶೇಷಿಯಾದ ನಾರಾಯಣನಿಗೇ ಸರ್ವವಿಧ ಕೈಂಕರ್ಯ ಮಾಡುತ್ತೇನೆ, ನನ್ನ ಸ್ವಾರ್ಥಕ್ಕಾಗಿ ಅಲ್ಲ—ಎಂದು ಯಾವಾಗಲೂ ಹೇಳುತ್ತಿರಬೇಕು.

ಸಕಲಕ್ಕೂ ಕಾರಣಭೂತ, ಸರ್ವಶೇಷಿ, ಸರ್ವರಕ್ಷಕ, ಸರ್ವರಿಗೂ ಮೋಕ್ಷದಾಯಕ, ಲಕ್ಷ್ಮೀಸಹಿತ, ಆದ ಶ್ರೀಮನ್ನಾರಾಯಣನಿಗೆ ಮಾತ್ರ ಸೇವಕನಾದ ನಾನು, ನನ್ನದೆಂಬ ಸ್ವಾರ್ಥದಿಂದ ವಿಮುಕ್ತನಾದವನು. ಸರ್ವಸ್ವಾಮಿಯಾದ ಶ್ರೀಮನ್ನಾರಾಯಣನಿಗೆ ಅನವರತವೂ ಸಕಲ ಸೇವೆಗಳನ್ನು ಸಲ್ಲಿಸುವಂತಹ ಸೌಭಾಗ್ಯ ಎನಗೆ ಒದಗಲಿ—ಎಂಬುದೇ ಈ ಮೂಲ ಮಂತ್ರದ ತಿರುಳು.

---

## 2. ದ್ವಯಮಂತ್ರ

ನಾಮೈಕಂಚ ಶ್ರೀಯಾಯುಕ್ತಂ ಭಕ್ತಿಯುಕ್ತೋ ನರೋತ್ತಮಃ ||
ದ್ವಯೇನ ಮಂತ್ರ ರತ್ನೇನ ಮತ್ಪ್ರಿಯೇಣ ಭಜೇತ್ ಸದಾ || ೧ ||
ಅಚಿರಾನ್ಮತ್ಪ್ರಸಾದೇನ ಮಲ್ಲೋಕಂಚ ನ ಗಚ್ಛತಿ ||
ದುರ್ವೃತ್ತೋವಾ ಸುವೃತ್ತೋವಾ ಮೂರ್ಖಃ ಪಂಡಿತ ಏವವಾ || ೨ ||
ಮಲ್ಲೋಕ ಮಚಿರಾಲ್ಲಬ್ಧ್ವಾ ಮತ್ಸಾಯುಜ್ಯಂನ ಗಚ್ಛತಿ ||

ಲಕ್ಷ್ಮೀವಿಶಿಷ್ಟನಾದ ನನ್ನೊಬ್ಬನನ್ನು ಭಕ್ತಿಯಿಂದ ಯಾವ ಮನುಷ್ಯನು, ಮಂತ್ರರತ್ನವೆಂಬುದಾಗಿ ಪ್ರಸಿದ್ಧವಾದ, ನನಗೆ ಇಷ್ಟವಾದ, ದ್ವಯಮಂತ್ರದಿಂದ ಶರಣು ಹೊಂದುವನೋ, ಅಂತಹವನು ಈ ಲೋಕದಲ್ಲಿ ಪುನಃ ಹುಟ್ಟದೆ ನನ್ನ ಅನುಗ್ರಹದಿಂದ ವೈಕುಂಠವೆಂಬ ನನ್ನ ಲೋಕವನ್ನು ಹೊಂದುತ್ತಾನೆ.

ದೇವಶ್ರೇಷ್ಠರಿಗೂ ನಾಯಕನಾದ, ಲಕ್ಷ್ಮೀಪತಿಯಾದ ನನ್ನನ್ನು ದ್ವಯಮಂತ್ರದಿಂದ ಶರಣು ಹೊಂದಿದವನು ಯೋಗ್ಯನಾಗಲೀ, ಅಯೋಗ್ಯನಾಗಲೀ, ಮೂರ್ಖನಾಗಲೀ, ವಿದ್ವಾಂಸನಾಗಲೀ, ತಾರತಮ್ಯವಿಲ್ಲದೆ, ಪರಮಪದದಲ್ಲಿ ಮೋಕ್ಷ ಸಾಮ್ರಾಜ್ಯವನ್ನು ಹೊಂದುತ್ತಾನೆ.

ಕ್ಷೀರಾಂಭೋನಿಧಿ ರತ್ನಮಂಟಪ ಮಹಾಸೌವರ್ಣ ಸಿಂಹಾಸನೇ
ವಾಮಾಂಕೇ ಸ್ಥಿತಯಾ ಪ್ರಸನ್ನವದನಂ ಶ್ರೀಕಾಂತಯಾಲಿಂಗಿತಂ ||
ದೋರ್ದಂಡಾಂಕಿತ ಶಂಖ ಪಂಕಜಗದಾ ಚಕ್ರೈರುದಾರಶ್ರಿಯಂ
ತ್ವಾಂ ನಿತ್ಯಂ ಕಲಯಾಮಿ ಜನ್ಮ ವಿಮುಖೋ ಲಕ್ಷ್ಮೀಶ ನಾರಾಯಣ ||

ಕ್ಷೀರಸಮುದ್ರ ಮಧ್ಯವರ್ತಿಯಾದ ರತ್ನಮಂಟಪದಲ್ಲಿ, ಸ್ವರ್ಣ ಸಿಂಹಾಸನಾರೂಢನಾಗಿ, ಎಡತೊಡೆಯಲ್ಲಿ ಕುಳಿತಿರುವ ಲಕ್ಷ್ಮೀದೇವಿಯಿಂದ ಆಲಿಂಗಿತನಾಗಿ, ಆ ಕಾರಣದಿಂದ ನಿರ್ಮಲವಾದ ಮುಖಮಂಡಲವುಳ್ಳವನಾಗಿಯೂ, ಬಾಹುದಂಡಗಳಲ್ಲಿ ಪ್ರಕಾಶಿಸುತ್ತಿರುವ ಶಂಖ, ಗದಾ, ಕಮಲ, ಚಕ್ರಾದಿಗಳಿಂದ ಅಧಿಕವಾಗಿ ಪ್ರಕಾಶಿಸುವನಾಗಿಯೂ ಇರುವ ನಿನ್ನನ್ನು, ಎಲೈ ಶ್ರಿಯಃ ಪತಿಯಾದ ನಾರಾಯಣನೇ ಮತ್ತೆ ಜನ್ಮಜರಾಮರಣಗಳಿಲ್ಲದ ನಾನು ಧ್ಯಾನಮಾಡುತ್ತಿದ್ದೇನೆ.

ಈಶಾನಾಂ ಜಗತಾಮಧೀಶ ದಯಿತಾಂ ನಿತ್ಯಾನ ಪಾಯಾಂ ಶ್ರಿಯಂ
ಸಂಶಿತ್ಯಾಶ್ರಯಣೋಚಿತಾಖಿಲಗುಣಸ್ಯಾಂಘ್ರೀಹರೇರಾಶ್ರಯೇ ||
ಇಷ್ಟೋಪಾಯತಯಾ ಶ್ರಿಯಾಚಸಹಿತಾಯಾತ್ಮೇಶ್ವರಾಯಾರ್ಥಯೇ
ಕರ್ತುಂದಾಸ್ಯ ಮಶೇಷ ಮಪ್ರತಿಹತಂ ನಿತ್ಯಂತ್ವಹಂ ನಿರ್ಮಮಃ ||

ಜಗತ್ತಿಗೆ ನಾಯಕಿಯಾಗಿಯೂ, ಸರ್ವೇಶ್ವರನಿಗೆ ಇಷ್ಟಳಾದ ವಲ್ಲಭೆಯಾಗಿಯೂ, ಸರ್ವೇಶ್ವರನೊಂದಿಗೆ ನಿತ್ಯಸಂಬಂಧವುಳ್ಳವಳಾಗಿಯೂ ಇರುವ ಲಕ್ಷ್ಮಿಯನ್ನು ಶರಣು ಹೊಂದಿ, ಸಕಲ ಕಲ್ಯಾಣ ಗುಣಪರಿಪೂರ್ಣನಾದ ನಾರಾಯಣನ ಪಾದಗಳನ್ನು ಇಷ್ಟಸಾಧನಕ್ಕಾಗಿ ಆಶ್ರಯಿಸುವೆನು. ಲಕ್ಷ್ಮೀಸಹಿತನಾದ, ಸರ್ವಶೇಷಿಯಾದ, ನಾರಾಯಣನಿಗೆ ನಾನು, ಅಹಂಕಾರ–ಮಮಕಾರಗಳಿಲ್ಲದವನಾಗಿ ಸಕಲ ಕೈಂಕರ್ಯಗಳನ್ನೂ ನಿರ್ವಿಘ್ನವಾಗಿ ಮಾಡಲು ಅಪೇಕ್ಷಿಸುವೆಪು.

ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ
ಶ್ರೀಮತೇ ನಾರಾಯಣಾಯ ನಮಃ ।

ಆರು ಪದ, ಎರಡು ಖಂಡಗಳಿಂದ ಕೂಡಿದ ಇದು ದ್ವಯಮಂತ್ರವೆನಿಸುತ್ತದೆ. ತನ್ನದೆಂಬುದು ಏನೂ ಇಲ್ಲ ಎಂಬ ನಿರಹಂಕಾರ ಭಾವದಿಂದ ಕೂಡಿದ್ದು, ದೇವರನ್ನು ಬಿಟ್ಟರೆ ಬೇರೆ ಗತಿಯಿಲ್ಲ ಎಂಬುದಾಗಿ ಸ್ವಾಮಿಯಲ್ಲಿ ಅತ್ಯಂತ ವಿನಯ ಹಾಗೂ ದೈನ್ಯತೆಗಳಿಂದ ಇರುವುದು, ದ್ವಯಮಂತ್ರದ ಉಪದೇಶ ಪಡೆದವನ ಲಕ್ಷಣವಾಗಿರುತ್ತದೆ. ಜಗನ್ಮಾತೆಯಾದ ಶ್ರೀಮಹಾಲಕ್ಷ್ಮಿಯ ಕಟಾಕ್ಷ ಅಥವಾ ಮಧ್ಯಸ್ಥಿಕೆಯಿಂದ ಮಾತ್ರ ಗುರಿಯನ್ನು ಮುಟ್ಟುವುದು ಸಾಧ್ಯ ಎಂಬುದನ್ನು ಈ ಮಂತ್ರವು ತಿಳಿಸುತ್ತದೆ.

ಮಹಾಲಕ್ಷ್ಮಿಯನ್ನು ಪುರುಷಕಾರತ್ವೇನ ಆಶ್ರಯಿಸಿ, ಅವಳಿಂದ ನಿತ್ಯಸಂಶ್ಲೇಷವುಳ್ಳ, ಸಕಲ ಕಲ್ಯಾಣಗುಣ ಪೂರ್ಣನಾದ ಭಗವಂತನ ಪಾದಗಳನ್ನು ಉಪಾಯವಾಗಿ ಹೊಂದುವೆನು. ಪ್ರಾಪ್ಯಭೂತೆಯಾದ ಲಕ್ಷ್ಮಿಯಿಂದ ನಿತ್ಯಸಂಬಂಧವುಳ್ಳ, ಸರ್ವಶೇಷಿಯಾದ ನಾರಾಯಣನಿಗೆ ಸರ್ವವಿಧ ಕೈಂಕರ್ಯವನ್ನೂ ಮಾಡುತ್ತೇನೆ. ನನಗೋಸ್ಕರ ಏನೂ ಮಾಡುವುದಿಲ್ಲ-ಎಂಬುದನ್ನೂ ಈ ಮಂತ್ರವು ತಿಳಿಸುತ್ತದೆ.

ಪ್ರಗತಿ, ಐಶ್ವರ್ಯ, ಆತ್ಮಪ್ರಶಂಸೆ ಮೊದಲಾದ ಲೌಕಿಕ ಸ್ವಾರ್ಥ ಸುಖಗಳ ಸಾಂಸಾರಿಕ ಸಂಬಂಧಗಳನ್ನೆಲ್ಲ ಬದಿಗೊತ್ತಿ, ಸ್ವಾಮಿಯೇ ಸಾಧನ, ಅನನ್ಯ ರಕ್ಷಕ, ಎಂದು ನಂಬಿ, ಎಂದಿಗೂ ಗುರಿ ತಪ್ಪುವುದಿಲ್ಲ ಎಂಬ ದೃಢ ನಂಬಿಕೆಯಿಂದ ಅವಿಚ್ಛಿನ್ನವಾಗಿ ಅವನೆಡೆಗೆ ಸಾಗುತ್ತ, ಸದಾಸೇವಾತತ್ಪರನಾಗಿ, ನಾರಾಯಣನಿಗೆ ಕೈಂಕರ್ಯ ಮಾಡುತ್ತ, ಮಂತ್ರವನ್ನು ಧ್ಯಾನಿಸುತ್ತ, ಭಗವಂತನ ಜ್ಞಾನವನ್ನು ಪಡೆದಿರುವ ಪರಮ ಭಾಗವತರ ಸತ್ಸಂಗದಲ್ಲಿದ್ದು, ಸಂತುಷ್ಟಿ–ವೈರಾಗ್ಯಗಳಿಂದ ಜೀವಿಸುವುದು, ಶ್ರೀವೈಷ್ಣವ ದೀಕ್ಷೆಯನ್ನು ಹೊಂದಿದವನ ಅನಿವಾರ್ಯ ಆವಶ್ಯಕತೆಗಳು.

---

## 3. ಚರಮಶ್ಲೋಕಮಂತ್ರ

ವೇದೇಷು ಪೌರುಷಂ ಸೂಕ್ತಂ ಪುರಾಣೇಷು ಚ ವೈಷ್ಣವಂ ||
ಭಾರತೇ ಭಗವದ್ಗೀತಾ ಧರ್ಮಶಾಸ್ತ್ರೇಷು ಮಾನವಂ || ೧ ||

ವೇದಗಳಲ್ಲಿ ಪುರುಷಸೂಕ್ತ, ಪುರಾಣಗಳಲ್ಲಿ ವಿಷ್ಣುಪುರಾಣ, ಧರ್ಮಶಾಸ್ತ್ರ ಗಳಲ್ಲಿ ಮನುಸ್ಮೃತಿ, ಹೇಗೆ ಶ್ರೇಷ್ಠವೋ ಹಾಗೆ ಮಹಾಭಾರತದಲ್ಲಿ ಭಗವದ್ಗೀತೆಯು ಶ್ರೇಷ್ಠವಾದುದು.

ಸದುಷ್ಕರೇಣ ಶೋಚೇದ್ಯೋ ಯೇನಯೇನೇಷ್ಟ ಹೇತುನಾ ||
ಸಸತಸ್ಯಾಹಮೇವೇತಿ ಚರಮಶ್ಲೋಕ ಸಂಗ್ರಹಃ || ೨ ||

ಹೊಂದಲು ಅಸಾಧ್ಯವಾದ ಯಾವಯಾವ ಇಷ್ಟಾರ್ಥ ಹೇತುಗಳಿಂದ, ಯಾವ ಮನುಷ್ಯನು ಶೋಕಿಸುವನೋ, ಆ ಮನುಷ್ಯನಿಗೆ ಆಯಾ ಇಷ್ಟಾರ್ಥ ಹೇತುವು ಪರಮಾತ್ಮನೇ ಎಂಬುದು ಈ ಶ್ಲೋಕದ ತಾತ್ಪರ್ಯ. ಗೀತಾಶಾಸ್ತ್ರದಲ್ಲಿ ಚರಮ ಶ್ಲೋಕವು ಸರ್ವಫಲ ಸಾಧಕವೆಂಬುದು ಆಚಾರ್ಯರ ಅಭಿಪ್ರಾಯ.

ನಿಶ್ಚಿತ್ಯತ್ವದಧೀನತಾಮಯಿ ಸದಾಕರ್ಮಾದ್ಯುಪಾಯಾನ್ ಹರೇ
ಕರ್ತುಂತ್ಯಕ್ತು ಮಪಿಪ್ರಪತ್ತುಮನಲಂ ಸೀದಾಮಿ ದುಃಖಾಕುಲಃ ||
ಏತದ್ ಜ್ಞಾನ ಮುಪೇಯುಷೋಮಮಪುನಸ್ಸರ್ವಾಪರಾಧಕ್ಷಯಂ
ಕರ್ತಾಸೀತಿದೃಢೋಽಸ್ಮಿತೇತು ಚರಮಂ ವಾಕ್ಯಂಸ್ಮರನ್ ಸಾರಥೇಃ || ೩ ||

ಆಶ್ರಿತರ ಪಾಪನಾಶಕನಾದ ಹರಿಯೇ, ನನ್ನಲ್ಲಿ ಸರ್ವಕಾಲದಲ್ಲಿಯೂ ನಿನಗೆ ಅಧೀನವಾದ ಸ್ವರೂಪಸ್ಥಿತಿ ಪ್ರವೃತ್ತಿಯನ್ನು ನಿಶ್ಚಯಿಸಿ, ಕರ್ಮ-ಜ್ಞಾನ-ಭಕ್ತಿ ಯೋಗಗಳೆಂಬ ಉಪಾಯಗಳನ್ನು ಮಾಡಲು ಸಮರ್ಥನಲ್ಲವಾಗಿ ಶೋಕದಿಂದ ನಾನು ಕೃಶನಾಗಿದ್ದೇನೆ. ವಾತ್ಸಲ್ಯದಿಂದ ಅರ್ಜುನನಿಗೆ ಸಾರಥಿಯಾದ ಪರಮಾತ್ಮನಾದ ನಿನ್ನ ಚರಮ ಶ್ಲೋಕಾರ್ಥವನ್ನು ಮಾಡುವುದರ ಫಲವಾಗಿ, ಭಗವದೇಕೋಪಾಯತ್ವ ಜ್ಞಾನವನ್ನು ನಿನ್ನ ಅನುಗ್ರಹದಿಂದ ಹೊಂದಿರುವ ಅಜ್ಞ, ಅಶಕ್ತ, ಆಗಿರುವ ನನ್ನ ಸಕಲವಾದ ಅಪರಾಧಗಳ ನಾಶವನ್ನೂ ಮಾಡುತ್ತೀಯೆ ಎಂದು ದೃಢವಾಗಿ ನಂಬಿ ಧೈರ್ಯವಾಗಿದ್ದೇನೆ.

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ||
ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚ || ೪ ||

ಭಗವದ್ಗೀತೆಯ ಅಂತ್ಯಸಂದೇಶವೆನಿಸಿದ ಈ ಎರಡು ಸಾಲುಗಳು ಚರಮ ಶ್ಲೋಕ ಅಥವಾ ಶರಣಾಗತಿ ಮಂತ್ರ ಎನಿಸಿಕೊಳ್ಳುತ್ತದೆ.

ಅನುಷ್ಠಿಸಲ್ಪಡತಕ್ಕ ನಿತ್ಯನೈಮಿತ್ತಿಕಾದಿ ಸಕಲ ಕರ್ಮಗಳಲ್ಲಿಯೂ (ಅಂದರೆ ಕರ್ಮ, ಜ್ಞಾನ, ಭಕ್ತಿಯೋಗಗಳನ್ನು ಮೋಕ್ಷಸಾಧನ ಬುದ್ಧಿಯಿಂದ ಮಾಡದೆ), ಆಶ್ರಯಿಸಲು ಸೌಕರ್ಯವನ್ನುಂಟುಮಾಡುವ ವಾತ್ಸಲ್ಯ, ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯ ಆದಿಗುಣಶಾಲಿಯಾದ ನನ್ನನ್ನೇ ಶರಣು ಹೊಂದುವವನಾಗು. ಜ್ಞಾನ ಶಕ್ತ್ಯಾದಿ ಸಕಲಗುಣಪೂರ್ಣನಾದ ನಾನು, ನನ್ನನ್ನೇ ಉಪಾಯತಯಾ ಆಶ್ರಿತನಾದ ನಿನ್ನನ್ನು, ಪ್ರಾಪ್ತಿ ಪ್ರತಿಬಂಧಕಗಳಾದ ಸಕಲ ಪಾಪಗಳ ದೆಸೆಯಿಂದಲೂ ಬಿಡಲ್ಪಟ್ಟ ವನನ್ನಾಗಿ ಮಾಡುವೆನು, ಶೋಕಿಸಬೇಡ—ಎಂಬುದಾಗಿ ಶ್ರೀಕೃಷ್ಣಪರಮಾತ್ಮನು ಮಾನವರಿಗೆ ಕೊಟ್ಟ ಭರವಸೆ ಈ ಮಂತ್ರದ ಸಾರ.

ಜ್ಞಾನ, ಕರ್ಮ, ಭಕ್ತಿಮಾರ್ಗಗಳನ್ನು ಅನುಸರಿಸಲು, ಸಾಧಕನಿಗೆ ಅರ್ಹತೆ ಯನ್ನು ನೀಡುವ ಶ್ರುತಿಸ್ಮೃತಿ ಪ್ರಣೀತವಾದ ಸಾಧನಗಳನ್ನು ತ್ಯಜಿಸಿ, ಜ್ಞಾನ ಶಕ್ತ್ಯಾದಿ ಸಕಲಗುಣಪೂರ್ಣನಾದ ಸ್ವಾಮಿಯೊಬ್ಬನೇ ಏಕೈಕ ಆಶ್ರಯವೆಂದು ತಿಳಿದು, ಅವನು ಸರ್ವರನ್ನೂ ರಕ್ಷಿಸುತ್ತಾನೆ ಎಂಬ ಮಹಾ ವಿಶ್ವಾಸದಿಂದ ಜೀವನು ಭರನ್ಯಾಸ ಮಾಡಿದರೆ ಅಥವಾ ಸಂಕುಚಿತವಲ್ಲದ ಸಂಪೂರ್ಣ ಮನೋಭಾವದಿಂದ ಸ್ವಾಮಿಗೆ ತನ್ನನ್ನು ತಾನು ಅರ್ಪಿತಮಾಡಿಕೊಂಡರೆ, ಇಚ್ಛಿತ ಫಲವು ಸಿಗುವುದರಲ್ಲಿ ಸಂದೇಹ ವಿಲ್ಲ ಎಂಬುದು ಈ ಮಂತ್ರದ ಸಾರ.

**27. ಬ್ರಹ್ಮ ಸಮರ್ಪಣ :** ಸಂಧ್ಯೋಪಾಸನೆಯ ಕೊನೆಯ ಅಂಗವಿದು. ತ್ರಿಕರಣಪೂರ್ವಕವಾಗಿ ಮಾಡಿದ ಸಂಧ್ಯಾವಂದನೆಯ ಸಕಲ ಕ್ರಿಯೆಗಳು, ಅವುಗಳ ಫಲ ಎಲ್ಲವನ್ನೂ ಸರ್ವೇಶ್ವರನಿಗೇ ಅರ್ಪಿಸಬೇಕು. ಇದನ್ನೇ ಈಶ್ವರಾರ್ಪಣ, ಬ್ರಹ್ಮಾರ್ಪಣ ಎನ್ನುತ್ತಾರೆ. ನಾನು, ನನ್ನದು ಎಂಬ ಅಹಂಕಾರ-ಮಮಕಾರ ಭಾವನೆಯು ತೊಲಗಿ ಎಲ್ಲವೂ ನೀನು, ನಿನ್ನದು ಎಂಬ ಪವಿತ್ರವಾದ ಪರಮಾತ್ಮ ಸಂಬಂಧವಾದ ಭಾವನೆಯು ಬೆಳೆದು. ಸರ್ವವೂ ಪರಮಾತ್ಮಮಯ ಎಂಬ ದಿವ್ಯ ಅನುಭವದ ಅವರ್ಣನೀಯ ಆನಂದವನ್ನು ಅನುಭವಿಸುವುದೇ ಸಂಧ್ಯಾವಂದನೆಯ ಮಹೋನ್ನತ ಗುರಿ.

ಯಸ್ಯಸ್ಮೃತ್ಯಾಚ ನಾಮೋಕ್ತ್ಯಾ ತಪೋಯಜ್ಞ ಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂಯಾತಿ ಸದ್ಯೋವಂದೇ ತಮಚ್ಯುತಂ ॥

(ಯಾವ ದೇವನ ಸ್ಮರಣೆ, ನಾಮೋಚ್ಚಾರಣೆಗಳಿಂದ ತಪಸ್ಸು, ಸಂಧ್ಯಾಕರ್ಮ ಮುಂತಾದುವುಗಳಲ್ಲಿ ಕಡಮೆಯಾದ ಅಂಶವೆಲ್ಲ ಪೂರ್ಣವಾಗುವುದೋ ಅಂತಹ ಅಚ್ಯುತನನ್ನು ವಂದಿಸುವೆನು.)

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।
ಯದ್ಧುತಂತು ಮಯಾದೇವ ಪರಿಪೂರ್ಣಂ ತದಸ್ತುಮೇ ॥

ಸಂಧ್ಯಾವಂದನ ಕರ್ಮಣಿ ಮಧ್ಯೇ ಸಂಭಾವಿತ ಮಂತ್ರ ತಂತ್ರ ಸ್ವರವರ್ಣ ವಿಧಿ ವಿಪರ್ಯಾಸ ನ್ಯೂನಾತಿರಿಕ್ತ ಲೋಪದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಮಂತ್ರ ಜಪಂ ಕರಿಷ್ಯೇ ॥

(ನಾನು ಇಂದು ಮಾಡಿದ ಕರ್ಮದಲ್ಲಿ ಮಂತ್ರ, ತಂತ್ರ, ಸ್ವರ, ವರ್ಣ, ಕ್ರಿಯೆ, ಇತ್ಯಾದಿಗಳಲ್ಲಿ ನ್ಯೂನತೆ ಇರಬಹುದು. ಭಕ್ತಿ-ಶ್ರದ್ಧೆಗಳಲ್ಲಿ ಕೊರತೆ ಇರಬಹುದು. ಆದರೆ ನಾನು ಯಾವುದನ್ನು ಮಾಡಿದ್ದೇನೆಯೋ ಅದನ್ನು ಪರಿಪೂರ್ಣವೆಂದು ಭಾವಿಸಿಕೊ. ಇನ್ನೂ ಹೆಚ್ಚಿನ ತನ್ಮಯತೆಯನ್ನು ನನ್ನಲ್ಲಿ ಉಂಟುಮಾಡು. ಕ್ರಿಯೆಯನ್ನು ಪರಿಪೂರ್ಣವಾಗಿ ಮಾಡುವ ಶಕ್ತಿಯನ್ನು ನನಗೆ ಕೊಡು. ಪ್ರಾಯಶ್ಚಿತ ರೂಪವಾಗಿ ಮೂರು ಹೆಸರನ್ನು ಜಪಿಸುತ್ತೇನೆ.)

ಎಂದು ಹೇಳಿ ಓಂ ಅಚ್ಯುತಾಯ ನಮಃ, ಅನಂತಾಯ ನಮಃ, ಗೋವಿಂದಾಯ ನಮಃ ಎಂದು ಹೇಳಿ ಕೈನಲ್ಲಿ ನೀರು ಬಿಡಬೇಕು.

ಕಾಯೇನವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮ ನಾವಾ ಪ್ರಕೃತೇ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾ ಯೇತಿ ಸಮರ್ಪಯಾಮಿ ॥

(ಪ್ರಕೃತಿಯ ಸ್ವಭಾವದ ದೆಸೆಯಿಂದಾಗಲೀ, ದೇಹ, ಮಾತು, ಮನಸ್ಸು, ಇಂದ್ರಿಯ. ಬುದ್ಧಿ, ಆತ್ಮಗಳಿಂದಾಗಲೀ, ಯಾವಯಾವುದನ್ನು ಮಾಡುತ್ತೇನೆಯೋ ಅವುಗಳೆಲ್ಲವನ್ನೂ ಸರ್ವಶ್ರೇಷ್ಠನೂ, ಪರಮ ಪುರುಷನೂ ಆದ ನಾರಾಯಣನಿಗೇ ಸಮರ್ಪಣೆ ಮಾಡುತ್ತೇನೆ.)

ಸರ್ವಂ ಶ್ರೀ ಕೃಷ್ಣಾರ್ಪಣಮಸ್ತು

ಸಂಧ್ಯಾವಂದನಂ ಸಂಪೂರ್ಣಂ

## V. ಭಗವದಾರಾಧನೆ

1. ಸ್ನಾನಮಾಡಿ, ಶುಭ್ರವಾದ ವಸ್ತ್ರವನ್ನು ಧರಿಸಿ, ಊರ್ಧ್ವಪುಂಡ್ರವನ್ನು ಧರಿಸಿ, ಸಂಧ್ಯಾವಂದನೆಯನ್ನು ಮಾಡಿ, ಸ್ತೋತ್ರಗಳನ್ನು ಪಠಿಸಿದ ನಂತರ ಉತ್ತರೀಯವನ್ನು ಸೊಂಟಕ್ಕೆ ಕಟ್ಟಿ, ಪೂಜಾಗೃಹದ ಮುಂಭಾಗದಲ್ಲಿ ನಿಂತು, 'ಚಂಡಾದಿ ದ್ವಾರಪಾಲೇಭ್ಯೋ ನಮಃ' ಎಂದು ಭಗವಂತನ ದ್ವಾರಪಾಲಕರಿಗೆ ಎರಡು ನಲ ನಾಷ್ಟಾಂಗ ಪ್ರಣಾಮ ಮಾಡಿ, ಕೈಗಳನ್ನು ಮುಗಿದುಕೊಂಡು ಈ ಶ್ಲೋಕಗಳನ್ನು ಹೇಳಬೇಕು.

ಕೂರ್ಮಾದೀನ್ ದಿವ್ಯಲೋಕಂತದನುಮಣಿಮಯಂ ಮಂಟಪಂತತ್ರಶೇಷಂ
ತಸ್ಮಿನ್ ಧರ್ಮಾದಿಪೀಠಂ ತದುಪರಿಕಮಲಂ ಚಾಮರ ಗ್ರಾಹಿಣೀಶ್ಚ ||
ವಿಷ್ಣುಂ ದೇವೀ ರ್ವಿಭೂಷಾಯುಧಗಣಮುರಗಂ ಪಾದುಕೇ ವೈನತೇಯಂ
ಸೇನೇಶಂ ದ್ವಾರಪಾಲಾನ್ ಕುಮುದಮುಖಗಣಾನ್ ವಿಷ್ಣು ಭಕ್ತಾನ್
ಪ್ರಪದ್ಯೇ ||

ನಮೋ ನಮೋ ವಾಙ್ಮನಸಾತಿ ಭೂಮಯೇ
ನಮೋ ನಮೋ ವಾಙ್ಮನ ಸೈಕ ಭೂಮಯೇ |
ನಮೋ ನಮೋಽನಂತ ಮಹಾ ವಿಭೂತಯೇ
ನಮೋ ನಮೋಽನಂತ ದಯೈಕ ಸಿಂಧವೇ ||

ನಧರ್ಮನಿಷ್ಠೋಽಸ್ಮಿ ನಚಾತ್ಮವೇದೀ | ನಭಕ್ತಿಮಾಂಸ್ತ್ವಚ್ಚರಣಾರವಿಂದೇ||
ಅಕಿಂಚನೋಽ ನನ್ಯಗತಿಶ್ಶರಣ್ಯ | ತ್ವತ್ಪಾದಮೂಲಂ ಶರಣಂ ಪ್ರಪದ್ಯೇ ||

ಅಪರಾಧಸಹಸ್ರಭಾಜನಂ | ಪತಿತಂ ಭೀಮ ಭವಾರ್ಣವೋದರೇ ||
ಅಗತಿಂ ಶರಣಾಗತಂ ಹರೇ | ಕೃಪಯಾ ಕೇವಲ ಮಾತ್ಮ ಸಾತ್ಕುರು ||

ಅಮರ್ಯಾದಃ ಕ್ಷುದ್ರಶ್ಚಲಮತಿರಸೂಯಾ ಪ್ರಸವಭೂಃ
ಕೃತಘ್ನೋ ದುರ್ಮಾನೀಸ್ಮರಪರವಶೋ ವಂಚನ ಪರಃ ||
ನೃಶಂಸಃ ಪಾಪಿಷ್ಠಃ ಕಥಮಹಮಿತೋ ದುಃಖ ಜಲಧೇ
ರಪಾರಾ ದುತ್ತೀರ್ಣಸ್ತವ ಪರಿಚರೇಯಂ ಚರಣಯೋಃ ||

ಹೀಗೆ ಪ್ರಾರ್ಥಿಸುತ್ತ, ದೇವಗೃಹ ಪ್ರವೇಶಕ್ಕೆ ಅನುಜ್ಞೆ ಸಿಕ್ಕಿತೆಂದು ಭಾವಿಸಿ, ಬಲ ಗಾಲನ್ನು ಮುಂದಿಟ್ಟುಕೊಂಡು ಪೂಜಾಗೃಹವನ್ನು ಪ್ರವೇಶಿಸಿ, ಘಂಟಾನಾದವನ್ನು ಮಾಡಬೇಕು.

2\. ಕೌಸಲ್ಯಾ ಸುಪ್ರಜಾರಾಮ ಪೂರ್ವಾಸಂಧ್ಯಾ ಪ್ರವರ್ತತೇ |
ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ ||
ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ |
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು ||

ಎಂದು ಹೇಳುತ್ತ ಭಗವಂತನನ್ನು ಎಬ್ಬಿಸಬೇಕು.

3\. ಯಂ ಎಂದು ಬಲ ಅಂಗೈಯಲ್ಲಿ ಬರೆದು, ವಾಯವೇ ನಮಃ ಶೋಷಯಾಮಿ ಎಂದು ಪೂರ್ಣ ಕುಂಭದಲ್ಲಿ ಕೈಯನ್ನು ತೋರಿಸಿ ಶೋಷಣ ಮಾಡಿದಂತೆ ಭಾವಿಸಬೇಕು; ರಂ ಎಂದು ಬಲ ಅಂಗೈಯಲ್ಲಿ ಬರೆದು, ಅಗ್ನಯೇ ನಮಃ ದಾಹಯಾಮಿ

ಎಂದು ತೀರ್ಥದಲ್ಲಿ ತೋರಿಸಿ ದಾಹನ ಮಾಡಿದಂತೆ ಭಾವಿಸಬೇಕು; ವಂ ಎಂದು ಎಡ ಅಂಗೈಯಲ್ಲಿ ಬರೆದು, ಅಮೃತಾಯ ನಮಃ ಪ್ಲಾವಯಾಮಿ ಎಂದು ತೀರ್ಥದಲ್ಲಿ ತೋರಿಸಿ ಪ್ಲಾವನ ಮಾಡಿದಂತೆ ಭಾವಿಸಬೇಕು.

ವೀರ್ಯಾಯ ಅಸ್ತ್ರಾಯ ಫಟ್ ಎಂದು ಅಸ್ತ್ರ ಮಂತ್ರದಿಂದ ದಿಗ್ಬಂಧನ ಮಾಡಿ ಸುರಭಿ ಮುದ್ರೆಯನ್ನು ಕುಂಭದಲ್ಲಿ ತೋರಿಸಬೇಕು.

4. ಓಂ ಭೂರ್ಭುವಸ್ಸುವಃ ಎಂದು ಹೇಳಿ ಯಾಗಭೂಮಿಯನ್ನು ಪ್ರೋಕ್ಷಿಸಿ,
'ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ ।
ಯೇ ಭೂತಾ ವಿಘ್ನಕರ್ತಾರಃ ತೇಗಚ್ಛಂತ್ವಾಜ್ಞಯಾ ಹರೇಃ ॥

ಎಂದು ಹೇಳುತ್ತ ಮೂರು ಸಲ ಚಪ್ಪಾಳೆಯನ್ನು ತಟ್ಟಿ, ಮಂದಾಸನದ ಬಾಗಿಲನ್ನು ತೆಗೆದು ಹೂಗಳನ್ನು ಹಾಕಬೇಕು.

5. ಅವಕಾಶವಿದ್ದಲ್ಲಿ ತಿರುಪ್ಪಲ್ಲಾಂಡು, ತಿರುಪ್ಪಳ್ಳಿಯೆಳುಚ್ಚಿ, ತಿರುಪ್ಪಾವೈ, ಕಣ್ಣಿನುಣ್ ಶಿರುತ್ತಾಂಬು, ವೆಂಕಟೇಶ ಸುಪ್ರಭಾತ, ಯದುಗಿರೀಶ ಸುಪ್ರಭಾತ, ಲಕ್ಷ್ಮೀನೃಸಿಂಹ ಸುಪ್ರಭಾತ–ಇವುಗಳಲ್ಲಿ ಒಂದೊಂದು ದಿನ ಒಂದೊಂದನ್ನು ಅನುಸಂಧಾನ ಮಾಡಬಹುದು.

6. ಆಸನ ಮಂತ್ರಸ್ಯ ಪೃಥಿವ್ಯಾಮೇರು ಪೃಷ್ಠ ಋಷಿಃ ಸುತಲಚ್ಛಂದಃ,
ಶ್ರೀ ಕೂರ್ಮೋ ದೇವತಾ ಆಸನೇ ವಿನಿಯೋಗಃ ॥
ಪೃಥ್ವಿತ್ವಯಾ ಧೃತಾಲೋಕಾದೇವಿತ್ವಂ ವಿಷ್ಣುನಾಧೃತಾ ।
ತ್ವಂಚಧಾರಯ ಮಾಂ ದೇವಿ ಪವಿತ್ರಂ ಕುರುಚಾಸನಂ ॥

ಎಂದು ಹೇಳಿ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತುಕೊಳ್ಳಬೇಕು.

7. ಗುರುಪರಂಪರೆಯನ್ನು ಧ್ಯಾನಿಸಬೇಕು.

8. ಅಷ್ಟಾಕ್ಷರ, ದ್ವಯ ಮಂತ್ರಗಳನ್ನು ಹತ್ತು ಬಾರಿ ಜಪಿಸಿ, ನ್ಯಾಸದಶಕ, ಚತುಶ್ಲೋಕಿಗಳನ್ನು ಹೇಳುತ್ತ ಗಂಧವನ್ನು ತೇಯಬೇಕು.

9. ಹಿಂದಿನ ದಿವಸ ದೇವರಿಗೆ ಅರ್ಪಿಸಿದ ಹೂವು, ತುಲಸಿ ಮುಂತಾದ ಶೇಷ ಪ್ರಸಾದಗಳನ್ನು ಕಣ್ಣಿಗೆ ಒತ್ತಿಕೊಂಡು, ಶಿರಸ್ಸಿನಲ್ಲಿ ಧರಿಸಿ, ವಿಸರ್ಜಿಸಬೇಕು.

10. ಮೂರು ಬಾರಿ ಪ್ರಾಣಾಯಾಮ ಮಾಡಿ.
ಓಂ ತತ್ಸತ್ ಕೃತಂಚ ಕರಿಷ್ಯಾಮಿ ಭಗವನ್ನಿತ್ಯೇನ ಭಗವತ್ಪ್ರೀತ್ಯರ್ಥೇನ ಮಹಾ ವಿಭೂತಿ ಚಾತುರಾತ್ಮ್ಯ ಭಗವದ್ವಾಸುದೇವ ಪಾದಾರವಿಂದಾರ್ಚನೇನ ಇಜ್ಯಯಾ ಭಗವತಃ ಕರ್ಮಣಾ ಭಗವಂತಂ ಅರ್ಚಯಿಷ್ಯಾಮಿ—ಎಂದು ಸಂಕಲ್ಪ ಮಾಡಬೇಕು.

11. ಭಗವಾನೇವಸ್ವನಿಯಾಮ್ಯ ಸ್ವರೂಪ ಸ್ಥಿತಿ ಪ್ರವೃತ್ತಿ ಸ್ವಶೇಷ ತೈಕರಸೇನ ಅನೇನಾತ್ಮನಾ ಸ್ವಕೀಯೈಶ್ಚ ದೇಹೇಂದ್ರಿಯಾಂತಃಕರಣೈಃ ಸ್ವಕೀಯ ಕಲ್ಯಾಣ ತಮ ದ್ರವ್ಯಮಯಾ ನಿಜಾಪಚಾರಿಕ ಸಾಂಸ್ಪರ್ಶಿಕಾ ಭ್ಯವಹಾರಿಕಾದಿ ಸಮಸ್ತ ಭೋಗಾನತಿ ಪ್ರಭೂತಾನತಿ ಪ್ರಿಯತಮಾನತಿ ಸಮಗ್ರಾನತ್ಯಂತ ಭಕ್ತಿಕೃತಾ ನಖಿಲ ಪರಿಜನ ಪರಿಚ್ಛದಾನ್ವಿತಾಯ ಸ್ವಸ್ಮೈಸ್ವಪ್ರೀತಯೇ ಸ್ವಯಮೇವ ಪ್ರತಿಪಾದಯಿತು ಮುಪಕ್ರಮತೇ॥ ಎಂದು ಹೇಳಿ ಸಾತ್ವಿಕ ತ್ಯಾಗ ಮಾಡ ಬೇಕು.

12. ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂಗತೋಪಿವಾ ।
ಯಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾ ಭ್ಯಂತರ ಶ್ಶುಚಿಃ ॥
ಎಂದು ಹೇಳಿ ಮಾನಸಿಕ ಸ್ನಾನ ಮಾಡಬೇಕು.

13. 'ಏವಂ ಭಗವಂತಂ ನಾರಾಯಣಂ, ದೇವೀಭೂಷಣಾಯುಧ ಪರಿಜನ ಪರಿಚ್ಛದ ದ್ವಾರಪಾಲ ಪರಿಷದೈಸ್ಸೇವ್ಯಮಾನಂ, ಸ್ವಾಧೀನ ತ್ರಿವಿಧ ಚೇತನಾ ಚೇತನ ಸ್ವರೂಪಸ್ಥಿತಿ ಪ್ರವೃತ್ತಿಭೇದಂ, ಕ್ಲೇಶಕರ್ಮಾದ್ಯಶೇಷ ದೋಷಾ ಸಂಸ್ಪೃಷ್ಟಂ, ಸ್ವಾಭಾವಿಕಾನವಧಿಕಾತಿಶಯ ಜ್ಞಾನ ಬಲೈಶ್ವರ್ಯ ವೀರ್ಯ ಶಕ್ತಿತೇಜಃ ಪ್ರಭೃತ್ಯ ಸಂಖ್ಯೇಯ ಕಲ್ಯಾಣ ಗುಣಗಣೌಘ ಮಹಾರ್ಣವೌ" ಎಂದು ದಿವ್ಯಮಂಗಳ ವಿಗ್ರಹವಿಶಿಷ್ಟನಾದ, ಯೋಗಪೀಠದಲ್ಲಿ ಆದಿಶೇಷನ ಮಡಿಯಲ್ಲಿ, ಶ್ರೀ ಭೂ ನೀಳಾ ಸಮೇತನಾಗಿ ಅನಂತ ಗರುಡವಿಷ್ವಕ್ಸೇನ ಪರಿಜನ ಪರಿಚ್ಛ ದಾದಿಗಳಿಂದ ಕೂಡಿದ ಭಗವಂತನನ್ನು ಧ್ಯಾನಿಸಿ, ಪರಂಪರಾಗತ ಆಚಾರ್ಯ ರನ್ನು ಆವಾಹಿಸಬೇಕು.

14. 'ಸಮಸ್ತ ಪರಿವಾರಾಯ ಶ್ರೀಮತೇ ನಾರಾಯಣಾಯ ನಮಃ' ಎಂದು ಹೇಳಿ ಒಂದು ತುಳಸೀದಳ ಅಥವಾ ಪುಷ್ಪವನ್ನು ಸಮರ್ಪಿಸಿ ನಮಸ್ಕರಿಸಬೇಕು.

15. ಸೌವರ್ಣೇ ಸ್ಥಾಲಿವರ್ಯೇ ಮಣಿಗಣ ಖಚಿತೇ ಗೋಘೃತಾಕ್ತಾನ್ ಸುಪಕ್ವಾನ್ ಭಕ್ಷ್ಯಾನ್ ಭೋಜ್ಯಾಂಶ್ಚಲೇಹ್ಯಾನ್ ಪರಮಪಥಹ ವಿಶ್ಕೋಷ್ಯ ಮನ್ನಂ
ನಿಧಾಯ ॥

ನಾನಾಶಾಕೈರುಪೇತಂ ಸುದಧಿ ಮಧುಘೃತಂ ಕ್ಷೀರಪಾನೀಯ ಯುಕ್ತಂ,
ತಾಂಬೂಲಂ ಚಾತ್ಮನೇಸ್ಮೈ ಪ್ರತಿದಿವಸಮಹಂ ಮಾನಸಂ ಕಲ್ಪಯಾಮಿ ॥
ಭಗವನ್ ಪುಂಡರೀಕಾಕ್ಷ ಹೃದ್ಯಾಂಗತು ಮಯಾಕೃತಂ ।
ಆತ್ಮ ಸಾತ್ಕುರು ದೇವೇಶ ಬಾಹ್ಯೇತ್ವಾಂ ಸಮ್ಯ ಗರ್ಚಯೇ ॥
ಎಂದು ಹೇಳಿ ಪ್ರಾರ್ಥಿಸಬೇಕು.

16. ಪೂಜಾಪಾತ್ರೆ ಸಾಮಗ್ರಿಗಳನ್ನು ಈ ಕ್ರಮದಲ್ಲಿ ಇಟ್ಟುಕೊಳ್ಳಬೇಕು.

ದೇವರ ಸಂಪುಟ

| | | | | |
|---|---|---|---|---|
| | ●ದೀಪ | | ●ದೀಪ | |
| ●ತುಲಸಿ, ಹೂತಟ್ಟೆ ಬುಟ್ಟಿ | | | ●ತಿರುಕ್ಕಾವೇರಿ ಬಿಂದಿಗೆ (ಉದಕ ಕುಂಭ ಪಾತ್ರೆ) | |
| | ●2 ಪಾದ್ಯಪಾತ್ರೆ | ಪಶ್ಚಿಮ | ●3ಆಚಮನೀಯ ಪಾತ್ರೆ | |
| | ನೈರುತ್ಯ | | ವಾಯುವ್ಯ | |
| ●ಗಂಧದಬಟ್ಟಲು | ದಕ್ಷಿಣ | ●5 ಶುದ್ಧೋದಕ ಪಾತ್ರೆ | | ಉತ್ತರ |
| | ಆಗ್ನೇಯ | | ಈಶಾನ್ಯ | |
| | ●1 ಅರ್ಘ್ಯಪಾತ್ರೆ | ಪೂರ್ವ | ●4 ಸ್ನಾನೀಯ ಪಾತ್ರೆ | |
| | | | ●6ಪ್ರತಿಗ್ರಹ (ಸ್ನಪನ) ಪಾತ್ರೆ | |

17. ಉದಕ ಕುಂಭದಿಂದ ನೀರನ್ನು ಉದ್ಧರಣೆಯಲ್ಲಿ ತುಂಬಿ, ಅದರಲ್ಲಿ ತುಳಸಿಯನ್ನು ಇಟ್ಟು ಎಡಗೈಯಲ್ಲಿ ಹಿಡಿದು ಬಲಗೈನಿಂದ ಮುಚ್ಚಿ ಹೃದಯದ ಸಮಕ್ಕೆ ಹಿಡಿದು, 'ಓಂ ವಿರಜಾಯೈನಮಃ' ಎಂದು ಧ್ಯಾನಿಸುತ್ತ, ವಿರಜಾ ನದಿಯನ್ನು ಆವಾಹಿಸಿ, ಆ ನೀರಿನಿಂದ ಐದು ಪಾತ್ರೆಗಳಿಗೂ ಸ್ವಲ್ಪ ಹಾಕಿ, ಉಳಿದ ನೀರಿನಿಂದ ದೇವರ ಮನೆ, ಪೂಜಾದ್ರವ್ಯ, ಆರಾಧಕ ಎಲ್ಲದರ ಮೇಲೂ ಪ್ರತ್ಯೇಕವಾಗಿ ಪ್ರೋಕ್ಷಿಸಿಕೊಳ್ಳಬೇಕು.

ಏಳು ಸಲ ಅಷ್ಟಾಕ್ಷರ ಮಂತ್ರದಿಂದ ಕುಂಭತೀರ್ಥವನ್ನು ಅಭಿಮಂತ್ರಿಸಿ, "ಭಗವಾನ್ ಪವಿತ್ರಂ ವಾಸುದೇವಃ ಪವಿತ್ರಂ ಶತಧಾರಂ ಸಹಸ್ರಧಾರಂ ಅಪರಿಮಿತಧಾರಂ ಅಚ್ಛಿದ್ರಂ ಅರಿಷ್ಟಮಕ್ಷಯ್ಯಂ ಪರಮಂ ಪವಿತ್ರಂ ಭಗವಾನ್ ವಾಸುದೇವಃ ಪುನಾತು" ಎಂಬ ಪವಿತ್ರ ಮಂತ್ರದಿಂದ ಅಭಿಮಂತ್ರಿಸಬೇಕು.

ತೀರ್ಥವನ್ನು ಉದ್ಧರಣೆಯಿಂದ ತೆಗೆದುಕೊಂಡು ವೀರ್ಯಾಯಾಸ್ತ್ರಾಯ ಫಟ್ ಎಂದು ಹೇಳಿ, ಪಾತ್ರೆಗಳಲ್ಲಿ ಸೇರಿಸಿ ಪಾತ್ರಶೋಧನವನ್ನು ಮಾಡಿಕೊಂಡು, ಹಿಂದೆ ಹೇಳಿದಂತೆ ಶೋಷಣ, ದಾಹನ, ಪ್ಲಾವನಗಳನ್ನು ಮಾಡಿ, 'ಓಂ ಜ್ಞಾನಾಯ ಹೃದಯಾಯ ನಮಃ' ಎಂಬ ಮಂತ್ರವನ್ನು ಉಚ್ಚರಿಸಿ,

ಪ್ರತಿಯೊಂದು ಪಾತ್ರೆಯಲ್ಲೂ ಪೂರ್ಣಕುಂಭದಿಂದ ನೀರನ್ನು ತುಂಬಬೇಕು. ನಂತರ ಪ್ರತಿಪಾತ್ರೆಯನ್ನೂ ಅಷ್ಟಾಕ್ಷರ ಮಂತ್ರದಿಂದ ಏಳು ಸಲ ಮೇಲೆ ಹೇಳಿದ ಪವಿತ್ರ ಮಂತ್ರದಿಂದ ಅಭಿಮಂತ್ರಿಸಬೇಕು. ಪಾತ್ರೆಗಳನ್ನು ಹೂಗಳಿಂದ ಅಲಂಕರಿಸಬಹುದು. ಪಾತ್ರೆಗಳಲ್ಲಿ ತುಲಸಿ, ಗಂಧ, ಪಚ್ಚಕರ್ಪೂರ, ಏಲಕ್ಕಿ, ಕೇಸರಿಗಳನ್ನು ಹಾಕಬೇಕು.

18. ಓಂ ನಮೋ ನಾರಾಯಣಾಯ ಅರ್ಘ್ಯಂ ಪರಿಕಲ್ಪಯಾಮಿ, ಪಾದ್ಯಂ ಪರಿಕಲ್ಪಯಾಮಿ, ಆಚಮನೀಯಂ ಪರಿಕಲ್ಪಯಾಮಿ, ಸ್ನಾನೀಯಂ ಪರಿಕಲ್ಪಯಾಮಿ, ಸುಗಂಧ ಶುದ್ಧೋದಕಂ ಪರಿಕಲ್ಪಯಾಮಿ ಎಂದು ಸಂಕಲ್ಪಮಾಡಿ ಒಂದು ತುಳಸೀ ದಳವನ್ನು ತೆಗೆದುಕೊಂಡು ಮೂಲ, ದ್ವಯ ಮಂತ್ರಗಳನ್ನು ಹೇಳುತ್ತ ದೇವರ ಪಾದದಲ್ಲಿ ಸಮರ್ಪಿಸಬೇಕು. ಇನ್ನೊಂದು ತುಳಸೀ ದಳವನ್ನು ಸ್ನಾನೀಯ ಪಾತ್ರೆಯಲ್ಲಿ ಹಾಕಿ, ಬಲಗೈಯಿಂದ ಮುಚ್ಚಿ, ನಾಸಿಕಾ ಪರ್ಯಂತ ಎತ್ತಿ ಮೂಲ, ದ್ವಯ ಮಂತ್ರಗಳನ್ನು ಎಂಟು ಬಾರಿ ಜಪಿಸಿ, ಆ ದಳದಿಂದ ಎಲ್ಲವನ್ನೂ ಪ್ರೋಕ್ಷಿಸಿ, ಭಗವಂತಾ, ನನ್ನ ಪೂಜೆಯನ್ನು ಅಂಗೀಕರಿಸು, ಪೂಜೆ ಮಾಡುವ ಸಲುವಾಗಿ ಅನುಜ್ಞೆ ನೀಡು ಎಂದು ಕೇಳಿಕೊಳ್ಳಬೇಕು.

19. **1. ಮಂತ್ರಾಸನ**

ಇಜ್ಯಾಕಾಲಸ್ತೃತೀಯೋಽಯಂ ಅಹ್ನೋಂಽಶಸ್ಸಮುಪಾಗತಃ ।
ಸಂಭೃತಾಶ್ಚೈವ ಸಂಭಾರಾಃ ಕಲ್ಪಿತಾ ನ್ಯಾಸನಾನ್ಯಪಿ ॥
ಸ್ನಾನಾದ್ಯರ್ಥಾನಿದೇವೇಶ ತವೇಚ್ಛಾಪವರ್ತತೇಯದಿ ।
ಅವಲೋಕನದಾನೇನ ತತ್ಸರ್ವಂ ಸಫಲಂ ಕುರು ॥
ತದರ್ಥಂ ಸಹದೇವಿಭ್ಯಾಂ ನಾನುಗೈಸ್ಸಚಿವೈಸ್ಸಹ ।
ಮದನುಗ್ರಹಾಯಕೃಪಯಾಹ್ಯತ್ರಾಗಂತುಂ ತ್ವಮರ್ಹಸಿ ॥
ಯಾವದಾದ್ಯಾಸನಂ ಮಂತ್ರಾಸನಾಂತಂ ಪೂಜ್ಯಸೇಮಯಾ ।
ತಾವತ್ಸಾನ್ನಿಧ್ಯ ಮತ್ರೈವ ಕುರುಷ್ವ ಪುರುಷೋತ್ತಮ ॥

ಎಂದು ಪ್ರಾರ್ಥಿಸಿ,

ಓಂ ಮಂತ್ರಾಸನಾಯ ನಮಃ, ಮಂತ್ರಾಸನಂ ಅಲಂಕುರುಷ್ವ.— ಎಂದು ವಿಜ್ಞಾಪಿಸಿ, ತುಳಸಿ ಹೂಗಳನ್ನು ಸಮರ್ಪಿಸಿ, ಭಗವಂತನು ಮಂತ್ರಾಸನದಲ್ಲಿ ಬಂದು ಕುಳಿತಿರುವುದಾಗಿ ಭಾವಿಸಬೇಕು. ಘಂಟಾನಾದ ಪುರಸ್ಸರವಾಗಿ

a) ಭಗವನ್ ಮತ್ಪೂಜಾಂಪ್ರತಿಗೃಹ್ಣೀಷ್ವ, ಅರ್ಘ್ಯಂ ಅವಲೋಕಯ, ಅರ್ಘ್ಯಂ ಪ್ರತಿಗೃಹ್ಣೀಷ್ವ ಎಂದು ಪ್ರಾರ್ಥಿಸಿ, ಅರ್ಘ್ಯಪಾತ್ರೆಯಿಂದ ತೀರ್ಥ ವನ್ನು ಒಂದು ಬಾರಿ ಉದ್ಧರಣಿಯಿಂದ ತೆಗೆದು 'ಓಂ ನಮೋ ನಾರಾಯ ಣಾಯ ಅರ್ಘ್ಯಂ ಸಮರ್ಪಯಾಮಿ' ಎಂದು ಹೇಳುತ್ತ, ಅರ್ಘ್ಯವನ್ನು ಭಗವಂತನ ಕೈಯಲ್ಲಿ ಸಮರ್ಪಿಸಿದುದಾಗಿ ಭಾವಿಸಿ, ಪ್ರತಿಗ್ರಹ ಪಾತ್ರೆ ಯಲ್ಲಿ ಸೇರಿಸಬೇಕು.

ಅಕೃತ್ರಿಮ ಪ್ರೇಮರಸನಿರ್ಭರೈ ಸ್ತ್ವತ್ಕರಾಂಬುಜೈಃ ।
ಶುದ್ಧೈಸ್ಸ್ವಭಾವ ಸುಭಗೈಸ್ಸುಖ ಸ್ಪರ್ಶೈಸ್ಸುಗಂದಿಭಿಃ ॥
ಸಂವಾಹ್ಯ ಮಾನಮನಿಶಂ ಶೇಷಶೇಷಾಶನಾದಿಭಿಃ ।
ಅನತ್ಯಸ್ಯಾತಿನೀಚಸ್ಯ ಭಕ್ತಿ ಹೀನಸ್ಯ ದುರ್ಮತೇಃ ॥
ಮಮಾಪಿಕರಯೋರದ್ಯ ಸ್ವಯೈವ ಕೃಪಯಾಹರೇ ।
ನಿಧೇಹಿ ಚರಣ ದ್ವಂದ್ವ ಸ್ತ್ವಾಮಸ್ಮಿ ಶರಣಂ ಗತಂ ॥
ಎಂದು ಪ್ರಾರ್ಥಿಸಬೇಕು.

b) ಭಗವನ್ ಇದಂ ಪಾದ್ಯಂ ಪ್ರತಿಗೃಹ್ಣೀಷ್ವ,
ಓಂ ನಮೋ ನಾರಾಯಣಾಯಪಾದ್ಯಂ ಸಮರ್ಪಯಾಮಿ,

ಎಂದು ಹೇಳುತ್ತ, ಪಾದ್ಯ ಪಾತ್ರೆಯಲ್ಲಿನ ತೀರ್ಥವನ್ನು ಎರಡು ಸಲ ಉದ್ಧರಣಿಯಿಂದ ತೆಗೆದು, ಭಗವಂತನ ಪಾದಗಳನ್ನು ತೊಳೆದುದಾಗಿ ಭಾವಿಸಿ ಪ್ರತಿಗ್ರಹ ಪಾತ್ರೆಯಲ್ಲಿ ಸೇರಿಸಬೇಕು. ಆಮೇಲೆ ಶುದ್ಧೋದಕ ವನ್ನು ತೋರಿಸಿ ಸೇರಿಸಬೇಕು.

c) ಭಗವನ್ ಇದಂ ಆಚಮನೀಯಂ ಪ್ರತಿಗೃಹ್ಣೀಷ್ವ, ಓಂ ನಮೋ ನಾರಾಯಣಾಯ ಆಚಮನೀಯಂ ಸಮರ್ಪಯಾಮಿ, ಎಂದು ಹೇಳುತ್ತ ಆಚಮನೀಯ ಪಾತ್ರೆಯಲ್ಲಿನ ತೀರ್ಥವನ್ನು ಮೂರು ಸಲ ಉದ್ಧರಣಿ ಯಿಂದ ತೆಗೆದು, ಭಗವಂತನ ಮುಖದಲ್ಲಿ ತೋರಿಸಿ, ಅವನು ಸ್ವೀಕರಿ ಸಿದನೆಂದು ಭಾವಿಸಿ, ಪ್ರತಿಗ್ರಹ ಪಾತ್ರೆಯಲ್ಲಿ ಸೇರಿಸಬೇಕು. ಆಮೇಲೆ ಶುದ್ಧೋದಕವನ್ನು ತೋರಿಸಿ ಸೇರಿಸಬೇಕು.
ಆತ್ಮಾತ್ಮೀಯಂ ಸರ್ವಂ ಭಗವನ್ ನಿತ್ಯ ಕಿಂಕರತ್ವಾಯ ಸ್ವೀಕುರು, ಎಂದು ಪ್ರಾರ್ಥಿಸಬೇಕು.

ನಂತರ ಘಂಟಾನಾದ ಪುರಸ್ಸರವಾಗಿ 'ಭಗವತಿ ಮತ್ಪೂಜಾಂ ಪ್ರತಿ ಗೃಹ್ಣೀಷ್ವ, ಅರ್ಘ್ಯಂ ಅವಲೋಕಯ–ಅರ್ಘ್ಯಂ ಪ್ರತಿಗೃಹ್ಣೀಷ್ವ,

ಪಾದ್ಯಂ ಅವಲೋಕಯ, ಪಾದ್ಯಂ ಪ್ರತಿಗೃಹ್ಣೀಷ್ವ ಆಚಮನೀಯಂ ಅವಲೋಕಯ, ಆಚಮನೀಯಂ ಪ್ರತಿಗೃಹ್ಣೀಷ್ವ ಎಂದು ಪ್ರಾರ್ಥಿಸಿ, ಶ್ರೀಂ ಶ್ರಿಯೈ ನಮಃ, ಭೂಮಿ ನೀಳಾಭ್ಯಾಂ ನಮಃ ಎಂದು ಹೇಳುತ್ತ ಒಂದು ಸಲ ಅರ್ಘ್ಯಪಾತ್ರೆಯಿಂದ, ಎರಡು ಸಲ ಪಾದ್ಯಪಾತ್ರೆಯಿಂದ, ಮೂರು ಸಲ ಆಚಮನೀಯ ಪಾತ್ರೆಯಿಂದ ಉದ್ಧರಣೆಯಲ್ಲಿ ತೀರ್ಥವನ್ನು ತೆಗೆದುಕೊಂಡು, ಸಮರ್ಪಯಾಮಿ ಎಂದು ಹೇಳುತ್ತ ತೋರಿಸಿ, ಪ್ರತಿಗ್ರಹ ಪಾತ್ರೆಯಲ್ಲಿ ಸೇರಿಸಬೇಕು.

ಶುದ್ಧ ವಸ್ತ್ರದಿಂದ ಭಗವಂತ, ಮಹಾಲಕ್ಷ್ಮಿ, ಭೂದೇವಿ, ನೀಳಾದೇವಿ ಎಲ್ಲರ ಮುಖಕಮಲಗಳನ್ನೂ, ಪಾದಾರವಿಂದಗಳನ್ನೂ, ಒರೆಸಬೇಕು.

## 20. 2. ಸ್ನಾನಾಸನ

ಸ್ನಾನಕಾಲಸ್ತ್ವಯಂ ಪ್ರಾಪ್ತಸ್ತ್ವವೇಚ್ಛಾಪ್ರವರ್ತತೇಯದಿ ।
ಅಭ್ಯಂಜಯಿತ್ವಾ ದೇವೇಶ ಸುಸ್ನಾನಂ ಕರ್ತುಮರ್ಹಸಿ ॥
ಸ್ಫಟೀಕೃತಂ ಮಯಾದೇವ ಸ್ನಾನಾಸನಮಿದಂ ಮಹತ್ ।
ಆಸಾದಯಾಶು ಸ್ನಾನಾರ್ಥಂ ಮದನುಗ್ರಹ ಕಾಮ್ಯಯಾ ॥
ಓಂ ಸ್ನಾನಾಸನಾಯ ನಮಃ, ಸ್ನಾನಾಸನಂ ಅಲಂಕುರುಷ್ವ,

ಎಂದು ವಿಜ್ಞಾಪಿಸಬೇಕು. ಒಂದು ತುಳಸಿ ಅಥವಾ ಪುಷ್ಪದಿಂದ ಸ್ನಾನಾಸನ ವನ್ನು ಕಲ್ಪಿಸಿ, ಅಲ್ಲಿ ಭಗವಂತನು ಪಾದುಕೆಗಳನ್ನು ಧರಿಸಿ ಕುಳಿತಿರುವಂತೆ ಭಾವಿಸಿ, ಧ್ಯಾನಿಸಬೇಕು.

ಹಿಂದಿನಂತೆ ಮೂಲಮಂತ್ರದೊಂದಿಗೆ ಅರ್ಘ್ಯಂ ಸಮರ್ಪಯಾಮಿ, ಪಾದ್ಯಂ ಸಮರ್ಪಯಾಮಿ, ಆಚಮನೀಯಂ ಸಮರ್ಪಯಾಮಿ ಎಂದು ಹೇಳುತ್ತ, ಆಯಾ ಪಾತ್ರೆಯಿಂದ ಕ್ರಮವಾಗಿ ಒಂದು, ಎರಡು, ಮೂರು ಸಲ ಉದ್ಧರಣೆಯಿಂದ ತೀರ್ಥವನ್ನು ತೆಗೆದು ತೋರಿಸಿ, ಪ್ರತಿಗ್ರಹ ಪಾತ್ರೆಯಲ್ಲಿ ಸೇರಿಸಬೇಕು.

ಮತ್ತೆ ಮೂಲ ಮಂತ್ರದೊಂದಿಗೆ ಪಾದಪೀಠಂ ಸಮರ್ಪಯಾಮಿ, ದಂತಕಾಷ್ಟಂ ಸಮರ್ಪಯಾಮಿ, ಜಿಹ್ವಾ ನಿರ್ಲೇಖನಂ ಸಮರ್ಪಯಾಮಿ, ಎಂದು ಹೇಳುತ್ತ ತುಳಸಿಯಿಂದ ಹಲ್ಲು ಉಜ್ಜಿ, ನಾಲಗೆಯನ್ನು ತಿಕ್ಕಿ, ಅನಂತರ ಶುದ್ಧೋದಕ ಪಾತ್ರೆಯ ತೀರ್ಥದಿಂದ ಗಂಡೂಷಂ ಸಮರ್ಪಯಾಮಿ, ಮುಖಪ್ರಕ್ಷಾಳನಂ ಸಮರ್ಪಯಾಮಿ, ಹಸ್ತ ಪ್ರಕ್ಷಾಳನಂ ಸಮರ್ಪಯಾಮಿ,

ಎಂದು ಹೇಳುತ್ತ, ತೀರ್ಥವನ್ನು ತೆಗೆದು ತೋರಿಸಿ, ಪ್ರತಿಗ್ರಹ ಪಾತ್ರೆಯಲ್ಲಿ ಸೇರಿಸಬೇಕು.

ಅನಂತರ ಮೂಲ ಮಂತ್ರೋಚ್ಚಾರಣದೊಂದಿಗೆ ಅರ್ಘ್ಯ, ಪಾದ್ಯ, ಆಚಮನೀಯಗಳನ್ನು, ಕ್ರಮವಾಗಿ ಸಮರ್ಪಿಸಬೇಕು.

ಆಮೇಲೆ ಸ್ನಾನಪೀಠವನ್ನು ಪ್ರೋಕ್ಷಿಸಿ, ಅದರಲ್ಲಿ ಸಾಲಿಗ್ರಾಮ ಅಥವಾ/ಮತ್ತು ಭಗವಂತನ ಮೂರ್ತಿಯನ್ನು ಬಿಜಯಮಾಡಿಸಿ, ಘಂಟಾನಾದ ಪುರಸ್ಸರವಾಗಿ ಸ್ನಾನೀಯ ಪಾತ್ರೆಯಿಂದ ಉದ್ಧರಣೆಯಲ್ಲಿ ತೀರ್ಥವನ್ನು ತೆಗೆದು ಕೊಂಡು ಅಷ್ಟಾಕ್ಷರ ಮಂತ್ರದಿಂದ ಅಭಿಷೇಕ ಮಾಡಬೇಕು. ಪುರುಷಸೂಕ್ತ, ಶ್ರೀಸೂಕ್ತ, ಭೂಸೂಕ್ತ, ನೀಳಾಸೂಕ್ತಗಳನ್ನು ಹೇಳುತ್ತ ಮತ್ತೆ ಶುದ್ಧೋ ದಕದಿಂದ ಅಭಿಷೇಕ ಮಾಡಬೇಕು.

ಒಣಗಿದ ಶುದ್ಧ ವಸ್ತ್ರದಿಂದ ಸಾಲಿಗ್ರಾಮ, ಮೂರ್ತಿಗಳನ್ನು ಒರೆಸಿ ಸ್ವಸ್ಥಾನದಲ್ಲಿ ಬಿಜಯಮಾಡಿಸಬೇಕು.

ವಸ್ತ್ರಾರ್ಥೇ, ಉತ್ತರೀಯಾರ್ಥೇ, ತುಳಸೀದಳಂ ಸಮರ್ಪಯಾಮಿ, ಎಂದು ಹೇಳಿ ತುಳಸೀದಳವನ್ನು ಸಮರ್ಪಿಸಿ ಮತ್ತೆ ಅರ್ಘ್ಯ, ಪಾದ್ಯ, ಆಚಮನೀಯಗಳನ್ನು ಸಮರ್ಪಿಸಬೇಕು.

21. **3. ಅಲಂಕಾರಾಸನ**

ದೇವದೇವ ಜಗನ್ನಾಥ ಭೂಷಾಸ್ರಕ್ಚಂದನಾದಿಕಂ ।
ಅಲಂಕಾರಾಸನಂಭದ್ರ ಮಧಿತಿಷ್ಠ ತೃತೀಯಕಂ ॥

ಓಂ ಅಲಂಕಾರಾಸನಾಯ ನಮಃ, ಅಲಂಕಾರಾಸನಂ ಅಲಂಕುರುಷ್ವ, ಎಂದು ಪ್ರಾರ್ಥಿಸಿ ಪುಷ್ಪವೊಂದನ್ನು ಸಮರ್ಪಿಸಿ, ಘಂಟಾನಾದ ಪುರಸ್ಸರವಾಗಿ ಅರ್ಘ್ಯ, ಪಾದ್ಯ, ಆಚಮನೀಯಗಳನ್ನು ಸಮರ್ಪಿಸಬೇಕು. ಮೂಲ ಮಂತ್ರೋಚ್ಚಾರಣೆಯೊಂದಿಗೆ ಉಪವೀತಂ ಸಮರ್ಪಯಾಮಿ, ಊರ್ಧ್ವ ಪುಂಡ್ರಾರ್ಥಂ ತುಲಸೀದಳಂ ಸಮರ್ಪಯಾಮಿ, ಎಂದು ಹೇಳಿ ತುಳಸೀದಳ ವನ್ನು ಸಮರ್ಪಿಸಬೇಕು.

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂಕರೀಷಿಣೀಂ ।
ಈಶ್ವರೀಗ್ಂ ಸರ್ವ ಭೂತಾನಾಂ ತ್ವಾಮಿ ಹೋಪಹ್ವಯೇ ಶ್ರಿಯಂ ॥
ಭಗವನ್ ಇದಂ ದಿವ್ಯ ಗಂಧಂ ಸಮರ್ಪಯಾಮಿ,

ಎಂದು ಹೇಳಿ, ಶ್ರೀ ಭೂ ನೀಳಾ ಸಮೇತನಾದ ಭಗವಂತನಿಗೆ ಗಂಧ ವನ್ನು ಹಚ್ಚಬೇಕು.

ಆಯನೇತೇ ಪರಾಯಣೇ ದೂರ್ವಾರೋಹಂತು ಪುಷ್ಪಿಣೀಃ ।
ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ॥
ತುಳಸೀದಳ, ಪುಷ್ಪಾಣಿ ಸಮರ್ಪಯಾಮಿ, ಎಂದು ಹೇಳಿ ತುಳಸಿ, ಹೂಗಳನ್ನು ಸಮರ್ಪಿಸಬೇಕು.

ಧೂರಸಿ ಧೂರ್ವ ಧೂರ್ವಂತಂ ಯೋಽಸ್ಮಾನ್ ಧೂರ್ವತಿ
ತಂಧೂರ್ವಯಂ ವಯಂ ಧೂರ್ವಾಮಸ್ತ್ವಂ ದೇವಾನಾಮಸಿ ॥
ಧೂಪಂ ಸಮರ್ಪಯಾಮಿ, ಎಂದು ಹೇಳುತ್ತ ಘಂಟಾನಾದ ಪೂರ್ವಕವಾಗಿ ಧೂಪವನ್ನು ಸಮರ್ಪಿಸಬೇಕು.

ಉದ್ದೀಪ್ಯಸ್ವ ಜಾತವೇದೋಽಪಘ್ನನ್ನಿರ್‌ಋತಿಂ ಮಮ ।
ಪಶೂಗ್‌ಂಶ್ಚಮಹ್ಯಮಾವಹ ಜೀವನಂಚ ದಿಶೋದಶ ॥
ದೀಪಂ ಸಮರ್ಪಯಾಮಿ, ಎಂದು ಹೇಳಿ ಆರತಿಯನ್ನು ತೋರಿಸಬೇಕು.

ಆಮೇಲೆ ಹೂ, ತುಳಸಿ ಇರುವ ತಟ್ಟೆಯನ್ನು ಕೈಯಲ್ಲಿ ಹಿಡಿದುಕೊಂಡು ಎದ್ದು ನಿಂತು, ಭಗವಂತನನ್ನು ಕುರಿತು **ಮಂತ್ರ ಪುಷ್ಪಂ** ಸಮರ್ಪಯಾಮಿ ಎಂದು ಹೇಳಿ, ಈ ಕೆಳಗಿನ ಮಂತ್ರ, ಶ್ಲೋಕಗಳಿಂದ ಅರ್ಚಿಸಬೇಕು.

1. ಅಗ್ನಿಮೀಡೇ ಪುರೋಹಿತಂ । ಯಜ್ಞಸ್ಯ ದೇವಮೃತ್ವಿಜಂ ।
ಹೋತಾರಂ ರತ್ನಧಾತಮಂ (ಋಗ್ವೇದ).
2. ಇಷೇತ್ವೋರ್ಜೇತ್ವಾ ವಾಯವಸ್ಥೋಽಪಾಯವಸ್ಥ ದೇವೋವಸ್ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣೇ (ಯಜುರ್ವೇದ)
3. ಅಗ್ನ ಆಯಾಹಿ ವೀತಯೇ ಗೃಣಾನೋ ಹವ್ಯದಾತಯೇ ।
ನಿಹೋತಾ ಸತ್ಸಿ ಬರ್ಹಿಷಿ ॥ (ಸಾಮವೇದ)
4. ಶಂ ನೋ ದೇವೀರಭಿಷ್ಟಯ ಆಪೋಭವಂತು ಪೀತಯೇ ಶಂಯೋ ರಭಿಸ್ರವಂತುನಃ । (ಅಥರ್ವಣವೇದ)
5. ಓಂ ಮಿತ್ಯಗ್ರೇವ್ಯಾಹರೇತ್ । ನಮ ಇತಿ ಪಶ್ಚಾತ್ ।
ನಾರಾಯಣಾಯೇತ್ಯುಪರಿಷ್ಟಾತ್ । ಓಮಿತ್ಯೇಕಾಕ್ಷರಂ ।
ನಮ ಇತಿದ್ವೇ ಅಕ್ಷರೇ। ನಾರಾಯಣಾಯೇತಿ ಪಂಚಾಕ್ಷರಾಣಿ।
ಏತದ್ವೈ ನಾರಾಯಣಸ್ಯಾಷ್ಟಾಕ್ಷರಂ ಪದಂ।
ಯೋಹವೈ ನಾರಾಯಣಸ್ಯಾಷ್ಟಾಕ್ಷರಂ ಪದಮಧ್ಯೇತಿ।
ಅನಪಬ್ರುವ ಸ್ಸರ್ವಮಾಯುರೇತಿ।
ವಿಂದತೇ ಪ್ರಾಜಾಪತ್ಯಂ ರಾಯಸ್ಪೋಷಂ ಗೌಪತ್ಯಂ।

ತತೋಽಮೃತತ್ವಮಶ್ನುತೇ ತತೋಽಮೃತತ್ವಮಶ್ನುತ ಇತಿ।
ಯ ಏವಂ ವೇದ । (ಇತ್ಯುಪನಿಷತ್) ।

6. ಇಚ್ಛಾಪಯೋಹಿಮಹಾಬಾಹುಂ ರಘುವೀರಂ ಮಹಾಬಲಂ ।
ಗಜೇನ ಮಹತಾಂ ಯಾಂತಂ ರಾಮಂ ಛತ್ರಾವೃತಾನನಂ ॥
ತಂದೃಷ್ಟ್ವಾ ಶತ್ರುಹಂತಾರಂ ಮಹರ್ಷೀಣಾಂ ಸುಖಾವಹಂ ।
ಬಭೂವ ಹೃಷ್ಟಾವೈದೇಹೀ ಭರ್ತಾರಂ ಪರಿಷಸ್ವಜೇ ॥ (ರಾಮಾಯಣ)

7. ಏಷ ನಾರಾಯಣ ಶ್ರೀಮಾನ್ ಕ್ಷೀರಾರ್ಣವನಿಕೇತನಃ ।
ನಾಗಪರ್ಯಂಕ ಮುತ್ಸೃಜ್ಯ ಹ್ಯಾಗತೋ ಮಧುರಾಂಪುರೀಂ ॥
ನಮಾಮಿ ಸರ್ವಲೋಕಾನಾಂ ಜನನೀ ಮಬ್ಧಿ ಸಂಭವಾಂ ।
ಶ್ರೀಯಮುನ್ನಿದ್ರ ಪದ್ಮಾಕ್ಷೀಂ ವಿಷ್ಣುವಕ್ಷಸ್ಥಲಸ್ಥಿತಾಂ ॥
ತಾಸಾಮಾವಿರಭೂಚ್ಛೌರಿಃ ಸ್ಮಯಮಾನ ಮುಖಾಂಬುಜಃ ।
ಪೀತಾಂಬರಧರ ಸ್ಸ್ರಗ್ವೀ ಸಾಕ್ಷಾನ್ಮನ್ಮಥ ಮನ್ಮಥಃ॥ (ಮಹಾಭಾರತ)

8. ಯತ್ರಯೋಗೇಶ್ವರಃ ಕೃಷ್ಣೋಯತ್ರಪಾರ್ಥೋ ಧನುರ್ಧರಃ ।
ತತ್ರ ಶ್ರೀ ರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥
(ಭಗವದ್ಗೀತೆ)

9. ವೈಕುಂಠೇತು ಪರೇಲೋಕೇ ಶ್ರಿಯಾಸಾರ್ಧಂ ಜಗತ್ಪತಿಃ ।
ಆಸ್ತೇ ವಿಷ್ಣು ರಚಿಂತ್ಯಾತ್ಮಾ ಭಕ್ತೈ ರ್ಭಾಗವತೈಸ್ಸಹ ॥

10. ಮಾಯಾಪೀ ಪರಮಾನಂದಃ ತ್ಯಕ್ತ್ವಾ ವೈಕುಂಠ ಮುತ್ತಮಂ ।
ಸ್ವಾಮಿ ಪುಷ್ಕರಿಣೀ ತೀರೇ ರಮಯಾ ಸಹಮೋದತೇ ॥

11. ವೈಕುಂಠವಾಸಿನಃ ಸರ್ವೇ ಶೇಷ ಶೇಷಾಶನಾದಯಃ ।
ತಿರ್ಯಕ್ ಸ್ಥಾವರ ಜನ್ಮಾನಿಶ್ರಯಂತೇ ಯದುಭೂಧರೇ ॥

12. ಕದಾಪುನಶ್ಶಂಖರಥಾಂಗಕಲ್ಪಕ
ಧ್ವಜಾರವಿಂದಾಂಕುಶ ವಜ್ರಲಾಂಛನಂ ।
ತ್ರಿವಿಕ್ರಮತ್ವಚ್ಚರಣಾಂಬುಜದ್ವಯಂ
ಮದೀಯ ಮೂರ್ಧಾನ ಮಲಂಕರಿಷ್ಯತಿ ॥ (ಸ್ತೋತ್ರರತ್ನ)

13. ಅಖಿಲಭುವನ ಜನ್ಮಸ್ಥೇಮಭಂಗಾದಿ ಲೀಲೇ
ವಿನತ ವಿವಿಧ ಭೂತವ್ರಾತ ರಕ್ಷೈಕ ದೀಕ್ಷೇ ॥

ಶ್ರುತಿ ಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ
ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ ॥ (ಶ್ರೀಭಾಷ್ಯ)

14. ಓಂ ಭಗವನ್ನಾರಾಯಣಾಭಿಮತಾನುರೂಪ ಸ್ವರೂಪರೂಪಗುಣ ವಿಭವೈಶ್ವರ್ಯ ಶೀಲಾದ್ಯನವಧಿಕಾತಿಶಯಾಸಂಖ್ಯೇಯ ಕಲ್ಯಾಣ ಗುಣಗಣಾಂ ಪದ್ಮವನಾಲಯಾಂ ಭಗವತೀಂ ಶ್ರಿಯಂದೇವೀಂ ನಿತ್ಯಾನಪಾಯಿನೀಂ ನಿರವದ್ಯಾಂ ದೇವದೇವದಿವ್ಯಮಹಿಷೀಂ ಅಖಿಲ ಜಗನ್ಮಾತರಂ ಅಸ್ಮನ್ಮಾತರಂ ಅಶರಣ್ಯ ಶರಣ್ಯಾಂ ಅನನ್ಯ ಶರಣಃ ಶರಣಮಹಂ ಪ್ರಪದ್ಯೇ ॥ (ಶರಣಾಗತಿಗದ್ಯ)

15. ಸ್ವಸ್ತಿ ಹಸ್ತಿಗಿರಿ ಮಸ್ತಶೇಖರಃ
ಸಂತನೋತುಮಯಿ ಸಂತತಂ ಹರಿಃ ।
ನಿಸ್ಸಮಾಭ್ಯಧಿಕ ಮಭ್ಯ ದತ್ತಯಂ
ದೇವಮೌಪನಿಷದೀ ಸರಸ್ವತೀ ॥

16. ಮಣಿವರ ಇವಶೌರೇಃ ನಿತ್ಯ ಹೃದ್ಯೋಪಿ ಜೀವಃ
ಕಲುಷ ಮತಿರವಿಂದ ನ್ಕಿಂಕರತ್ವಾಧಿ ರಾಜ್ಯಂ ॥
ವಿಧಿ ಪರಿಣತಿ ಭೇದಾ ದ್ವೀಕ್ಷಿತಸ್ತೇನಕಾಲೇ
ಗುರು ಪರಿಷದುಪಜ್ಞಂ ಪ್ರಾಪ್ಯ ಗೋಪಾಯತಿಸ್ವಂ ॥

17. ಉಲ್ಲಾಸ ಪಲ್ಲವಿತ ಪಾಲಿತ ಸಪ್ತಲೋಕೀ
ನಿರ್ವಾಹ ಕೋರಕಿತ ನೇಮ ಕಟಾಕ್ಷ ಲೀಲಾಂ ।
ಶ್ರೀರಂಗ ಹರ್ಮ್ಯತಲ ಮಂಗಳ ದೀಪರೇಖಾಂ
ಶ್ರೀರಂಗರಾಜಮಹಿಷೀಂ ಶ್ರಿಯಮಾಶ್ರಯಾಮಃ

(ಶ್ರೀಗುಣರತ್ನಕೋಶ)

18. ಕಲ್ಯಾಣಾನಾಮವಿಕಲನಿಧಿಃ ಕಾಪಿಕಾರುಣ್ಯಸೀಮಾ
ನಿತ್ಯಾಮೋದಾನಿಗಮವಚಸಾಂ ಮೌಳಿ ಮಂದಾರಮಾಲಾ ।
ಸಂಪದ್ದಿವ್ಯಾ ಮಧುವಿಜಯಿನಸ್ಸನ್ನಿಧತ್ತಾಂಸದಾಮೇ
ಸೈಷಾದೇವೀ ಸಕಲಭುವನ ಪ್ರಾರ್ಥನಾ ಕಾಮಧೇನುಃ ॥ (ಶ್ರೀಸ್ತುತಿ)

19. ಉಪವೀತಿನಮೂರ್ಧ್ವ ಪುಂಡ್ರವಂತಂ
ತ್ರಿಜಗತ್ಪುಣ್ಯಫಲಂ ತ್ರಿದಂಡ ಹಸ್ತಂ ।
ಶರಣಾಗತ ಸಾರ್ಥವಾಹಮೀಡೇ
ಶಿಖಯಾಶೇಖರಿಣಂ ಪತಿಂಯತೀನಾಂ ॥ (ಯತಿರಾಜಸಪ್ತತಿ)

20. ಕಾಲತ್ರಯೇಪಿ ಕರಣತ್ರಯ ನಿರ್ಮಿತಾತಿ
ಪಾಪಕ್ರಿಯಸ್ಯ ಶರಣಂ ಭಗವತ್ಕ್ಷಮೈವ ।
ಸಾಚತ್ವಯ್ಯೈವ ಕಮಲಾರಮಣೇರ್ಥಿತಾಯತ್
ಕ್ಷೇಮಸ್ಸಏವಹಿಯತೀಂದ್ರ ಭವಚ್ಛ್ರಿತಾನಾಂ॥ (ಯತಿರಾಜ ವಿಂಶತಿ)

ಈ ಕೆಳಗಿನ ಮಂತ್ರಗಳನ್ನು ಹೇಳುತ್ತ ಪುಷ್ಪವನ್ನು ಸಮರ್ಪಿಸಬೇಕು.

1) ಓಂ ನಮೋ ನಾರಾಯಣಾಯ ।
2) ಓಂ ನಮೋ ಭಗವತೇ ವಾಸುದೇವಾಯ ।
3) ಓಂ ನಮೋ ವಿಷ್ಣವೇ ।
4) ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ ।
ಶ್ರೀಮತೇನಾರಾಯಣಾಯ ನಮಃ ॥
5) ಓಂ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ।
6) ಓಂ ಮಹಾದೇವ್ಯೈ ಚವಿದ್ಮಹೇ ವಿಷ್ಣು ಪತ್ನ್ಯೈ ಚಧೀಮಹಿ ।
ತನ್ನೋ ಲಕ್ಷ್ಮೀಃ ಪ್ರಚೋದಯಾತ್ ।
7) ಓಂ ಕೇಶವಾಯನಮಃ, ನಾರಾಯಣಾಯ ನಮಃ, ಮಾಧವಾಯ ನಮಃ, ಗೋವಿಂದಾಯ ನಮಃ, ವಿಷ್ಣವೇ ನಮಃ, ಮಧುಸೂದನಾಯ ನಮಃ, ತ್ರಿವಿಕ್ರಮಾಯ ನಮಃ, ವಾಮನಾಯ ನಮಃ, ಶ್ರೀಧರಾಯ ನಮಃ, ಹೃಷೀಕೇಶಾಯ ನಮಃ, ಪದ್ಮನಾಭಾಯ ನಮಃ, ದಾಮೋದರಾಯ ನಮಃ॥
8) ಓಂ ಶ್ರಿಯೈ ನಮಃ, ಅಮೃತೋದ್ಭವಾಯೈ ನಮಃ, ಕಮಲಾಯೈ ನಮಃ, ಚಂದ್ರಶೋಭಿನ್ಯೈ ನಮಃ, ವಿಷ್ಣುಪತ್ನ್ಯೈ ನಮಃ, ವೈಷ್ಣವ್ಯೈ ನಮಃ, ವರಾರೋಹಾಯೈ ನಮಃ, ಹರಿವಲ್ಲಭಾಯೈ ನಮಃ, ಶಾಂರ್ಗಿಣ್ಯೈ ನಮಃ, ದೇವದೇವಿಕಾಯೈ ನಮಃ, ಲೋಕಸುಂದರ್ಯೈ ನಮಃ, ಮಹಾಲಕ್ಷ್ಮ್ಯೈ ನಮಃ, ಸರ್ವಾಭೀಷ್ಟಫಲಪ್ರದಾಯೈ ನಮಃ ॥
9) ಓಂ ಮತ್ಸ್ಯಾಯ ನಮಃ, ಕೂರ್ಮಾಯ ನಮಃ, ವರಾಹಾಯ ನಮಃ, ನಾರಸಿಂಹಾಯ ನಮಃ, ವಾಮನಾಯ ನಮಃ, ಭಾರ್ಗವರಾಮಾಯ ನಮಃ, ಶ್ರೀರಾಮಾಯ ನಮಃ, ಬಲರಾಮಾಯ ನಮಃ, ಶ್ರೀ ಕೃಷ್ಣಾಯ ನಮಃ, ಕಲ್ಕಿನೇ ನಮಃ ॥
10) ಓಂ ವಾಸುದೇವಾಯ ನಮಃ, ಸಂಕರ್ಷಣಾಯ ನಮಃ, ಪ್ರದ್ಯುಮ್ನಾಯ ನಮಃ, ಅನಿರುದ್ಧಾಯ ನಮಃ ॥

11) ಸಮಸ್ತ ಪರಿವಾರಾಯ ಶ್ರೀಮತೇ ನಾರಾಯಣಾಯ ಪರಬ್ರಹ್ಮಣೇ ನಮಃ॥

12) ಅವಕಾಶವಿದ್ದರೆ ಲಕ್ಷ್ಮೀನೃಸಿಂಹ, ರಂಗನಾಥ, ವರದರಾಜ, ಶ್ರೀರಾಮ, ಶ್ರೀಕೃಷ್ಣ, ವೇಂಕಟೇಶ, ಲಕ್ಷ್ಮೀ—ಅಷ್ಟೋತ್ತರಗಳಿಂದ ಅರ್ಚಿಸಬಹುದು.

ಓಂ ನಮೋ ನಾರಾಯಣಾಯ ಅರ್ಘ್ಯಂ, ಪಾದ್ಯಂ, ಆಚಮನೀಯಂ, ಶುದ್ಧೋದಕಂ ಸಮರ್ಪಯಾಮಿ.

ಶ್ರೀ ಭೂ ನೀಳಾ ಶಕ್ತಿ ತ್ರಯೇಭ್ಯೋ ಅರ್ಘ್ಯಂ, ಪಾದ್ಯಂ, ಆಚಮನೀಯಂ, ಶುದ್ಧೋದಕಂ ಸಮರ್ಪಯಾಮಿ. ಅನಂತ ಗರುಡ ವಿಷ್ವಕ್ಸೇನಾದಿಭ್ಯೋ ಅರ್ಘ್ಯಂ, ಪಾದ್ಯಂ, ಆಚಮನೀಯಂ, ಶುದ್ಧೋದಕಂ ಸಮರ್ಪಯಾಮಿ ಎಂದು ಹೇಳಿ ಸಮರ್ಪಿಸಬೇಕು.

22. 

## 4. ಭೋಜ್ಯಾಸನ

ಪ್ರಾಪ್ತಸ್ತು ಪ್ರಾಸಣೇಕಾಲೇ ಪತತ್ಯಾನೀತ ಏಷತೇ ।
ಮೃಷ್ಟ ಮೇಧ್ಯಸ್ಥಿರಾನ್ನಾನಿ ಭಕ್ಷ್ಯ ಭೋಜ್ಯಾನ್ಯನೇಕಶಃ ॥
ಸಂಪನ್ನಾನಿ ಜಗನ್ನಾಥ ಭೋಜ್ಯಾಸನ ಮುಪಾಶ್ರಯ"

ಓಂ ಭೋಜ್ಯಾಸನಾಯ ನಮಃ, ಭೋಜ್ಯಾಸನಂ ಅಲಂಕುರುಷ್ವ, ಎಂದು ಪ್ರಾರ್ಥಿಸಿ, ಓಂ ನಮೋ ನಾರಾಯಣಾಯ ಭೋಜ್ಯಾಸನಂ ಸಮರ್ಪಯಾಮಿ, ಅರ್ಘ್ಯಂ, ಪಾದ್ಯಂ, ಆಚಮನೀಯಂ ಸಮರ್ಪಯಾಮಿ ಎಂದು ಹೇಳಿ ಸಮರ್ಪಣೆ ಮಾಡಬೇಕು.

ಯೋಗ್ಯವಾದ ಮಾರ್ಗದಲ್ಲಿ ಸಂಪಾದಿಸಿದ ದ್ರವ್ಯಗಳಿಂದ ತಯಾರಿಸಲ್ಪಟ್ಟ ಅನ್ನ ಸೂಪವ್ಯಂಜನ ಪಾಯಸ ಭಕ್ಷ ಭೋಜ್ಯಾದಿ ಎಲ್ಲ ಅಡಿಗೆಯನ್ನೂ ಹಣ್ಣು ಹಾಲು ಮೊಸರು ತಾಂಬೂಲದೊಂದಿಗೆ ಶುದ್ಧಿ ಮಾಡಿದ ಸ್ಥಳದಲ್ಲಿಟ್ಟು, ಅರ್ಘ್ಯ ತೀರ್ಥದಿಂದ ಪ್ರೋಕ್ಷಿಸಿ, ಘಂಟಾನಾದದೊಂದಿಗೆ ತಾನು ಕಣ್ಣು ಮುಚ್ಚಿಕೊಂಡು ಕೈ ತೋರಿಸುತ್ತ ನಿವೇದಿಸಿ ಈ ಕೆಳಕಂಡಂತೆ ಪ್ರಾರ್ಥಿಸಬೇಕು.

1) ಅಸತ್ಯ ಮಶುಚಿಂ ನೀಚಂ ಅಪರಾಧೈಕ ಭಾಜನಂ ।
ಅಲ್ಪಶಕ್ತಿ ಮಚೈತನ್ಯ ಮನರ್ಹಂ ತ್ವತ್ಕ್ರಿಯಾಸ್ವಪಿ ॥
ಮಾಮನಾದೃತ್ಯ ದುರ್ಬುದ್ಧಿಂ ಸ್ವಯೈವಕೃಪಯಾವಿಭೋ ।
ಅತಿಪ್ರಭೂತ ಮತ್ಯಂತ ಭಕ್ತಿ ಸ್ನೇಹೋಪಪಾದಿತಂ ॥
ಶುದ್ಧಂಸರ್ವಗುಣೋಪೇತಂ ಸರ್ವದೋಷ ವಿವರ್ಜಿತಂ ।
ಸ್ವಾನುರೂಪಂ ವಿಶೇಷೇಣ ಸ್ವದೇವ್ಯೋ ಸದೃಶಂಗುಣೈಃ ॥

ತ್ವಮೇವೇದಂ ಹವಿಃ ಕೃತ್ವಾ ಸ್ವೀಕುರುಷ್ವ ಸುರೇಶ್ವರ ।
ಪಾಯಸಾನ್ನಂ ಗುಡಾನ್ನಂಚ ಮುದ್ಗಾನ್ನಂ ಶುದ್ಧಮೋದನಂ ॥
ದಧಿಕ್ಷೀರಾಜ್ಯ ಸಮ್ಮಿಶ್ರಂ ನಾನಾಪೂಪಫಲಾನ್ವಿತಂ ॥

ಯತೀಂದ್ರಯಾಮುನೇಯಾದ್ಯೈಃ ಪರಾಂಕುಶ ಮುಖ್ಯೈರಪಿ ।
ನಿವೇದ್ಯಮಾನಂ ನೈವೇದ್ಯಂ ಸ್ವೀಕುರುಷ್ವ ಸುರೇಶ್ವರ ॥

ಯಾಪ್ರೀತಿರ್ವಿದುರಾರ್ಪಿತೇ ಮುರರಿಪ್ರೋಕುಂತ್ಯಾರ್ಪಿತೇಯಾದೃಶೀ
ಯಾಗೋವರ್ಧನ ಮೂರ್ಧ್ನಿಯಾಚ ಪೃಥುಕೇ ಸ್ತನ್ಯೇ
ಯಶೋದಾರ್ಪಿತೇ ॥
ಭಾರದ್ವಾಜಸಮರ್ಪಿತೇ ಶಬರಿಕಾದತ್ತೇ ಕುಚೇಲಾರ್ಪಿತೇ
ಯಾಪ್ರೀತಿರ್ಮುನಿಪತ್ನಿ ಭಕ್ತಿರಚಿತೇಹ್ಯತ್ರಾಪಿ ತಾಂತಾಂಕುರು ॥
ಅತಿಪ್ರಭೂತಂ ಅತಿಪ್ರಿಯತಮಂ ಅತಿಸಮಗ್ರಂ ಅತ್ಯಂತ ಭಕ್ತಿಕೃತಂ
ಇದಂ ಸ್ವೀಕುರು –ಎಂದು ವಿಜ್ಞಾಪಿಸಿಕೊಳ್ಳಬೇಕು.

ಅರ್ಘ್ಯತೀರ್ಥದಿಂದ ಓಂ ಭೂರ್ಭುವಸ್ಸುವಃ ಓಂ ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್—ಎಂಬ ಮಂತ್ರದೊಡನೆ ಪ್ರೋಕ್ಷಿಸಬೇಕು.

ಸತ್ಯಂತ್ವರ್ತೇನ ಪರಿಷಿಂಚಾಮಿ ಎಂದು ಪರಿಷೇಚನಮಾಡಿ, ಅಮೃತೋಪಸ್ತರಣಮಸಿ ಎಂದು ಆಪೋಶನವನ್ನು ಸಮರ್ಪಿಸಿ, ಓಂ ಪ್ರಾಣಾಯಸ್ವಾಹಾ, ಅಪಾನಾಯಸ್ವಾಹಾ, ವ್ಯಾನಾಯಸ್ವಾಹಾ, ಉದಾನಾಯಸ್ವಾಹಾ, ಸಮನಾಯಸ್ವಾಹಾ, ಬ್ರಹ್ಮಣೇಸ್ವಾಹಾ, ಬ್ರಹ್ಮಣಿಮ ಆತ್ಮಾಽಮೃತತ್ವಾಯ ಎಂದು ಪ್ರಾಣಾಹುತಿಗಳನ್ನು ಮಾಡಿ, ಹಸ್ತೋದಕಂ ಸಮರ್ಪಯಾಮಿ ಎಂದು ಹಸ್ತೋದಕವನ್ನು ಅರ್ಪಿಸಬೇಕು. ಅರ್ಪಿಸಿದ ನೈವೇದ್ಯವನ್ನು ಭಗವಂತನು ಊಟಮಾಡಿದನೆಂದು ಭಾವಿಸಿ ಅನಂತರ ಅಮೃತಾಪಿ ಧಾನಮಸಿ ಎಂದು ಉತ್ತರಾಪೋಶನವನ್ನು ಸಮರ್ಪಿಸಿ, ಶುದ್ಧೋದಕದಿಂದ ಹಸ್ತ, ಮುಖಪ್ರಕ್ಷಾಳನವನ್ನು ಮಾಡಿ, ಪಾದ್ಯ, ಆಚಮನೀಯಗಳನ್ನು ಸಮರ್ಪಿಸಬೇಕು.ವಸ್ತ್ರದಿಂದ ಕೈಕಾಲು ಮುಖಗಳನ್ನು ಒರೆಸಬೇಕು.

[ಭಗವಂತನಿಗೆ ನೈವೇದ್ಯವಾದುದನ್ನು ಆರು ಭಾಗ ಮಾಡಿದಂತೆ ಭಾವಿಸಿ, ವೈಶ್ವದೇವರಿಗೆ, ಮಹಾಲಕ್ಷ್ಮಿಗೆ, ಭೂ ನೀಳಾ ದೇವಿಯರಿಗೆ, ಆದಿಶೇಷನಿಗೆ, ಗರುಡನಿಗೆ, ಪರಿಜನರಿಗೆ ನಿವೇದನೆ ಮಾಡಬೇಕು. ಮಹಾಲಕ್ಷ್ಮಿಗೆ ನಿವೇದಿತವಾದುದನ್ನು ಆಚಾರ್ಯರಿಗೆ ನಿವೇದಿಸಬೇಕು.]

## 23. 5. ಪುನಃ ಮಂತ್ರಾಸನ

ಮಂತ್ರಾಸನಮಿದಂತುಭ್ಯಂ ಮಯಾದತ್ತಮನುತ್ತಮಂ ।
ಕೂರ್ಚೇನ ಶೋಧಿತಂ ವಿಷ್ಣೋ ಪುನರಾಸಾದಯಪ್ರಭೋ ॥

ಎಂದು ವಿಜ್ಞಾಪಿಸಿ, ಪೀಠವಲ್ಲಿ ತುಳಸಿ ಹೂಗಳನ್ನು ಸಮರ್ಪಿಸಿ, ಅದರಲ್ಲಿ ಭಗವಂತನು ಬಂದು ಕುಳಿತನೆಂದು ಭಾವಿಸಿ, ಅರ್ಘ್ಯ, ಪಾದ್ಯ, ಆಚಮನೀಯಗಳನ್ನು ಸಮರ್ಪಿಸ ಬೇಕು.

ಏಲಾಲವಂಗ ಕರ್ಪೂರ ಜಾತಿಪೂಗ ಫಲಾನ್ವಿತಂ ।
ಸ್ವೀಕುರುಷ್ವ ಜಗನ್ನಾಥ ತಾಂಬೂಲಂ ಕೃಪಯಾರ್ಪಿತಂ ॥

ಫಲತಾಂಬೂಲಾದೀನ್ ಸಮರ್ಪಯಾಮಿ, ಎಂದು ಹೇಳಿ ಹಣ್ಣು ಎಲೆ ಅಡಿಕೆಗಳನ್ನು ಸಮರ್ಪಿಸಬೇಕು. ನಂತರ ಆಚಮನೀಯವನ್ನು ಸಮರ್ಪಿಸಬೇಕು.

## 24. 6. ಪರ್ಯಂಕಾಸನ

ಭಗವನ್ ಪುಂಡರೀಕಾಕ್ಷ ಕರುಣಾಮೃತವಾರಿಧೇ
ಆಸಾದಯ ಮಯಾದತ್ತಂ ಪರ್ಯಂಕಾಸನ ಮುತ್ತಮಂ ॥
ದೇವಸ್ವಾಮಿನ್ ಜಗನ್ನಾಥ ಶ್ರಿಯಾ ಭೂಮ್ಯಾಚನೀಳಯಾ
ಜಗದ್ರಕ್ಷಣ ಜಾಗರ್ಯಾಂ ಯೋಗನಿದ್ರಾಮುಪಾಕುರು ॥
ಪರ್ಯಂಕಾಸನ ಮಾಸಾದ್ಯ ಶ್ರೀಭೂಭ್ಯಾಂ ಸಹಿತ ಪ್ರಭೋ
ನಿದ್ರಾಂ ಕುರುಷ್ವ ಭಗವನ್ ಸುದರ್ಶನ ಸುರಕ್ಷಿತಃ ॥

ಓಂ ಪರ್ಯಂಕಾಸನಾಯ ನಮಃ, ಪರ್ಯಂಕಾಸನಂ ಅಲಂಕುರುಷ್ವ ಎಂದು ಪ್ರಾರ್ಥಿಸಿ, ಪುಷ್ಪವನ್ನು ಸಮರ್ಪಿಸಿ ಅರ್ಘ್ಯ, ಪಾದ್ಯ, ಆಚಮನೀಯ ಶುದ್ಧೋದಕ ಗಳನ್ನು ಸಮರ್ಪಿಸಿ ವಸ್ತ್ರದಿಂದ ಒರೆಸಬೇಕು.

ಘಂಟಾನಾದ, ವಾದ್ಯಘೋಷ, ನೃತ್ಯಗೀತೆಗಳೊಂದಿಗೆ, ಮಹಾ ನೀರಾಜನಂ ಸಮರ್ಪಯಾಮಿ, ಎಂದು ಹೇಳಿ ದೀಪಾರತಿ ಬೆಳಗಬೇಕು.

1) ಚರಣಂ ಪವಿತ್ರಂ ವಿತತಂ ಪುರಾಣಂ। ಯೇನ ಪೂತಸ್ತರತಿ ದುಷ್ಕೃತಾನಿ।
ತೇನ ಪವಿತ್ರೇಣ ಶುದ್ಧೇನ ಪೂತಾಃ। ಅತಿ ಪಾಪ್ಮಾನಮರಾತಿಂತರೇಮ ।
ಲೋಕಸ್ಯದ್ವಾರ ಮರ್ಚಿಮತ್ಪವಿತ್ರಂ। ಜ್ಯೋತಿಷ್ಮದ್ಭ್ರಾಜಮಾನಂ ಮಹಸ್ವತ್ ।
ಅಮೃತಸ್ಯ ಧಾರಾಬಹುಧಾದೋಹಮಾನಂ ।
ಚರಣನ್ನೋಲೋಕೇ ಸುಧಿತಾಂದಧಾತು ॥

2) ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ದಿವೀವ ಚಕ್ಷುರಾತತಂ ।
ತದ್ವಿಪ್ರಾಸೋವಿಪನ್ಯವೋ ಜಾಗೃವಾಂಸಸ್ಸಮಿಂಧತೇ ।
ವಿಷ್ಣೋರ್ಯತ್ಪರ ಮಂಪದಂ ॥

3) ಓಂ ಪದ್ಮಪ್ರಿಯೇ ಪದ್ಮಿನಿ ಪದ್ಮಹಸ್ತೇ ಪದ್ಮಾಲಯೇ ಪದ್ಮದಳಾಯತಾಕ್ಷೀ।
ವಿಶ್ವಪ್ರಿಯೇ ವಿಷ್ಣುಮನೋನುಕೂಲೇತ್ವತ್ಪಾದಪದ್ಮಂ ಮಯಿಸನ್ನಿಧತ್ಸ್ವ।
ಓಂ ಮಹಾ ದೇವ್ಯೈಚ ವಿದ್ಮಹೇ ವಿಷ್ಣು ಪತ್ನೀಚಧೀಮಹಿ।
ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥

4) ಪರ್ಯಾಪ್ತ್ಯೈ ಅನಂತರಾಯಾಯ ಸರ್ವಸ್ತೋಮೋತಿ ರಾತ್ರ ಉತ್ತಮ ಮಹರ್ಭವತಿ ।
ಸರ್ವಸ್ಯಾಪ್ತ್ಯೈ ಸರ್ವಸ್ಯಜಿತ್ಯೈ ಸರ್ವಮೇವತೇನಾಪ್ನೋತಿ ಸರ್ವಂ ಜಯತಿ ॥

5) ರಾಜಾಧಿರಾಜಾಯ ಪ್ರಸಹ್ಯ ಸಾಹಿನೇ।
ನಮೋವಯಂ ವೈಶ್ರವಣಾಯ ಕುರ್ಮಹೇ ।
ಸಮೇಕಾಮಾನ್ ಕಾಮ ಕಾಮಾಯ ಮಹ್ಯಂ ।
ಕಾಮೇಶ್ವರೋ ವೈಶ್ರವಣೋದಧಾತು ॥
ಕುಬೇರಾಯ ವೈಶ್ರವಣಾಯ ।
ಮಹಾರಾಜಾಯ ನಮಃ ॥

ಸ್ವಾಮಿಗೆ ಶಯನಾಸನದಲ್ಲಿ ಮಂಗಳವನ್ನು ಹಾಡಬೇಕು.

1) ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾಬ್ಧಯೇ ।
ಚಕ್ರವರ್ತಿ ತನೂಜಾಯ ಸಾರ್ವಭೌಮಾಯ ಮಂಗಳಂ ॥

2) ಶ್ರೀಮತ್ಕೌಸ್ತುಭ ರತ್ನಾಭ ಭಾಸುರಾಯಾ ಸುರಾರಯೇ ।
ಭೂಯಾ ಚ್ಛ್ರೀವತ್ಸವಕ್ಷಾಯ ಶ್ರೀರಂಗೇಶಾಯ ಮಂಗಳಂ ॥

3) ಶ್ರೀಯಃ ಕಾಂತಾಯ ಕಲ್ಯಾಣ ನಿಧಯೇ ನಿಧಯೇರ್ಥಿನಾಂ ।
ಶ್ರೀ ವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಳಂ ॥

4) ಹಸ್ತಿಶೈಲ ನಿವಾಸಾಯ ಮಂದಹಾಸ ಮುಖೇಂದವೇ ।
ಕಾಂಚ್ಯಾ ಮಂಚಿತರೂಪಾಯ ದೇವರಾಜಾಯ ಮಂಗಳಂ ॥

5) ಶ್ರೀವೈಕುಂಠವಿರಕ್ತಾಯ ಯದುಶೈಲವಿಹಾರಿಣೇ ।
ಮಾನೀಳಾ ಭೂಮಿಕಾಂತಾಯ ನಾರಾಯಣಾಯ ಮಂಗಳಂ ॥

6) ಮಂಗಳಾ ಶಾಸನಪರೈರ್ಮದಾಚಾರ್ಯ ಪುರೋಗಮೈಃ ।
ಸರ್ವೈಶ್ಚ ಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು ಮಂಗಳಂ ॥

ಕರ್ಪೂರ ನೀರಾಜನಂ ಸಮರ್ಪಯಾಮಿ ಎಂದು ಹೇಳುತ್ತ ದೇವರ ಮನೆಯೊಳಗೆ–ಹೊರಗೆ ಇರುವ ದೇವರ ಪಟಗಳಿಗೆಲ್ಲ ಆರತಿಯನ್ನು ತೋರಿಸಬಹುದು. ಆಮೇಲೆ ಅರ್ಘ್ಯ, ಪಾದ್ಯ, ಆಚಮನೀಯ, ಶುದ್ಧೋದಕಗಳನ್ನು ಸಮರ್ಪಿಸಬೇಕು.

ಶಾತ್ತುಮೊರೈ ಹೇಳಬೇಕು.

ತಿರುಪ್ಪಾವೈಯ ಕೊನೆಯ ಎರಡು ಪಾಶುರಗಳು, ತಿರುಪ್ಪಲ್ಲಾಂಡುವಿನ ಮೊದಲಿನ ಎರಡು ಪಾಶುರಗಳು, ಜಿತಂತಾ ಸ್ತೋತ್ರ, ದೇಶಿಕ ಮಂಗಳಾಶಾಸನ, ವಾಳಿತ್ತಿರುನಾಮಗಳನ್ನು ಹೇಳಬೇಕು.

25. ಆರಾಧನೆ ಮಾಡಿದವರು ತಾವು ಮೊದಲು ತೀರ್ಥವನ್ನು ತೆಗೆದುಕೊಂಡು ಅನಂತರ ಎಲ್ಲರಿಗೂ ಕೊಡಬೇಕು. ಆಮೇಲೆ ದೇವರಿಗೆ ನಿವೇದನವಾದ ಗಂಧ, ತುಳಸಿ, ಹೂ ಫಲಗಳನ್ನು ಎಲ್ಲರಿಗೂ ಕೊಡಬೇಕು.

26. ಕೊನೆಯಲ್ಲಿ **ಅಪರಾಧ ಕ್ಷಮಾಪಣೆಯನ್ನು** ಮಾಡಬೇಕು.

1) ಅಪರಾಧ ಸಹಸ್ರಭಾಜನಂ। ಪತಿತಂ ಭೀಮ ಭವಾರ್ಣವೋದರೇ।
ಅಗತಿಂ ಶರಣಾಗತಂ ಹರೇಕೃಪಯಾ ಕೇವಲ ಮಾತ್ಮಸಾತ್ಕುರು॥

2) ಅಕೃತ್ರಿಮತ್ವಚ್ಚರಣಾರವಿಂದ।
ಪ್ರೇಮಪ್ರಕರ್ಷಾವಧಿಮಾತ್ಮ ವಂತಂ ।
ಪಿತಾಮಹಂ ನಾಥಮುನಿಂ ವಿಲೋಕ್ಯ।
ಪ್ರಸೀದ ಮದ್ವೃತ್ತಮ ಚಿಂತಯಿತ್ವಾ ॥

3) ಮನೋವಾಕ್ಕಾಯೈರನಾದಿಕಾಲಪ್ರವೃತ್ತ ಪ್ರಕೃತ್ಯಾನಂತ
ಅಕೃತ್ಯಾಕರಣ ಕೃತ್ಯಾಕರಣ ಭಗವದಪಚಾರ ಭಾಗವತಾಪಚಾರ
ಅಸಹ್ಯಾಪಚಾರ ರೂಪ ನಾನಾವಿಧಾನಂತಾಪಚಾರಾನ್ ಆರಬ್ಧ
ಕಾರ್ಯಾನ್ ಅನಾರಬ್ಧ ಕಾರ್ಯಾನ್, ಕೃತಾನ್ ಕ್ರಿಯಮಾಣಾನ್
ಕರಿಷ್ಯಮಾಣಾಂಶ್ಚಸರ್ವಾನ್ ಅಶೇಷತಃ ಕ್ಷಮಸ್ವ
ಪುರುಷೋತ್ತಮ ॥

4) ಉಪಚಾರಾಪದೇಶೇನ ಕೃತಾನ ಹರಹರ್ಮಯಾ ।
ಅಪಚಾರಾನಿಮಾನ್ ಸರ್ವಾನ್ ಕ್ಷಮಸ್ವ ಪುರುಷೋತ್ತಮ ॥

ಎಂಬುದಾಗಿ ಭಗವಂತನಲ್ಲಿ ಪ್ರಾರ್ಥಿಸಿ ಪ್ರಣಾಮಪೂರ್ವಕ ಅಪರಾಧವನ್ನು ಕ್ಷಮಿಸು ವಂತೆ ಬೇಡಿಕೊಳ್ಳಬೇಕು.

27. ಛತ್ರಂ, ಚಾಮರಂ, ಅಶ್ವಾರೋಹಣಂ, ಗಜಾರೋಹಣಂ, ಆಂದಾಳಿಕಾರೋಹಣಂ, ಸಮಸ್ತವಾದ್ಯ ರಾಜೋಪಚಾರ, ದೇವೋಪಚಾರ ಪೂಜಾಂ ಸಮರ್ಪಯಾಮಿ, ಸ್ವಾಮಿನಃ ಯಥಾಸ್ಥಾನಂ ಪ್ರತಿಷ್ಠಾಪಯಾಮಿ–ಎಂದು ಹೇಳಿ ದೇವರ ಮಂದಾಸನದ ಬಾಗಿಲನ್ನು ಮುಚ್ಚಿ, ಭಗವಂತನಿಗೆ ಬೆನ್ನು ತೋರಿಸದೆ ಹೊರಗೆ ಬಂದು ಸೂರ್ಯನನ್ನು ದರ್ಶಿಸಿ ಆಚಮನ ಮಾಡಬೇಕು.

28. ಹಿಂದಿನಂತೆ ಭಗವಾನೇವ........ಪ್ರತಿಪಾದಿತವಾನ್ ಎಂದು ಹೇಳಿ ಸಾತ್ವಿಕ ತ್ಯಾಗಮಾಡಬೇಕು.

ಭಗವದಾರಾಧನಂ ಸಂಪೂರ್ಣಂ

---

# VI. ವಿಷ್ಣುಪೂಜೆ ಮತ್ತು ದೇವಾಲಯ

## 1. ಇತಿಹಾಸ

ವಿಷ್ಣುವೇ ಕ್ಷೀರಸಾಗರ ಶೇಷಶಾಯಿಯಾದ ನಾರಾಯಣ. ರಂಗನಾಥ, ವರದ ರಾಜ, ಶ್ರೀರಾಮ, ಶ್ರೀಕೃಷ್ಣ, ತಿರುನಾರಾಯಣ, ಶ್ರೀನಿವಾಸ–ಇವೆಲ್ಲ ವಿಷ್ಣುವಿನ ಇತರ ನಾಮಗಳು ಮತ್ತು ಅವನ ಅಂಶಗಳು. ಆದುದರಿಂದಲೇ ವಿಷ್ಣುವಿನ ಅವತಾರ ಗಳ ಆರಾಧನೆಯು ಶ್ರೀವೈಷ್ಣವ ಮತದ ಅವಿಭಾಜ್ಯದ ಅಂಗವಾಯಿತು.

ಕೃತಯುಗದ ಆದಿಯಲ್ಲಿ ಮೊಟ್ಟಮೊದಲು ಭೂಮಿಯಲ್ಲಿನ ಕಂಚಿ ಎಂಬ ಕ್ಷೇತ್ರದಲ್ಲಿ ದೇವಾಲಯವನ್ನು ನಿರ್ಮಿಸಿ, ವರದರಾಜನ ಮೂರ್ತಿಯ ಮೂಲಕ ನಾರಾಯಣನನ್ನು ಆರಾಧಿಸಿದವನು ಚತುರ್ಮುಖ ಬ್ರಹ್ಮ. ಆಮೇಲೆ ಚತು ರ್ಮುಖ ಬ್ರಹ್ಮನಿಂದ ಪಡೆದ ತಿರುನಾರಾಯಣನ ಮೂರ್ತಿಯನ್ನು ತಂದು ಮೇಲು ಕೋಟೆಯಲ್ಲಿ ಪ್ರತಿಷ್ಠಿಸಿ ಪೂಜಿಸಿದವನು ಸನತ್ಕುಮಾರ ; ತ್ರೇತಾಯುಗದಲ್ಲಿ ಚತುರ್ಮುಖ ಬ್ರಹ್ಮನು ರಂಗನಾಥ ಮೂರ್ತಿಯನ್ನು ಇಕ್ಷ್ವಾಕು ಚಕ್ರವರ್ತಿಗೆ ಕೊಟ್ಟನು. ಅದು ಶ್ರೀರಾಮನಿಂದ ವಿಭೀಷಣನಿಗೆ ದೊರಕಿ ಅವನು ಅದನ್ನು ಶ್ರೀರಂಗದಲ್ಲಿ ಪ್ರತಿಷ್ಠಿಸಿದನು. ದ್ವಾಪರಯುಗದಲ್ಲಿ ಶ್ರೀ ಮಹಾವಿಷ್ಣುವು ಭೃಗು ಮಹರ್ಷಿಯ ಕಾರಣವಾಗಿ ಮಹಾಲಕ್ಷ್ಮಿಯನ್ನು ಕಳೆದುಕೊಂಡು ತಿರುಮಲೆಯಲ್ಲಿ ಶ್ರೀನಿವಾಸನಾಗಿ ನೆಲಸಿದ್ದಾನೆ.

ರಾಮಾಯಣ, ಮಹಾಭಾರತಗಳಲ್ಲಿ ತಿಳಿಸುವಂತೆ ದೇವಾಲಯದ ಸ್ಥಾಪನೆ, ಮೂರ್ತಿಯ ಆರಾಧನೆ ಮತ್ತು ಉಪಾಸನೆ, ಚೇತನನಿಗೆ ಶ್ರೇಯಸ್ಕರವೆಂದು ಮಹರ್ಷಿ ಗಳು ಅಂಗೀಕರಿಸಿದ್ದಾರೆ. ಬದರಿಕಾಶ್ರಮದಿಂದ ಧನುಷ್ಕೋಟಿಯವರೆಗಿನ ನೂರಾರು ದಿವ್ಯದೇಶಗಳಲ್ಲಿರುವ ದೇವಾಲಯಗಳಲ್ಲಿನ ಅರ್ಚಾಮೂರ್ತಿಗಳನ್ನು, ಭಕ್ತಿ, ಆವೇಶ ಗಳಿಂದ ಹಾಡಿ, ಭಗವಂತನ ಗುಣಾನುಭವದಿಂದ ಆನಂದ ಪಡೆದವರು ಆಳ್ವಾರುಗಳು.

ಹೀಗೆ ಸಾವಿರಾರು ವರ್ಷಗಳ ಹಿಂದೆಯೇ ದೇವಾಲಯ ನಿರ್ಮಾಣ, ಮತ್ತು ಜೀರ್ಣೋದ್ಧಾರ, ದೇವಾಲಯ ದರ್ಶನ, ಅರ್ಚಾಕಲ್ಪ, ಭಾಗವತಗೋಷ್ಠಿ, ಸಾಮೂಹಿಕ ಪ್ರಾರ್ಥನೆ, ಜ್ಞಾನೋದಯ, ಮೋಕ್ಷ—ಇವೆಲ್ಲ ಇದ್ದುವೆಂದು ತಿಳಿಯ ಬಹುದು.

ಕ್ರಿ. ಪೂ. ನಾಲ್ಕನೆ ಶತಮಾನದ ವೇಳೆಗೆ ಮಥುರಾ ಪ್ರದೇಶದ ಜನರು ವಾಸು ದೇವ ಅಥವಾ ಕೃಷ್ಣನ ಪೂಜೆಯನ್ನು ಮಾಡುತ್ತಿದ್ದರೆಂದು ಗ್ರೀಕ್ ರಾಯಭಾರಿಯಾದ ಮೆಗಾಸ್ತನೀಸನ ಬರವಣಿಗೆಯಿಂದ ತಿಳಿದುಬರುತ್ತದೆ. ಕ್ರಿ. ಪೂ. 3ನೇ ಶತಮಾನದ ಬೆಸನಗರ ಶಿಲಾಲೇಖದಿಂದ, ಹೆಲಿಯೋಡೋರಸ್ ಎಂಬ ಗ್ರೀಕ್ ರಾಯಭಾರಿಯು

ಭಾಗವತನಾಗಿದ್ದು, ಗರುಡಧ್ವಜವೊಂದನ್ನು ನಿರ್ಮಾಣಮಾಡಿಸಿ, ತಾನು ದೇವ ದೇವನಾದ ವಾಸುದೇವನನ್ನು ಪೂಜಿಸುವ ಪರಮ ಭಾಗವತ ಎಂದು ತನ್ನನ್ನು ಕರೆದು ಕೊಂಡಿದ್ದಾನೆಂಬುದು ವ್ಯಕ್ತವಾಗುತ್ತದೆ. ಶಾತವಾಹನರು, ಕದಂಬರು, ಪಶ್ಚಿಮ ಚಾಲುಕ್ಯರು, ಪಲ್ಲವರು, ಬಾಣರು, ಹೊಯ್ಸಳರು, ವಿಜಯನಗರದ ರಾಜರು, ಮೈಸೂರಿನ ಒಡೆಯರು—ಎಲ್ಲರೂ ವಿಷ್ಣುಪೂಜೆಯನ್ನು ಪ್ರೋಷಿಸಿದ್ದಾರೆ. ದೇವಾಲಯ ಗಳ ನಿರ್ಮಾಣ, ಮೂರ್ತಿಗಳ ಸ್ಥಾಪನೆ, ದೇವರಿಗೆ ಆಭರಣಗಳ ಕೊಡುಗೆ, ದೇವಾ ಲಯದ ಖರ್ಚಿಗಾಗಿ ಗ್ರಾಮಗಳ ಜಹಗೀರು, ಮುಂತಾದವುಗಳ ಮೂಲಕ ವಿಷ್ಣು ಭಕ್ತಿಯ ಪ್ರಚಾರಕ್ಕೆ ನೆರವಾಗಿದ್ದಾರೆ.

ವಿಷ್ಣುಪುರಾಣ, ಭಾಗವತ, ಪಾಂಚರಾತ್ರ ಸಂಹಿತೆ, ಮಹಾಭಾರತ, ಭಗವದ್ಗೀತೆ—ಇವು ವಿಷ್ಣುಪೂಜೆಗೆ ಪ್ರಮಾಣಗಳು. ವಿಷ್ಣು ಅಥವಾ ಅವನ ಅವತಾರ ಗಳಿಗಾಗಿ, ದೇವಾಲಯಗಳು ನಿರ್ಮಿಸಲ್ಪಟ್ಟು, ಪೂಜಾವಿಧಾನಗಳು ವೈಭವೋಪೇತ ವಾಗಿ ರೂಪುಗೊಂಡು, ಸಾವಿರಾರು ಸಂಖ್ಯೆಯಲ್ಲಿ ಭಕ್ತರನ್ನು ಆಕರ್ಷಿಸುವಂತಾಯಿತು. ಧಾರ್ಮಿಕ ಭಾವನೆಯಿಂದ ಪ್ರೇರಿತರಾದ ಜನರು, ತಮ್ಮಲ್ಲಿ ಹುದುಗಿದ್ದ ಕಲೆ, ಸಂಸ್ಕೃತಿ ಮುಂತಾದ ಅಭಿರುಚಿಗಳನ್ನು ವ್ಯಕ್ತಗೊಳಿಸಲು, ಇದರಿಂದ ಸುಯೋಗ, ಸದವ ಕಾಶಗಳು ಲಭಿಸಿದುವು. ದೇವಾಲಯದಲ್ಲಿ ನಡೆಯುವ ವಿವಿಧ ಉತ್ಸವಗಳಲ್ಲಿ, ಅಂತಃ ಕರಣಪೂರ್ವಕವಾಗಿ ಹೊರಟ ಸುಮಧುರ ನಾದಸ್ವರ ಸಮ್ಮಿಲನದೊಂದಿಗೆ ಸ್ತುತಿ ಪಾಠಗಳು, ಪವಿತ್ರ ಧರ್ಮಗ್ರಂಥಗಳ ಪಠನ, ಮಂತ್ರಘೋಷ, ಉಪನ್ಯಾಸ, ಕಾಲಕ್ಷೇಪ, ಸಂಗೀತ, ನೃತ್ಯ, ನಾಟಕ, ಹರಿಕಥೆ, ಇವೆಲ್ಲ ಸಮಾವೇಶಗೊಂಡಿರು ತ್ತಿದ್ದುವು. ಭಗವಂತನ ಅನಂತ ಮಹಿಮಾ ವಿಭವ, ಆತನ ಸೃಷ್ಟಿಯ ವಿಪುಲತೆ ಮತ್ತು ವಿವಿಧತೆ, ಆತನ ಕಲ್ಯಾಣಕಾರಕ ವಿಶೇಷತೆ–ಇವುಗಳೆಲ್ಲವನ್ನೂ ಕೊಂಡಾಡುವ ಮಂತ್ರ-ಗೀತೆಗಳು ವಿವಿಧ ಭಾರತೀಯ ಭಾಷೆಗಳಲ್ಲಿ ಸೃಷ್ಟಿಯಾದುವು.

ಭಗವಂತನ ಮಾಯೆಯಿಂದ ಮೋಹಿತರಾಗಿ ಸಂಸಾರದಿಂದ ಬಂಧಿಸಲ್ಪಟ್ಟ ಜೀವರು ಉದ್ಧಾರವಾಗಲು ಭಗವಂತನನ್ನು ಆಶ್ರಯಿಸಿ, ಅವನ ಉಪಾಸನೆ ಮಾಡಿ ದರೆ, ಭಗವಂತನು ತೃಪ್ತಿಗೊಂಡು ಜೀವರನ್ನು ಮಾಯೆಯಿಂದ ಮುಕ್ತಗೊಳಿಸು ತ್ತಾನೆ. ಆಗ ಜೀವರು ಸರಿಯಾದ ಜ್ಞಾನವನ್ನು ಪಡೆದು ವರ್ಣಾಶ್ರಮ ಧರ್ಮ ಗಳನ್ನು ಪಾಲಿಸಿ ಭಗವದಾರಾಧನೆಯಲ್ಲಿ ತೊಡಗುತ್ತಾರೆ. ಇದರ ಫಲವಾಗಿ ಸಂಸಾರ ಬಂಧನ—ವಾಸನೆಗಳಿಂದ ಬಿಡುಗಡೆ ಆಗಿ, ಪರಮಾತ್ಮನ ದರ್ಶನ, ಸಾಕ್ಷಾತ್ಕಾರ ದೊರೆತು, ಪುನರ್ಜನ್ಮವಿಲ್ಲದ ದಿವ್ಯಲೋಕ ಸಿಗುತ್ತದೆ.

ಭಗವಂತನ ಆಶ್ರಯವನ್ನು ನಾಲ್ಕು ವಿಧದಲ್ಲಿ ಮಾಡಬಹುದು. ಸಂಧ್ಯಾ ವಂದನೆಯ ಅಂಗವಾದ ಗಾಯತ್ರ್ಯಾದಿ ಮಂತ್ರಗಳ ಅಭ್ಯಾಸವು **ಜಪ**; ಅಷ್ಟಾಂಗ

ಯೋಗದಿಂದ ಚಿಂತನೆ ಮಾಡುವುದು **ಧ್ಯಾನ;** ಅಗ್ನಿಹೋತ್ರಾದಿ ಕ್ರಿಯೆಗಳನ್ನು ಮಾಡುವುದು **ಹೋಮ;** ದೇವಾಲಯ–ಮನೆಗಳಲ್ಲಿ ವೈದಿಕ ಮಾರ್ಗದಿಂದ ವಿಗ್ರಹಗಳ ಪೂಜಾದಿಗಳನ್ನು ಮಾಡುವುದು **ಅರ್ಚನೆ.** ಈ ನಾಲ್ಕರಲ್ಲಿ ಅರ್ಚನೆಯೇ ಸರ್ವಾರ್ಥಸಾಧಕವಾದುದು. ಆಗಮೋಕ್ತವಾಗಿ ಭಗವಂತನನ್ನು ಆರಾಧಿಸುವುದೇ ಕಲಿಯುಗದಲ್ಲಿ ಶ್ರೇಷ್ಠವಾದುದು. ಸಂಸಾರಿಗಳಾದ ನಮಗೆ ಭಗವಂತನ ಐದನೆಯ ಅರ್ಚಾವತಾರ ಮಾತ್ರ ಕಾಣಿಸುತ್ತದೆ. ಅದರ ಕುರುಹೇ ದೇವಾಲಯಗಳು.

ಹೀಗೆ ಶ್ರುತಿ ಸ್ಮೃತೀತಿಹಾಸಾದಿ ಪ್ರಮಾಣ ಬಲದಿಂದಲೂ, ಜ್ಞಾನಾಧಿಕ ಜನರ ಅನುಷ್ಠಾನದಿಂದಲೂ, ಚೇತನನು ದೇವಾಲಯಕ್ಕೆ ಅಭಿಮುಖನಾದಾಗಲೇ ಸಕಲ ಶ್ರೇಯಸ್ಸಿಗೂ ಪಾತ್ರನಾಗುವನೆಂಬುದು ಸ್ಪಷ್ಟವಾಗಿದೆ.

## 2. ಆವಶ್ಯಕತೆ

ಪರಮಪದದಲ್ಲಿರುವ ನಿತ್ಯಸುಖವು ಸಿಗಬೇಕಾದಲ್ಲಿ ಈ ನಮ್ಮ ಶರೀರದಿಂದ ಕೆಲವು ಒಳ್ಳೆಯ ಕೆಲಸಗಳನ್ನು ಮಾಡಿಸಬೇಕು. ಪುಣ್ಯ ವಿಶೇಷದಿಂದ ದೊರಕಿರುವ ಮನುಷ್ಯ ಜನ್ಮ ಇರುವಾಗಲೇ ಆತ್ಮನನ್ನು ಉದ್ಧರಿಸಿಕೊಳ್ಳಬೇಕು. ಆತ್ಮನ ಬೆಳವಣಿಗೆಗೆ ಯಾಗಯಜ್ಞ, ಜಪತಪಗಳು ಅವಶ್ಯಕ. ಅಂತಃಕರಣದಲ್ಲಿ ಭಗವಂತನನ್ನು ಅಂತರ್ಯಾಮಿಯಾಗಿ ಹೊಂದಿರುವ ಭಕ್ತನ ಶರೀರವೂ ಒಂದು ರೀತಿಯಲ್ಲಿ ದೇವಾಲಯವೇ ಆಗಿದೆ. ಜೀವಿಗಳಲ್ಲಿ ಅಂತರ್ಯಾಮಿಯಾಗಿದ್ದು ಅವರನ್ನು ಆಳುತ್ತ, ಅವರಿಗೆ ಸಲಹೆ ನೀಡಿ ಮಾರ್ಗದರ್ಶನ ಮಾಡುತ್ತಿರುವ ಪುರುಷೋತ್ತಮನನ್ನು, ವೇದಗಳಲ್ಲಿನ ದೇವತೆಗಳು ಹಾಗೂ ಮಹರ್ಷಿಗಳು ಎಲ್ಲರೂ ಸ್ತುತಿಸಿದ್ದಾರೆ. ಆದರೂ ಭಗವದಾರಾಧನೆಗೆ ಮನೆಗಿಂತಲೂ ಶಾಂತವಾದ ವಾತಾವರಣವಿರುವ ಗುಡಿಯೇ ಮೇಲು. ಕಲಿಯುಗದಲ್ಲಿ ಪರಮಾತ್ಮನಿರುವುದೇ ದೇವಾಲಯಗಳಲ್ಲಿ. ದೇವಾಲಯಗಳಲ್ಲಿ ಸಾಧು ಸಜ್ಜನರ, ಭಾಗವತ ಶಿರೋಮಣಿಗಳ ದರ್ಶನ, ಸ್ಪರ್ಶ, ಸ್ಮೃತಿ, ಸಂಭಾಷಣೆಗಳಿಂದ ಪಾಪ ಕಳೆದು, ಪುಣ್ಯ ದೊರೆತು, ಬಯಸಿದ ಫಲವಾದ ಮುಕ್ತಿಯು ಚೇತನರಿಗೆ ಸಿಗುವುದರಲ್ಲಿ ಸಂದೇಹವಿಲ್ಲ ಎಂಬುದು ಆಳ್ವಾರುಗಳ ಅಭಿಪ್ರಾಯ. ಧರ್ಮಪ್ರಚಾರಕ್ಕೆ, ಮೋಕ್ಷ ಹೊಂದುವುದಕ್ಕೆ, "ಭಗವದ್ಧ್ಯಾನಸಹಿತಂ ತತ್ತ್ವ ಮಾರಾಧನಾತ್ಮಕಂ, ಪಂಚಕಾಲಂ ಯಥಾಶಾಸ್ತ್ರಂ ಗೃಹೇವೇ ಮಂದಿರೇಪಿವಾ, ಭಗವತ್ಪೂಜನಂ ಕಾರ್ಯಂ ಅದ್ಯ ಪ್ರಭೃತಿ ನಾನ್ಯಥಾ" ಎಂಬುದಾಗಿ ಬ್ರಹ್ಮನು ಋಷಿಗಳಿಗೆ ಮಾರ್ಗವನ್ನು ತೋರಿಸಿಕೊಟ್ಟಿರುತ್ತಾನೆ.

ಒಂದು ಗ್ರಾಮದ ಹೃದಯ, ಧರ್ಮದ ಕೇಂದ್ರ, ಕಲೆ–ಸಂಸ್ಕೃತಿಗಳ ನೆಲೆವೀಡು—ಆದ ದೇವಾಲಯಕ್ಕೆ, ಶ್ರೀ ವೈಷ್ಣವ ಸಿದ್ಧಾಂತದಲ್ಲಿ ಪ್ರಧಾನ ಸ್ಥಾನವನ್ನು

ನೀಡಲಾಗಿದೆ. ಪರಮಾತ್ಮನ ಧ್ಯಾನಮಾಡಲು, ಅವನಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಅವನನ್ನು ಶರಣು ಹೋಗಲು, ಪಾಪಗಳ ನಾಶಕ್ಕಾಗಿ, ಅವನನ್ನು ಪ್ರಾರ್ಥಿಸಲು, ದೇವಾಲಯಗಳು ನೆರವು ನೀಡಬಲ್ಲುವು. ಭಗವಂತನ ದಿವ್ಯಾಯುಧಗಳು ಭಕ್ತರನ್ನು ಆಪತ್ತಿನಿಂದ ರಕ್ಷಿಸಬಲ್ಲುವು. ಭಗವಂತನ ದರ್ಶನ, ಸ್ತುತಿ, ಸ್ಮರಣೆ, ನಾಮ ಸಂಕೀರ್ತನೆ, ಗುಣವರ್ಣನೆ, ವೇದ ಪ್ರಬಂಧಗಳ ಪಾರಾಯಣ, ಪುರಾಣ ಶ್ರವಣ, ಕಥಾ ಶ್ರವಣ, ಪ್ರದಕ್ಷಿಣ, ನಮಸ್ಕಾರ, ಆವರಣವನ್ನು ಗುಡಿಸಿ-ಸಾರಿಸಿ-ರಂಗವಲ್ಲಿಯನ್ನಿಟ್ಟು ಅಲಂಕರಿಸುವುದು, ದೇವರಿಗಾಗಿ ತುಲಸಿ, ಹೂ, ಗಂಧ, ನೀರು, ವಸ್ತ್ರ, ಛತ್ರಿ, ಚಾಮರ, ಆಭರಣ, ಭಕ್ಷ್ಯ, ಭೋಜ್ಯಗಳನ್ನು ಸಮರ್ಪಿಸುವುದು, ಭಾಗವತರಿಗೆ ತದೀಯಾರಾಧನೆ ಏರ್ಪಡಿಸುವುದು, ಇವುಗಳಿಂದ ತುಂಬಾ ಪ್ರಯೋಜನವುಂಟು. ದೇವರು ಕೊಟ್ಟ ಸಂಪತ್ತನ್ನು ದೇವರಿಗೇ ಸಮರ್ಪಿಸುವ ಮನೋಭಾವ ಇದರಲ್ಲಿ ಅಡಗಿದೆ. ಜೊತೆಗೆ ಶಕ್ತರಿಂದ ದಾನ ಪಡೆದು ಅಶಕ್ತರಿಗೆ ಹಂಚುವ ದೈವೀ ಸಮತಾವಾದ ಭಾವವೂ ಭಾರತೀಯ ದೇವಾಲಯಗಳಲ್ಲಿ ಕಾಣಬರುತ್ತದೆ.

ಈ ಪ್ರಪಂಚವೇ ದೇವನ ಆಲಯವಾದುದರಿಂದ ಇಲ್ಲಿ ಎಲ್ಲ ಕಡೆಯಲ್ಲಿಯೂ ದೇವಾಂಶವು ಹರಡಿಕೊಂಡಿದೆ. ಪುಟ್ಟ ಪ್ರಪಂಚವೆನಿಸಿದ ಶ್ರೇಷ್ಠನಾದ ಮಾನವನಲ್ಲಿಯೂ, ಈ ಪ್ರಪಂಚದಲ್ಲಿರುವುದೆಲ್ಲವೂ ಇರುವುದರಿಂದ, ಮಾನವ ಶರೀರವೂ ದೇವನ ಆಲಯವೇ ಆಗಿದೆ. ಮಾನವ ದೇಹದೊಳಗೆ ಆಧ್ಯಾತ್ಮಿಕ ಅನುಭವ ಸಿಗುವ ಹಲವು ಕೇಂದ್ರಗಳಿವೆ. ಭಕ್ತರು ಬಯಸಿದಾಗ, ಅವರ ಶಕ್ತಿ ಸಾಮರ್ಥ್ಯಗಳಿಗನುಗುಣವಾಗಿ, ಅವರು ಪೂಜಿಸಲಾಗುವಂತೆ, ನಿಷ್ಠಾವಂತ ಶ್ರೀವೈಷ್ಣವರ, ಸ್ವಯಮಾಚಾರ್ಯ ಪುರುಷರ, ಮನೆ-ಮಠಗಳಲ್ಲಿ ಹಾಗೂ ದಿವ್ಯ ಕ್ಷೇತ್ರಗಳಲ್ಲಿ ನೆಲಸಿರುವ ಭಗವಂತನ ರೂಪವೇ ಅರ್ಚಾವತಾರ.

ಭಾರತದಲ್ಲಿರುವ ನೂರಾರು ದಿವ್ಯಕ್ಷೇತ್ರಗಳು, ಆಧ್ಯಾತ್ಮಿಕ ಧ್ಯಾನದಲ್ಲಿ ನಿರತರಾಗಿದ್ದ ಸಾಧು ಸಂತ, ಋಷಿಮುನಿಗಳಿಂದ ಪ್ರಭಾವಿತವಾಗಿವೆ. ಆ ಸ್ಥಳಗಳಲ್ಲಿ ವಾಸಿಸಿದವರಿಗೆ ಹಾಗೂ ಇವುಗಳನ್ನು ದರ್ಶಿಸಿದವರಿಗೆ ಸೌಂದರ್ಯ, ಮಾಧುರ್ಯ, ಪ್ರೇಮಗಳ ಅರಿವಾಗಿ ಆಧ್ಯಾತ್ಮಿಕ ಶೋಧನೆಗೆ ಸ್ಫೂರ್ತಿ ಸಿಗುತ್ತದೆ. ಆದುದರಿಂದಲೇ ಈ ದಿವ್ಯದೇಶಗಳ ದೇವಾಲಯಗಳಲ್ಲಿ ದಿನವಿಡೀ ಸಾಧು ಸಂತರ ಹಾಗೂ ಭಾಗವತರ ಚಟುವಟಿಕೆಗಳು ಕಾಣಬರುತ್ತವೆ. ಭಗವಂತನು ನೆಲಸಿರುವ ದಿವ್ಯದೇಶಗಳಲ್ಲಿ ವಾಸಿಸುತ್ತ, ಅವನಿಗೆ ಪ್ರಿಯವಾದ ಕೈಂಕರ್ಯಗಳನ್ನು ಮಾಡುವುದು, ನೋಡಿದವರ ಮನಸ್ಸನ್ನು ಅಪಹರಿಸುವ ರೂಪದಿಂದ ಕಂಗೊಳಿಸುವ ಅರ್ಚಾಮೂರ್ತಿಯನ್ನು ಶರಣು ಹೋಗುವುದು, ಮಾನವನ ಶ್ರೇಯಸ್ಸಿಗೆ ಸಾಧನವೆಂದು ಆಚಾರ್ಯರುಗಳು ಉಪದೇಶಿಸಿದ್ದಾರೆ. ಜನರು ಸಾಮೂಹಿಕವಾಗಿ ಭಾಗವಹಿಸಲು ಅವಕಾಶ-ಅನು

ಕೊಲಗಳಿರುವುದೇ ದೇವಾಲಯಗಳಲ್ಲಿ. ಇಲ್ಲಿ ಕ್ರಮವಾಗಿ ನಿತ್ಯಪೂಜೆಗಳು ನಡೆದರೆ ನಾಡಿನಲ್ಲಿ ಕ್ಷಾಮ ಡಾಮರಗಳಿಲ್ಲದೆ ಜನರೆಲ್ಲರೂ ಸುಖ ಶಾಂತಿ ಆನಂದಗಳಿಂದ ವಾಸಿಸ ಬಹುದು ಎಂಬುದು ಆಳ್ವಾರಾಚಾರ್ಯರುಗಳ ಖಚಿತ ನಂಬಿಕೆ. ಆದಕಾರಣ ದೇವ ಸ್ಥಾನಗಳ ಮಹತ್ವವನ್ನರಿತು ಅದರ ಜೀರ್ಣೋದ್ಧಾರದ ಕಡೆ ಗಮನಿಸಿದರೆ ಸಮಾಜವು ಉನ್ನತಿಯ ಶಿಖರವನ್ನು ಮುಟ್ಟಬಹುದು.

## 3. ಪ್ರಯೋಜನ

1) ಬೆಟ್ಟದಲ್ಲಿ ದೈವ ನೆಲಸಿದೆ, ಅದು ದೇವತಾ ಸ್ವರೂಪ, ಎನ್ನುವ ಭಾವನೆ ಮತ್ತು ನಂಬಿಕೆ ಬಹಳ ಹಿಂದಿನಿಂದಲೂ ಅನೇಕ ದೇಶಗಳಲ್ಲಿ ಬೆಳೆದು ಬಂದಿದೆ. ನಮ್ಮ ಧರ್ಮ, ಸಂಸ್ಕೃತಿ, ಸಾಹಿತ್ಯಗಳಲ್ಲಿ ಪರ್ವತಗಳೆಲ್ಲ ಸೇರಿಹೋಗಿವೆ. ಅದರ ಜೊತೆಗೆ ಅಕ್ಕಪಕ್ಕದಲ್ಲಿ ದಟ್ಟವಾಗಿ ಹರಡಿರುವ ಕಾಡು, ಅದರಿಂದ ಧುಮುಕಿ ಹರಿದು ಬರುವ ನದಿ, ತೀರ್ಥಗಳೂ ದೇವತಾಸ್ಥಾನಗಳಾಗಿವೆ. ಈ ಭಾವನೆಯನ್ನು ವೈದಿಕ ಮಂತ್ರ ಗಳಲ್ಲಿ ಕಾಣಬಹುದು. ಆದುದರಿಂದಲೇ ಪ್ರಾಚೀನಕಾಲದಿಂದಲೂ ಸೃಷ್ಟಿಕರ್ತನಾದ ಭಗವಂತನನ್ನು ಪೂಜಿಸಲು ನದಿಯ ದಡ, ಕಾಡು, ಬೆಟ್ಟದ ತುದಿ ಮುಂತಾದ ಸುಂದರ, ಸ್ಫೂರ್ತಿಯುತ, ಪ್ರಶಾಂತ ವಾತಾವರಣವಿರುವ, ಪ್ರಕೃತಿ ಸನ್ನಿವೇಶದಲ್ಲಿ ದೇವಾಲಯಗಳನ್ನು ನಿರ್ಮಿಸುತ್ತಿದ್ದಾರೆ. ಇದರಿಂದ ಅಲ್ಲಿಗೆ ಹೋಗುವವರಿಗೆ ಶಾಂತಿ ಸಿಗುತ್ತದೆ, ಸೌಂದರ್ಯ ಅನುಭವವಾಗುತ್ತದೆ.

2) ದೇವಾಲಯ ನಿರ್ಮಾಣದಲ್ಲಿ ಭಾರತೀಯ ಶಿಲ್ಪಿಗಳು ವಿಜ್ಞಾನ ತತ್ತ್ವ ಗಳನ್ನೂ ಅಳವಡಿಸಿದ್ದಾರೆ.

3) ದೇವಾಲಯದಲ್ಲಿ ಪರಮಾತ್ಮನನ್ನು ಪೂಜಿಸುವಾಗ, ಭಕ್ತನ ವಿಶ್ವಾಸ ವೆಂಬ ವಿಷಮ ಶಕ್ತಿಯು (negative energy), ಪರಮಾತ್ಮನ ವಾತ್ಸಲ್ಯವೆಂಬ ಸಮಶಕ್ತಿಯೊಡನೆ (positive energy) ಸೇರಿದಾಗ, ಭಕ್ತನಲ್ಲಿ ಒಂದು ಪ್ರಬಲ ಶಕ್ತಿಯು (current) ಉತ್ಪನ್ನವಾಗುತ್ತದೆ.

4) ಬಾರಿಸಿದ ಘಂಟೆಯಿಂದ ಹೊರಟ ವಿದ್ಯುತ್ ತರಂಗಗಳು ನಮ್ಮ ಶರೀರ ವನ್ನು ಪ್ರವೇಶಿಸಿದ ನಂತರ ಮತ್ತೆ ಹರಿದು ಭೂಮಿಗೆ ಹೋಗದಿರಲೆಂದೇ ದೇವಾಲಯ ದಲ್ಲಿ ಮರದ ಹೊಸಲನ್ನು ತುಳಿದೇ ಒಳಕ್ಕೆ ಹೋಗುವ ಪದ್ಧತಿ ಇದೆ.

5) ದೇವರು ಎಲ್ಲ ಮಾನವರಿಗಿಂತಲೂ ದೊಡ್ಡವ ಎಂಬುದು ನಿರ್ವಿವಾದ ವಾದ ವಿಚಾರ. ಅದಕ್ಕಾಗಿ ದೇವಾಲಯವು ಬೇರೆ ಎಲ್ಲರ ಮನೆಗಳಿಗಿಂತ ಎತ್ತರ ವಾಗಿರಲೆಂದೇ ಅದಕ್ಕೆ ಗೋಪುರ, ಕಲಶಗಳು ಇರುತ್ತವೆ.

6) ಮಾನವ ವ್ಯಕ್ತಿಯ ಶರೀರವು ಪಂಚಭೌತಿಕವಾಗಿರುವುದರಿಂದ ಪಂಚ ಉಪಾಸನೆಗಳು ಬಳಕೆಯಲ್ಲಿವೆ. ಮಾನವನಲ್ಲಿ ಪೃಥ್ವಿ, ಅಗ್ನಿ, ಜಲ, ವಾಯು, ಆಕಾಶ ಎಂಬೀ ಪಂಚಭೌತ ಅಂಶಗಳಲ್ಲಿ ಯಾವುದಾದರೊಂದು ಪ್ರಬಲವಾಗಿರುತ್ತದೆ. ಆದುದರಿಂದ ಗಂಧ, ರೂಪ, ರಸ, ಸ್ಪರ್ಶ, ಶಬ್ದ ಎಂಬೀ ಪಂಚ ವಿಷಯಗಳಲ್ಲಿ ಒಂದರ ಪ್ರಭಾವವು, ಆಯಾ ತತ್ತ್ವವು ಪ್ರಧಾನವಾಗಿರುವ ವ್ಯಕ್ತಿಗಳ ಮೇಲೆ ಬೀಳುತ್ತದೆ. ಇದರ ಫಲವಾಗಿ ವಿಷ್ಣು, ಶಕ್ತಿ, ಶಿವ, ಸೂರ್ಯ, ಗಣೇಶ ಎಂಬ ಪಂಚ ಉಪಾಸನೆಗಳಲ್ಲಿ ಯಾವುದಾದರೊಂದನ್ನು ಅನುಸರಿಸುತ್ತಾರೆ. ಮುರುಗ, ಅಯ್ಯಪ್ಪ ಈ ದೇವರ ಉಪಾಸನೆ ಈಗೀಗ ಜನಪ್ರಿಯವಾಗುತ್ತಲಿದೆ.

ಈ ಎಲ್ಲ ದೇವತೆಗಳೂ ಏಕೈಕ ಪರಮಾತ್ಮನ ಬೇರೆಬೇರೆ ರೂಪಗಳೇ ಆಗಿವೆ. ಪ್ರತಿಮಾನವನಲ್ಲಿಯೂ ಒಂದು ತತ್ತ್ವವು ಪ್ರಧಾನವಾಗಿ ಇರುವುದರಿಂದ, ಅವನು ಒಂದು ಮೂರ್ತಿಯ ಉಪಾಸನೆಯಲ್ಲಿ ಹೆಚ್ಚು ಶ್ರದ್ಧಾ ಭಕ್ತಿ ತೋರಿಸುತ್ತಾನೆ. ಇದರಿಂದ ಇತರ ದೇವತೆಗಳನ್ನು ಹಳಿಯಬೇಕು, ಹಳಿಯುತ್ತಾನೆ ಎಂಬ ಅಭಿಪ್ರಾಯ ಸರಿಯಲ್ಲ. ಪ್ರಧಾನ ತತ್ತ್ವಾಭಿಮಾನಿ ದೇವರ ಕಡೆಗೆ ವಿಶೇಷ ಆಸಕ್ತಿ ಇದ್ದರೂ, ಇತರ ತತ್ತ್ವಾಭಿಮಾನಿ ದೇವರ ಕಡೆಗೆ ಸಾಮಾನ್ಯ ಆಸಕ್ತಿ ಇದ್ದೇ ಇರುತ್ತದೆ.

7) ರತ್ನ, ವಜ್ರ, ಹೂ, ವಸ್ತ್ರ ಮುಂತಾದುವುಗಳಿಂದ ಅಲಂಕೃತವಾದ ಮೂರ್ತಿಗಳು, ಹೂ ಮತ್ತು ರಂಗವಲ್ಲಿಗಳಿಂದ ಅಲಂಕೃತವಾದ ಪೀಠ, ಬಣ್ಣಬಣ್ಣದ ವಿವಿಧ ವಾಹನಗಳು, ಪರಿಮಳ ದ್ರವ್ಯಗಳ ಸುವಾಸನೆ, ಘಂಟೆ, ಶಂಖ, ನಗಾರಿ, ಜಾಗಟೆ, ಡೋಲು, ಓಲಗ, ತಾಳ ಮುಂತಾದ ವಾದ್ಯಗಳ ನಿನಾದ, ಮಂತ್ರ ಘೋಷ, ಆರತಿ, ತೀರ್ಥ ಪ್ರಸಾದ ವಿನಿಯೋಗ, ಶಠಾರಿ ಸ್ಪರ್ಶ, ಭಾಗವತ ಗೋಷ್ಠಿ, ಎಲ್ಲ ಇರುವ ದೇವಾಲಯಗಳು ಪಂಚ ವಿಷಯಗಳಿಗೆ ದಾಸರಾದ ಎಲ್ಲ ರೀತಿಯ ಮಾನವರನ್ನೂ ಆಕರ್ಷಿಸಬಲ್ಲುವು ಹಾಗೂ ಪಂಚೇಂದ್ರಿಯಗಳನ್ನು ತಣಿಸಬಲ್ಲುವು.

8) ದೇವಾಲಯಗಳಲ್ಲಿ ಉಪಯೋಗಿಸುವ ಪರಿಮಳ ದ್ರವ್ಯಗಳಿಂದ ಭೂತ ಬಾಧೆಯು ದೂರವಾಗುತ್ತದೆ. ಅವು ವಾಯುವಿನಲ್ಲಿರುವ ಉಷ್ಣಾಂಶ ಮತ್ತು ವಿಷಾಣುಗಳನ್ನು ಹೋಗಲಾಡಿಸಿ, ರಕ್ತ ಶುದ್ಧಿಗೆ ಮತ್ತು ಆರೋಗ್ಯಕ್ಕೆ ಬೇಕಾದ ಆಮ್ಲಜನಕ ಮತ್ತು ಓಜೋನ್‌ಗಳನ್ನು ಹೆಚ್ಚಿಸುತ್ತವೆ. ಅಲ್ಲದೆ ಮೆದುಳನ್ನು ತಂಪಾಗಿರಿಸುತ್ತವೆ ; ದುಃಖ, ಚಿಂತೆ, ಚಂಚಲತೆ ಮೊದಲಾದ ವಿಷಮ ಕಂಪನಗಳು ಮನಸ್ಸಿನಿಂದ ದೂರಾಗುತ್ತವೆ.

9) ಘಂಟೆ, ಶಂಖ, ಜಾಗಟೆ, ನಗಾರಿ, ವಾದ್ಯ, ವೇದಪ್ರಬಂಧ ಪಾರಾಯಣ, ಸಂಗೀತ, ನೃತ್ಯ ಮುಂತಾದ ಶಬ್ದದಿಂದ ಆಗುವ ಪ್ರಭಾವ ಅಪರಿಮಿತ

ವಾದುದು. ಮಂತ್ರ, ಸ್ತೋತ್ರ, ಹಾಡು, ಕೀರ್ತನೆಗಳಲ್ಲಿನ ಶಬ್ದಗಳ ಸರಿಯಾದ ಉಚ್ಚಾರಣೆಯಿಂದ ನಾದದ ಅಲೆಗಳು ಉತ್ಪತ್ತಿಯಾಗಿ ತನ್ಮೂಲಕ ಶಕ್ತಿ ಉದ್ಭವಿಸುತ್ತದೆ. ಇದು ನಮ್ಮ ಶರೀರದ ಒಳಗಿರುವ ನರನಾಡಿಗಳು, ಅಂಗಾಂಗಗಳು ಹಾಗೂ ಮನಸ್ಸಿನ ಮೇಲೆ ಸೂಕ್ಷ್ಮ ಪರಿಣಾಮವನ್ನುಂಟುಮಾಡುತ್ತದೆ. ಈ ನಾದದ ಅಲೆಗಳಿಂದ ಸ್ವತಃ ಆರೋಗ್ಯ, ಬೆಳವಣಿಗೆ ಹೊಂದುವುದಲ್ಲದೆ, ನಾವು ಇಚ್ಛಿಸಿದ ರೀತಿಯಲ್ಲಿ ಇತರರ ಮೇಲೂ ಪ್ರಭಾವ ಬೀರಬಹುದು. ಈ ಬಗ್ಗೆ ಪ್ರಾಚೀನ ಋಷಿಗಳು ಪ್ರಯೋಗ, ಪರಿಶೀಲನೆ ನಡೆಸಿ, ಸಿದ್ಧಾಂತವನ್ನು ಕಂಡುಹಿಡಿದು, ಮಂತ್ರ–ಸ್ತೋತ್ರ–ಕೀರ್ತನೆಗಳನ್ನು ರಚಿಸಿದ್ದಾರೆ.

ಘಂಟಾರವದಿಂದ ದುಷ್ಟ ಶಕ್ತಿಗಳು, ಭೂತಪ್ರೇತಗಳು ದೂರ ಸರಿದು, ಸಾಧಕನ ಯತ್ನದಲ್ಲಿ ತೊಂದರೆ ತಪ್ಪಿ, ಅವನ ಮನಸ್ಸಿನ ಚಂಚಲತೆ ದೂರವಾಗಿ, ಮನಸ್ಸಿನ ಏಕಾಗ್ರತೆ ಹಾಗೂ ಭಗವಂತನ ಮೇಲಿನ ಭಕ್ತಿ ಇವು ವರ್ಧಿಸಲು ನೆರವು ಸಿಗುತ್ತದೆ. ಘಂಟಾನಾದ ಇದ್ದಲ್ಲಿ ದೇವರು ಭಕ್ತನ ಪೂಜಾಸ್ಥಾನಕ್ಕೆ ಬರಬೇಕೆಂಬ ಪ್ರೀತಿಯ ಆಹ್ವಾನವೂ ಇರುತ್ತದೆ.

ಹೀಗೆ ಶಬ್ದವು ಕೀಟಾಣು, ರೋಗಾಣುಗಳನ್ನು ಹೋಗಲಾಡಿಸಿ, ವಾಯುವನ್ನು ಶುದ್ಧಿಗೊಳಿಸುತ್ತವೆ. ಈ ರೋಗನಿವಾರಕ, ಸ್ಫೂರ್ತಿದಾಯಕ ಶಬ್ದಗಳಿಂದ ಹೊರಡುವ ಅಲೆಗಳು ಅನೇಕ ರೀತಿಯ ಖಾಯಿಲೆಗಳನ್ನು ಗುಣಪಡಿಸಿರುವ ನಿದರ್ಶನಗಳಿವೆ.

10) ಶ್ರೇಷ್ಠ ಶಿಲೆಯಾದ ಮೂರ್ತಿ ಮತ್ತು ಸಾಲಗ್ರಾಮವನ್ನು ತೊಳೆದ, ಮಂತ್ರಪೂರಿತವಾದ, ಕೇಸರಿ–ಏಲಕ್ಕಿ-ಪಚ್ಚಕರ್ಪೂರ-ತುಲಸಿಗಳಿಂದ ಕೂಡಿದ ತೀರ್ಥವು, ರೋಗನಾಶಕ ಹಾಗೂ ಲಾಭದಾಯಕ ಆದುದು.

11) ಶಠಾರಿ ಸೇವೆಯು ನಾವು ಪರಮಾತ್ಮನ ದಾಸರು ಎಂಬುದನ್ನು ಸದಾ ಜ್ಞಾಪಿಸಿ ನಮ್ಮಲ್ಲಿನ ಅಹಂಕಾರವನ್ನು ಹೋಗಲಾಡಿಸುತ್ತದೆ.

12) ದೇವಾಲಯಕ್ಕೆ ಹೋಗುವ ಮುನ್ನ ಅಥವಾ ದೇವರ ಪೂಜೆ ಮಾಡುವ ಮುನ್ನ, ಸೂರ್ಯೋದಯಕ್ಕೆ ಮುಂಚೆ ನದಿ, ಪವಿತ್ರ ತೀರ್ಥಗಳಲ್ಲಿ ಸ್ನಾನ ಮಾಡುವುದರಿಂದ ದುಃಸ್ವಪ್ನಗಳು ದೂರವಾಗುವುದಲ್ಲದೆ, ಮಾನಸಿಕ ಸ್ವಚ್ಛತೆ ಉಂಟಾಗುವುದರಿಂದ ಶಾಂತಿ ದೊರಕಿ, ದೇಹದಲ್ಲಿ ಬಲ, ಶಕ್ತಿ, ಜ್ಞಾಪಕಶಕ್ತಿ, ಆಯುಸ್ಸು ಹೆಚ್ಚುತ್ತವೆ. ಕೆಲಸಮಾಡಲು ಹುಮ್ಮಸ್ಸು ಸಿಗುತ್ತದೆ. ಸತ್ತ್ವಗುಣವು ಹೆಚ್ಚಾಗುತ್ತದೆ.

13) ಸ್ನಾನದ ನಂತರ ಕ್ರಿಮಿನಾಶಕಗಳಾಗಿರುವ ನಾಮ, ಗಂಧ, ಗೋಪಿ, ಭಸ್ಮಗಳನ್ನು ಮೈಮೇಲೆ ಧರಿಸುವುದರಿಂದ, ಅನೇಕ ಚರ್ಮರೋಗಗಳು ನಾಶವಾಗಿ ಮೆದುಳಿಗೆ ತಂಪು–ಹರ್ಷ ದೊರೆತು, ಏಕಾಗ್ರತೆ ಸಾಧಿಸಬಹುದು.

14) ದೇವರ ಪೂಜೆಗಾಗಿ ಹೂ, ಪತ್ರೆ, ತುಳಸಿಗಳನ್ನು ತರಲು ಸ್ವಲ್ಪ ದೂರ ಎದೆ, ಬೆನ್ನುಗಳ ಮೇಲೆ ಬಟ್ಟೆ ಇಲ್ಲದೆ ನಡೆದು ಹೋಗಿ ಬಂದರೆ ಶರೀರಕ್ಕೆ ಬಲ, ಮನಸ್ಸಿಗೆ ಹರ್ಷ ಉಂಟಾಗಿ ಆರೋಗ್ಯವು ವರ್ಧಿಸುತ್ತದೆ. ಸೂರ್ಯರಶ್ಮಿಯಲ್ಲಿರುವ ಕಿರಣಗಳಿಂದ ಚರ್ಮದಲ್ಲಿ ಹುಟ್ಟಿದ ಜೀವಾತು ವಸ್ತುವು ದೇಹ ರಕ್ಷಣೆಯ ಕಾರ್ಯ ದಲ್ಲಿ ನೆರವು ನೀಡುತ್ತದೆ.

15) ದೇವಾಲಯಕ್ಕೆ ಹೋಗುವಾಗ, ದೇವರ ಪೂಜೆ ಮಾಡುವಾಗ, ಶುಭ್ರ ವಾದ ರೇಷ್ಮೆ ಬಟ್ಟೆಗಳನ್ನು ಧರಿಸುವುದರಿಂದ ಕೀಟಾಣು, ರೋಗಾಣುಗಳು ಶರೀರ ವನ್ನು ಪ್ರವೇಶಿಸಲಾರವು. ಜೊತೆಗೆ ಉಪಾಸನೆ ಮಾಡುವುದರ ಫಲವಾಗಿ ದೇಹದಲ್ಲಿ ಉದ್ಭವಿಸಿದ ಶಕ್ತಿಯು ಶರೀರದಲ್ಲಿಯೇ ನಿಲ್ಲಲು ಸಹಾಯವಾಗುತ್ತದೆ. ಇದರಿಂದ ಇತರರ ಕಣ್ಣಿಗೆ ಸೌಂದರ್ಯ ಸಂತೋಷಗಳನ್ನೂ ಉಂಟುಮಾಡಬಹುದು.

16) ಭಗವಂತನ ಧ್ಯಾನ, ಚಿಂತನೆಗಳಲ್ಲಿ ನಿರತರಾಗುವಾಗ, ಜಿಂಕೆ ಅಥವಾ ಹುಲಿಯ ಚರ್ಮದ ಆಸನದ ಮೇಲೆ ಕುಳಿತುಕೊಳ್ಳುವುದರಿಂದ, ಭಯವಿಲ್ಲದೆ ಏಕಾ ಗ್ರತೆಯಿಂದ ಪರಮಾತ್ಮನನ್ನು ಭಜಿಸಲು ಸಾಧ್ಯವಾಗುತ್ತದೆ.

17) ಪ್ರಾತಃಕಾಲದ ಎಳೆಯ ಬಿಸಿಲಿನಲ್ಲಿ ಸಾಷ್ಟಾಂಗ ನಮಸ್ಕಾರ ಹಾಗೂ ಪ್ರದಕ್ಷಿಣೆಗಳನ್ನು ಮಾಡುವುದರಿಂದ ದೇಹದಲ್ಲಿರುವ ವ್ಯಾಧಿಗಳೆಲ್ಲ ನಿರ್ಮೂಲವಾಗಿ, ಮಾಂಸಖಂಡಗಳು ದಷ್ಟ ಪುಷ್ಟವಾಗಿ ಬೆಳೆದು ವಜ್ರಕಾಯ ಲಭಿಸುತ್ತದೆ. ಇದರ ಫಲವಾಗಿ ಮೇಧಾ, ಕ್ರಿಯಾ, ಇಚ್ಛಾ ಎಂಬ ಮೂರು ಶಕ್ತಿಗಳೂ ಬಲಗೊಳ್ಳುತ್ತವೆ.

ಹೀಗೆ ನಮ್ಮ ಪ್ರಾಚೀನ ಋಷಿಗಳು ನಮ್ಮ ದೇವಾಲಯಗಳನ್ನು ವಿಜ್ಞಾನ, ಕಲೆ, ಆರೋಗ್ಯ, ಸಭ್ಯತೆ, ಸಂಸ್ಕೃತಿ, ಏಕಾಗ್ರತೆಗಳೆಲ್ಲದರ ಕೇಂದ್ರವನ್ನಾಗಿಸಿ, ಸತ್ಯ, ಶಿವ, ಸೌಂದರ್ಯಗಳ ನೆಲೆವೀಡಾಗಿಮಾಡಿ ಮಹೋಪಕಾರ ಮಾಡಿದ್ದಾರೆ. ಸತ್ಯ ಸುಗುಣ ಸುಂದರಗಳೆಂಬ ಆದರ್ಶಗಳನ್ನು ಹೊಂದಬೇಕಾದರೆ, ಅಂತಹ ವಿಚಾರವನ್ನು ಮನಸ್ಸಿನಲ್ಲಿ ತಂದುಕೊಳ್ಳುವುದು, ಅಂತಹ ಕೃತಿಗಳನ್ನು ರಚಿಸುವುದು, ಅಂತಹ ಜೀವನ ನಡೆಸುವುದು ನಮ್ಮ ನಾಗರಿಕತೆಯ ಪ್ರಧಾನ ಲಕ್ಷಣ ಆಗಬೇಕು.

ದೇವರೇ ಇಲ್ಲವೆಂದು ಹೇಳುವ ಕೆಲವು ಆಧುನಿಕ ಜನರ ತಂಡವೊಂದಿದ್ದರೂ, ಈ ಜಗತ್ತಿನ ವ್ಯವಹಾರಗಳನ್ನೆಲ್ಲಾ ನಿಯಮಬದ್ಧವಾಗಿ ನಿರ್ವಹಿಸುವ ಅಗೋಚರ ಶಕ್ತಿಯೊಂದಿದೆ ಎಂಬುದನ್ನು ನಮ್ಮ ನಿತ್ಯ ಬದುಕಿನ ಅನುಭವಗಳಿಂದಲೇ ಅರಿತು ಕೊಳ್ಳಬಹುದು. ಆ ಶಕ್ತಿಯನ್ನು ಸಾಕ್ಷಾತ್ಕಾರ ಮಾಡಿಕೊಂಡು, ಅದರ ಗುಣ ವನ್ನು ಪಡೆದು, ಆನಂದ ಹೊಂದಲು ಯತ್ನಿಸುವುದೇ ಪೂಜೆ ಎನಿಸುತ್ತದೆ.

ಆಗಾಗ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವುದು ಬದುಕಿನ ಉಳಿದ ಸಮಯದಲ್ಲಿ ಮಾಡುವ ಅಕೃತ್ಯಗಳಿಗೆಲ್ಲ ರಹದಾರಿ, ಅಪ್ಪಣೆ ಚೀಟಿ, ಪರವಾನಗಿ ಎಂದು ಅನೇಕರು ಭಾವಿಸಿರುವಂತೆ ಕಾಣಬರುತ್ತದೆ. ಪದಾರ್ಥವನ್ನು ಬಿಟ್ಟು ನೆರಳನ್ನು ಬಲವಾಗಿ ಹಿಡಿದಿರುವ ಈ ಜನಕ್ಕೆ ಅರ್ಚಾಮೂರ್ತಿಗಳು, ಕೇವಲ ವಿಗ್ರಹ (Idols) ಆಗಿವೆಯೇ ಹೊರತು ಆದರ್ಶ (Ideals) ಆಗಿಲ್ಲ. ಆದುದರಿಂದಲೇ ಸಮಾಜದಲ್ಲಿ ಕಪಟ, ವಂಚನೆ, ಸುಳ್ಳು, ಮುಂತಾದ ದುರಾಚಾರಗಳು ಕಂಡುಬಂದು ನಾವು ಅಧಃಪಾತಾಳಕ್ಕೆ ಇಳಿಯುತ್ತಿದ್ದೇವೆ.

ಜನತೆಯನ್ನು ಪ್ರೀತಿಸಿ ಅವರಿಗೆ ಸಲ್ಲಿಸುವ ಸೇವೆ, ಸಹಾಯ, ಸಹಕಾರಗಳೇ ಭಗವಂತನ ಕೈಂಕರ್ಯವಾದುದರಿಂದ, ಭಕ್ತಿಯು ಕೇವಲ ತೋರಿಕೆಯ ಪ್ರವೃತ್ತಿಯಾಗಬಾರದು. ದಿನದಲ್ಲಿ ಕೆಲವು ಘಂಟೆಗಳ ಕಾಲವೋ, ವಾರದಲ್ಲಿ ಕೆಲವು ದಿನಗಳ ಕಾಲವೋ, ವಿಗ್ರಹಗಳ ಮುಂದೆ ಕೂತು ನಿಂತು ಸ್ತುತಿಸಿ ಪೂಜೆ ಸಲ್ಲಿಸಿದ ಭಕ್ತನು, ಅಲ್ಲಿಗೆ ತನ್ನ ಕರ್ತವ್ಯ ಮುಗಿದು ಹೋಯಿತೆಂದು ಭಾವಿಸಿದರ ಅದು ತಪ್ಪಾಗುವುದು. ತೋರಿಕೆಯ ಪೂಜೆ, ಭಜನೆಗಳಿಗಿಂತ ಮಾನವನ ನಿತ್ಯದ ಪ್ರತಿಯೊಂದೂ ಕೆಲಸದಲ್ಲಿ ಪ್ರಾಮಾಣಿಕತೆಯು ಪ್ರತಿಬಿಂಬಿತವಾದರೆ ಮಾತ್ರ ಅವನದ್ದು ನಿಜವಾದ ಭಕ್ತಿಯಾದೀತು. ಅಂದರೆ ಕರ್ಮ ಕರ್ತವ್ಯಗಳನ್ನೆಲ್ಲಾ ಯಜ್ಞದೃಷ್ಟಿಯಿಂದ ಮಾಡಿ, ಜನತೆಯನ್ನು ಉದ್ಧರಿಸಿ, ಆ ಮೂಲಕ ಆತ್ಮೋದ್ಧಾರ ಮಾಡಿಕೊಳ್ಳುವುದು ದೇವರ ಪೂಜೆಯ ಫಲವಾಗಬೇಕು.

ಮಾನವರೆಲ್ಲರೂ ಪರನಾಶಕ, ಪರಪೀಡಕ, ಪರಸ್ವಾಪಹಾರಿ, ಜೀವಿಗಳಾಗದೆ ಪರಾನುಕೂಲ, ಪರೋಪಕಾರಿ, ಭಾವನಾತೃಪ್ತ, ನಿಸರ್ಗಸ್ಥ ಜೀವಿಗಳಾದರೆ, ಆಗ ಆ ಪ್ರಪಂಚದಲ್ಲಿ ಸರ್ವೋದಯ ಸಮಾಜ ಬೆಳೆದು ಇಹದಲ್ಲಿಯೇ ಮೋಕ್ಷ ಸದೃಶ ಜೀವನವನ್ನು ಕಾಣಬಹುದು.

ಮುಖ್ಯವಾಗಿ ಆಗಮಗಳಲ್ಲಿ ಹೇಳಿರುವಂತೆ ತಮ್ಮದೇ ಆದ ಸಂಸ್ಕೃತಿ, ಕಲೆ ಮತ್ತು ಧಾರ್ಮಿಕ ಸಂಘಟನೆಗಳನ್ನು ಪ್ರಸಾರಮಾಡುತ್ತಲಿರುವ ದೇವಾಲಯಗಳು, ನಮ್ಮ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಜೀವನದ ಅತ್ಯವಶ್ಯಕ ಅಂಗಗಳೆನಿಸಿ, ದೇವರು–ಧರ್ಮ–ಸೇವೆಗಳ ಹೆಸರಿನಲ್ಲಿ ಮಾನವ-ಮಾನವರಲ್ಲಿ ನಡೆಯುತ್ತಿರುವ ಅನ್ಯಾಯ, ಅಪಮಾನ, ಮೋಸ, ಶೋಷಣೆ, ಜಾತೀಯತೆ, ಪಕ್ಷಪಾತ, ಭ್ರಷ್ಟಾಚಾರ ಮುಂತಾದ ಪಾತಕಗಳನ್ನೆಲ್ಲಾ ಹೋಗಲಾಡಿಸಲು ತೀವ್ರ ಕ್ರಮಗಳನ್ನು ಕೈಗೊಳ್ಳಬೇಕು. ಈ ಕೆಲಸದಲ್ಲಿ ದೇವಾಲಯಗಳು ಪ್ರಮುಖಪಾತ್ರ ವಹಿಸುವಂತೆ ಮಾಡಬೇಕಾದುದು ಧರ್ಮದರ್ಶಿಗಳ ಹಾಗೂ ಸರ್ಕಾರದ ಆದ್ಯ ಕರ್ತವ್ಯ.

## 4. ಪ್ರಮುಖ ದೇವಾಲಯಗಳು

ಚತ್ವಾರಿಂಶದ್ದಿವ್ಯದೇಶಾಃ ಚೋಳದೇಶೇ ಪ್ರಕೀರ್ತಿತಾಃ
ಪಾಂಡ್ಯ ರಾಜ್ಯಸ್ಯ ದೇಶೇತು ಅಷ್ಟಾದಶ ಇತೀರಿತಾಃ ||
ದ್ವೇಕ್ಷೇತ್ರೇ ಮಧ್ಯದೇಶೇಚ ಚೇರದೇಶೇ ತ್ರಯೋದಶ
ತುಂಡೀರ ಮಂಡಲ ಕ್ಷೇತ್ರಾಣಿ ದ್ವಾವಿಂಶತಿ ರಿತಿಸ್ಮೃತಃ ||
ಉದೀಚ್ಯಾಂ ದ್ವಾದೇಶೇತ್ಯಾಹುಃ ವೈಕುಂಠೇನ ಸಮಂತಥಾ
ಸಂಖ್ಯಾತುದಿವ್ಯ ಕ್ಷೇತ್ರಾಣಾಂ ಅಷ್ಟೋತ್ತರಶತಂ ವಿದುಃ ||

ಇದರಂತೆ ಕಲ್ಪನೆಯ ಪರಲೋಕದವುಗಳಾದ ಕ್ಷೀರಾಬ್ಧಿ, ವೈಕುಂಠ ಎರಡನ್ನೂ ಬಿಟ್ಟರೆ, ಉಳಿದ 106 ದಿವ್ಯ ಕ್ಷೇತ್ರಗಳು ಭಾರತದಲ್ಲಿವೆ.

ಅಯೋಧ್ಯೆ, ನೈಮಿಶಾರಣ್ಯ, ಸಾಲಗ್ರಾಮ, ಬದರಿ, ದೇವಪ್ರಯಾಗ, ನಂದಪ್ರಯಾಗ, ದ್ವಾರಕೆ, ಗೋವರ್ಧನ, ಗೋಕುಲ, ಮಥುರ ಮುಂತಾದ ಇಪ್ಪತ್ತೆರಡು ಉತ್ತರ ಭಾರತದಲ್ಲಿವೆ. ದಕ್ಷಿಣ ಭಾರತದಲ್ಲಿ 84 ಕ್ಷೇತ್ರಗಳಿವೆ.

ಕಾವೇರಿಯಿಂದ ದಕ್ಷಿಣ ಪೆನ್ನಾರ್‌ವರೆಗಿನ ಚೋಳನಾಡಿನಲ್ಲಿ ಶ್ರೀರಂಗ, ಕುಂಭಕೋಣ, ಚಿದಂಬರ ಮುಂತಾದ ನಲವತ್ತು ಸ್ಥಳಗಳಿವೆ.

ಕಾವೇರಿಯಿಂದ ಕೆಳಗಿನ ಸಮುದ್ರದವರೆಗಿನ ಪಾಂಡ್ಯನಾಡಿನಲ್ಲಿ ತಿರುಮಾಲಿರುಂ ಶೋಲೈ, ತಿರುಕ್ಕೋಟ್ಟಿಯೂರ್, ತಿರುಕ್ಕುರಂಗಡಿ ಮುಂತಾದ ಹದಿನೆಂಟು ಸ್ಥಳಗಳಿವೆ.

ಚೋಳನಾಡಿಗೂ, ತೊಂಡೈನಾಡಿಗೂ ಇರುವ ನಡುನಾಡಿನಲ್ಲಿ ತಿರುಕ್ಕೋವಲೂರು, ತಿರುವಹೀಂದ್ರಪುರ ಎರಡು ಮುಖ್ಯ ಸ್ಥಳಗಳು.

ಕಾವೇರಿಯಿಂದ ದಕ್ಷಿಣ ಪೆನ್ನಾರ್ ಮತ್ತು ಸ್ವರ್ಣಮುಖಿ ನದಿಯವರೆಗಿನ ತೊಂಡೈನಾಡಿನಲ್ಲಿ ಕಂಚಿ ಅಥವಾ ಹಸ್ತಿಗಿರಿ ಮುಂತಾದ ಇಪ್ಪತ್ತೆರಡು ಸ್ಥಳಗಳಿವೆ.

ತೊಂಡೈ ನಾಡಿನ ಮೇಲೆ ಉತ್ತರಭಾಗದಲ್ಲಿರುವ ವಡನಾಡಿನಲ್ಲಿ ತಿರುಮಲೆ, ಅಹೋಬಿಲ ಎಂಬ ಎರಡು ಸ್ಥಳಗಳಿವೆ.

ಕೆಲವು ಸ್ಥಳಗಳನ್ನು ಕೆಲವು ಆಳ್ವಾರುಗಳು ಸಂದರ್ಶಿಸಿದ್ದರೂ, ದಕ್ಷಿಣ ಭಾರತದ ಎಲ್ಲ ಕ್ಷೇತ್ರಗಳನ್ನೂ ಸಂದರ್ಶಿಸಿದವರು ತಿರುಮಂಗೈ ಆಳ್ವಾರ್ ಒಬ್ಬರೇ.

"ಶ್ರೀರಂಗಂ ವೃಷಭಾದ್ರಿಶ್ಚ ತಥಾ ಹಸ್ತಿ ಗಿರಿಸ್ಸ್ವತ
ನಾರಾಯಣಾ ಚಲಶ್ಚೈವ ಮಮಧಾಮ ಚತುಷ್ಟಯಂ ||"

ಎಂಬ ಭಗವದ್ವಾಣಿಯಂತೆ ಕರುಣಾನಿವಾಸನಾದ ಶ್ರೀಮನ್ನಾರಾಯಣನು, ಮಾತು–ಮನಸ್ಸುಗಳಿಗೆ ಅಗೋಚರನಾದ ತನ್ನನ್ನು ಜೀವಿಗಳು ದರ್ಶನಮಾಡಿ ಕೃತಾರ್ಥರಾಗ

ಲೆಂಬ ಉದ್ದೇಶದಿಂದ ಅರ್ಚಾ ವಿಗ್ರಹಗಳ ರೂಪದಲ್ಲಿ ಶ್ರೀರಂಗ, ತಿರುಮಲೆ, ಕಂಚಿ, ಮೇಲುಕೋಟೆ ಎಂಬೀ ನಾಲ್ಕು ಮುಖ್ಯ ಕ್ಷೇತ್ರಗಳಲ್ಲಿ ನೆಲಸಿದ್ದಾನೆ. ಇವುಗಳ ದರ್ಶನ ಅಥವಾ ಇವುಗಳಲ್ಲಿ ವಾಸ ರಾಮಾನುಜರ ದಿವ್ಯಾಜ್ಞೆಗಳಲ್ಲಿ ಒಂದು.

"ಶ್ರೀರಂಗಮಂಗಳಮಣಿಂ ಕರುಣಾನಿವಾಸಂ
ಶ್ರೀವೇಂಕಟಾದ್ರಿ ಶಿಖರಾಲಯ ಕಾಳಮೇಘಂ ||
ಶ್ರೀಹಸ್ತಿಶೈಲ ಶಿಖರೋಜ್ವಲ ಪಾರಿಜಾತಂ
ಶ್ರೀಶಂ ನಮಾಮಿ ಶಿರಸಾ ಯದುಶೈಲದೀಪಂ ||"

ಎಂಬೀ ಶ್ಲೋಕವನ್ನು ಭಗವದ್ರಾಮಾನುಜರ ಆಜ್ಞೆಯಂತೆ ಶ್ರೀವೈಷ್ಣವರು ಪ್ರತಿ ದಿನವೂ ಅನುಸಂಧಾನ ಮಾಡುತ್ತಾರೆ.

ಶ್ರೀರಂಗದಲ್ಲಿ ಪ್ರಣವಾಕಾರ ವಿಮಾನದ ದೇವಾಲಯದಲ್ಲಿ ಭಕ್ತರಿಗೆ ಮಂಗಳಗಳನ್ನು ಕರುಣಿಸುವ ಚಿಂತಾಮಣಿಯಂತಹ ರಂಗನಾಥನಾಗಿದ್ದಾನೆ; ತಿರುಮಲೆಯ ಶ್ರೀ ವೇಂಕಟಾಚಲ ಶಿಖರದ ಆನಂದನಿಲಯ ವಿಮಾನದ ದೇವಾಲಯದಲ್ಲಿ ಕಾಳಮೇಘ ಅಥವಾ ಕಪ್ಪು ಮೋಡದಂತೆ ಕರುಣೆಯ ಮಳೆಗರೆಯುವ ಶ್ರೀನಿವಾಸನಾಗಿದ್ದಾನೆ; ಕಾಂಚೀಪುರ ಅಥವಾ ಹಸ್ತಿಗಿರಿಯ ಶಿಖರದ ಪುಣ್ಯಕೋಟಿ ವಿಮಾನದ ದೇವಾಲಯದಲ್ಲಿ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವ ಉಜ್ವಲ ಪಾರಿಜಾತದಂತಹ ವರದರಾಜನಾಗಿದ್ದಾನೆ; ಅಜ್ಞಾನದ ಅಂಧಕಾರದಲ್ಲಿ ಕಣ್ಣು ಕಾಣಿಸದವರಿಗೆ ಯದುಗಿರಿಯ ತುದಿಯಲ್ಲಿ ದೀಪದ ಹಾಗೆ ನಿಂತು ದಾರಿತೋರಿಸುವ ಚಲುವ ನಾರಾಯಣನಾಗಿದ್ದಾನೆ.

ಶ್ರೀರಂಗದ ರಂಗನಾಥನು ರಾಮಾತ್ಮಕ, ತಿರುಮಲೆಯ ಶ್ರೀನಿವಾಸನು ಕೃಷ್ಣಾತ್ಮಕ ಮತ್ತು ಕಂಚಿಯ ವರದರಾಜನು ರಾಮ-ಕೃಷ್ಣಾತ್ಮಕ ಆಗಿದ್ದಾರೆ ಎಂಬುದು ನಿಗಮಾಂತ ದೇಶಿಕರ ಅಭಿಪ್ರಾಯ.

ಶ್ರೀರಂಗ, ಕಂಚಿ, ತಿರುಮಲೆ ಇವು ಮೂರೂ ಮೊದಲ ಮೂವರು ಶ್ರೀವೈಷ್ಣವ ಆಚಾರ್ಯರ ಸಾಮಾಜಿಕ ಹಾಗೂ ಆಧ್ಯಾತ್ಮಿಕ ನೆಲೆಗಳಾಗಿದ್ದುವು. ನಾಲ್ಕನೆಯ ಮೇಲುಕೋಟೆ ರಾಮಾನುಜರ ಕಾಲದಲ್ಲಿ ಪ್ರಾಮುಖ್ಯತೆಗೆ ಬಂದಿತು.

ಶ್ರೀ ಜಗನ್ನಾಥದಲ್ಲಿ ಪ್ರಸಾದ, ತಿರುಮಲೆಯಲ್ಲಿ ತೀರ್ಥ, ತಿರುನಾರಾಯಣ ಪುರದಲ್ಲಿ ಸ್ಪರ್ಶ—ಪಾವನವೆಂಬುದು ಹಿರಿಯರ ಅಭಿಪ್ರಾಯ. ಹಾಗೆಯೇ ಶ್ರೀರಂಗದ ನಡೆ (ನಾಟ್ಯದ ಉತ್ಸವ), ತಿರುಪತಿಯ ಮುಡಿ (ಕೂದಲು ಕೊಡುವ ಕೈಂಕರ್ಯ), ಕಂಚಿಯ ಕೊಡೆ (ಗರುಡೋತ್ಸವದ ಭವ್ಯವಾದ ಛತ್ರಿ), ಮೇಲು

ಕೋಟೆಯ ಮುಡಿ (ದೇವರ ನವರತ್ನ ಖಚಿತವಾದ ಕಿರೀಟ) ಇವು ನಾಲ್ಕೂ ಇತಿಹಾಸ ಪ್ರಸಿದ್ಧವೆನಿಸಿವೆ.

## 1. ಶ್ರೀರಂಗದ ರಂಗನಾಥ

ತಮಿಳು ನಾಡಿನಲ್ಲಿರುವ ಸುಪ್ರಸಿದ್ಧ ವಿಷ್ಣುಕ್ಷೇತ್ರವಾದ ಇದಕ್ಕೆ ಈಗ ತಿರುವರಂಗ ಎಂಬ ಹೆಸರು ಬಂದಿದೆ. ಊರಿನ ಸುತ್ತಲೂ ಪವಿತ್ರವಾದ ಕಾವೇರಿ ನದಿಯು ಹರಿಯುತ್ತದೆ. ಹದಿನೈದು ಗೋಪುರಗಳು, ಏಳು ಪ್ರಾಕಾರಗಳು ಇರುವ ರಂಗನಾಥ ಸ್ವಾಮಿ ದೇವಾಲಯವು ಪ್ರಾಚೀನವಾದುದು ಹಾಗೂ ಸುಪ್ರಸಿದ್ಧವಾದುದು.

ಈ ದೇವಾಲಯದ ನಿರ್ಮಾಣ, ಜೀರ್ಣೋದ್ಧಾರ ಮಾಡಿದವರು ಚೋಳ ರಾಜರು. ಧರ್ಮವರ್ಮಚೋಳನು ಸ್ಥಾಪಿಸಿದ ಈ ದೇವಾಲಯವು ಕೆಲಕಾಲ ಮುಳ್ಳು, ಪೊದೆಗಳಿಂದ ಮುಚ್ಚಿಹೋಗಿದ್ದು ಗಿಳಿಚೋಳರಾಜನಿಂದ ಜೀರ್ಣೋದ್ಧಾರವಾಯಿತು. ಮಹೇಂದ್ರಚೋಳನು ದೇವಾಲಯಕ್ಕೆ ಹೊಸ ಕಟ್ಟಡಗಳನ್ನು ಸೇರಿಸಿದನು. ನಂದಚೋಳನು ತನ್ನ ಮಗಳು ಕೋಮಲವಲ್ಲಿಯನ್ನೂ, ಕೇರಳರಾಜ ಕುಲಶೇಖರಾಳ್ವಾರರು ತಮ್ಮ ಮಗಳು ಕುಲವಲ್ಲಿಯನ್ನೂ, ರಂಗನಾಥ ದೇವರಿಗೆ ವಿವಾಹ ಮಾಡಿಕೊಟ್ಟು, ದೇವಾಲಯಕ್ಕೆ ಅಪಾರ ಧನವನ್ನೂ ಕೊಟ್ಟರು. ತೊಂಡರಡಿಪ್ಪೊಡಿಯಾಳ್ವಾರರು ಈ ದೇವರ ಪುಷ್ಪಕೈಂಕರ್ಯ ಮಾಡುತ್ತಿದ್ದರು. ಆಂಡಾಳ್ ರಂಗನಾಥನಲ್ಲಿ ಐಕ್ಯವಾದಳು. ತಿರುಮಂಗೈ ಆಳ್ವಾರರು ಈ ದೇವರನ್ನು ಪ್ರಾರ್ಥಿಸಿ ತಿರುವಾಯ್ಮೊಳಿಗೆ ವೇದಕ್ಕೆ ಸಮಾನವಾದ ಅರ್ಹತೆಯನ್ನು ಸಂಪಾದಿಸಿ ಕೊಟ್ಟು, ದೇವಾಲಯದ ಪ್ರಾಕಾರ, ಗೋಪುರಗಳನ್ನು ಕಟ್ಟಿಸಿದರು. ಸುಂದರ ಪಾಂಡ್ಯ, ವಲ್ಲಭದೇವ ಪಾಂಡ್ಯ, ಕುಲೋತ್ತುಂಗಚೋಳ, ರಾಜೇಂದ್ರಚೋಳ ಇವರೂ ದೇವಾಲಯದ ಕಟ್ಟಡವನ್ನು ವಿಸ್ತರಿಸಲು ನೆರವು ನೀಡಿದ್ದಾರೆ.

ತಮ್ಮ ಗುರುಗಳಾದ ಯಾಮುನರ ಮನೋಭೀಷ್ಟಗಳನ್ನೆಲ್ಲ ರಾಮಾನುಜರು ಪೂರೈಸಿದುದು ಇಲ್ಲಿ. ಆದುದರಿಂದ ಇದು ರಾಮಾನುಜ ಸಿದ್ಧಾಂತದ ಮುಖ್ಯ ಕ್ಷೇತ್ರ ಎನ್ನಬಹುದು.

ಬಹುಕಾಲ ಬ್ರಹ್ಮನಿಂದ ಆರಾಧಿಸಲ್ಪಟ್ಟು, ಅವನಿಂದ ಅಯೋಧ್ಯೆಯ ಸೂರ್ಯವಂಶದ ರಾಜ ಇಕ್ಷ್ವಾಕುವು ಸತ್ಯಲೋಕದಿಂದ ತಂದು ಪೂಜಿಸಿದ, ಆ ವಂಶದ ಶ್ರೀರಾಮನಿಂದ ವಿಭೀಷಣನಿಗೆ ಪ್ರೀತಿಯಿಂದ ಕೊಡಲ್ಪಟ್ಟ, ಇಲ್ಲಿನ ದೇವಾಲಯದ ಅರ್ಚಾಮೂರ್ತಿಯು, ವಿಭೀಷಣನಿಂದ ಲಂಕೆಗೆ ಕೊಂಡೊಯ್ಯಲಾಗದೆ, ಭೂಲೋಕದ ವೈಕುಂಠವೆನಿಸಿದ ಇಲ್ಲಿ ಪ್ರತಿಷ್ಠಿಸಲ್ಪಟ್ಟಿತು.

ಶ್ರೀರಂಗನಾಥಸ್ವಾಮಿಯು ಭಕ್ತಿಯ ಆಗರವೆಂದು ತಿಳಿದ ನಾಥಮುನಿಗಳು ಕೆಲಕಾಲ ಇಲ್ಲಿದ್ದರು. ಅವರ ಕಾಲದಿಂದಲೂ ಇದು ಶ್ರೀವೈಷ್ಣವರ ಕೇಂದ್ರವಾಗಿದೆ. ರಾಮಮಿಶ್ರರ ಪ್ರಭಾವದಿಂದ ಯಾಮುನಾಚಾರ್ಯರು ಶ್ರೀರಂಗಕ್ಕೆ ಬಂದು ತಮ್ಮ ಪೂರ್ವಜರ ಆಸ್ತಿ ಎನಿಸಿದ್ದ ರಂಗನಾಥನನ್ನು ಸಂದರ್ಶಿಸಿದಾಗ ವಿರಕ್ತಿ ಹುಟ್ಟಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಇಲ್ಲಿಯೇ ನೆಲೆಯಾಗಿ ನಿಂತರು. ಇವರ ಮಗ ತಿರುವ ರಂಗರು ಈ ದೇವಾಲಯದ ಅಧಿಕಾರಿಯಾಗಿ, ದೇವರ ಗಾಯಕರಾಗಿ ಇಲ್ಲಿ ಸೇವೆ ಸಲ್ಲಿಸಿದರು. ರಾಮಾನುಜಾಚಾರ್ಯರೂ ಬಹುಕಾಲ ದೇವಾಲಯದ ನಿರ್ವಾಹಕರಾಗಿದ್ದು, ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಶ್ರೀರಂಗದಂತಹ ಭಗವದಧಿಷ್ಠಿತವಾದ ದಿವ್ಯದೇಶದ ವಾಸವು ಶ್ರೇಯಸ್ಕರವೆಂದು ಹೇಳಿದ್ದಾರೆ. ಈ ದೇವಾಲಯದ ಕೆಲಸದಲ್ಲಿ ದಾಶರಥಿಯು ರಾಮಾನುಜರಿಗೆ ನೆರವಾದರು. ದಾಶರಥಿಯ ನಂತರ ಪರಾಶರಭಟ್ಟರೂ, ಆಮೇಲೆ ಅವರ ತಮ್ಮ ಶ್ರೀರಾಮಪಿಳ್ಳೈ ದೇವಾಲಯದಲ್ಲಿ ಪೌರೋಹಿತ್ಯ, ಪುರಾಣಶ್ರವಣ ಮಾಡುತ್ತಿದ್ದರು. ವೇದಾಂತ ದೇಶಿಕರೂ ಈ ದೇವರನ್ನು ಭಕ್ತಿಪೂರ್ವಕವಾಗಿ ಸ್ತುತಿಸಿದ್ದಾರೆ. ತಾತಾಚಾರ್ಯ ವಂಶದ ಶ್ರೀನಿವಾಸರು ಶ್ರೀಕಾರ್ಯಕರ್ತರಾಗಿದ್ದರು. ವಿಜಯನಗರದ ರಾಜರು ಈ ದೇವಾಲಯಕ್ಕೆ ಸಹಾಯಮಾಡಿದರು.

ರಾಮಾನುಜಪೀಠ, ಪವಿತ್ರವಾದ ಚಂದ್ರ ಪುಷ್ಕರಣಿ ತೀರ್ಥ ಮತ್ತು ಮಹಾಲಕ್ಷ್ಮಿಯ ದೇವಾಲಯಗಳಿವೆ. ವೈಕುಂಠ ಏಕಾದಶಿಯ ದಿವಸ ಇಲ್ಲಿ ನಡೆಯುವ ಉತ್ಸವವು ಪ್ರಸಿದ್ಧಿಯಾದುದು, ಈ ದೇವರ ಮುಂದೆ ನಾಟ್ಯರೂಪದಲ್ಲಿ ಗಾನಮಾಡುವ ದಿವ್ಯ ಪ್ರಬಂಧ ಸೇವೆ ಆಕರ್ಷಕವಾದುದು.

ಶ್ರೀರಂಗದಲ್ಲಿರುವ ದೇವರು ಅಂತ್ಯರಂಗ, ಬ್ಲಫ್ ಅಥವಾ ಶಿವನಸಮುದ್ರದಲ್ಲಿರುವುದು ಮಧ್ಯರಂಗ, ಶ್ರೀರಂಗಪಟ್ಟಣದಲ್ಲಿರುವುದು ಆದಿರಂಗ, ಈ ಮೂರು ಕ್ಷೇತ್ರಗಳಲ್ಲಿ ಕಾವೇರಿ ನದಿಯು ರಂಗನಾಥ ದೇವಾಲಯಗಳನ್ನು ಬಳಸಿ ಹರಿದಿದೆ.

## 2. ವೆಂಕಟಾದ್ರಿಯ ಶ್ರೀನಿವಾಸ

ಆಂಧ್ರಪ್ರದೇಶದಲ್ಲಿರುವ ಇದಕ್ಕೆ ವೇಂಕಟಾಚಲ, ಶೇಷಾಚಲ, ಶೇಷಾದ್ರಿ, ಫಣಿಪತಿಗಿರಿ, ವೇಂಗಡಂ ಬೆಟ್ಟ ಎಂಬ ಹೆಸರುಗಳುಂಟು. ಆದರೆ ತಿರುಮಲೆ ಎಂಬ ಹೆಸರೇ ಬಳಕೆಯಲ್ಲಿದೆ. ಈ ದೇವರು ಆರು ಸಾವಿರ ವರ್ಷ ಹಿಂದಿನದು. ಕಶ್ಯಪ, ಅತ್ರಿ, ಭರದ್ವಾಜ, ಗೌತಮ, ಜಮದಗ್ನಿ, ವಸಿಷ್ಠ, ವಿಶ್ವಾಮಿತ್ರ ಎಂಬೀ ಸಪ್ತರ್ಷಿಗಳು ಸೇರಿ ಈ ಸ್ವಾಮಿಯನ್ನು ಕುರಿತು ರಚಿಸಿದ ವೇಂಕಟೇಶ್ವರ ಶರಣಾಗತಿ ಸ್ತೋತ್ರ

ವಲ್ಲಿ ಸ್ತುತಿಸಿದ್ದಾರೆ. ತ್ರಿಮೂರ್ತಿಗಳಲ್ಲಿ ಸರ್ವಶ್ರೇಷ್ಠರು ಯಾರು ಎಂಬ ಅನರ್ಥಕಾರಿ ಪರೀಕ್ಷೆಯನ್ನು ಭೃಗುಮಹರ್ಷಿಯು ಮಾಡಿದುದರ ಫಲವಾಗಿ, ಮಹಾಲಕ್ಷ್ಮಿಯನ್ನು ಕಳೆದುಕೊಂಡ ಶ್ರೀಮಹಾವಿಷ್ಣುವು ಇಲ್ಲಿಗೆ ಬಂದು, ವೇಂಕಟಾಚಲಪತಿ ಆಗಿ ನಿಂತು, ಭಕ್ತರ ಕೋರಿಕೆಗಳನ್ನು ನೆರವೇರಿಸಿ ಅವರನ್ನು ಉದ್ಧರಿಸುತ್ತಿದ್ದಾನೆ. ಇದೂ ಭೂ ಲೋಕದ ವೈಕುಂಠವೆನಿಸಿದೆ. ಶುಕ, ಭೃಗು ಮುಂತಾದ ಮಹರ್ಷಿಗಳೂ, ಪ್ರಹ್ಲಾದ, ಅಂಬರೀಷ ಮುಂತಾದ ಭಾಗವತ ರಾಜರ್ಷಿಗಳೂ ತಪಸ್ಸುಮಾಡಿ ಇದನ್ನು ಪವಿತ್ರ ವಾಗಿಸಿದ್ದಾರೆ. ಶ್ರೀಕೃಷ್ಣ, ಬಲರಾಮರು ಇಲ್ಲಿಗೆ ಪ್ರವಾಸ ಬಂದಿದ್ದರೆಂದು ತಿಳಿದು ಬರುತ್ತದೆ.

ಕಾಡಿನಲ್ಲಿ ಮುಚ್ಚಿಹೋಗಿದ್ದ ಈ ಮೂರ್ತಿಯನ್ನು ಕಂಡುಹಿಡಿದು ರಂಗದಾಸ ನೆಂಬ ಶೂದ್ರ ಭಕ್ತನು ಪುಷ್ಪ ಕೈಂಕರ್ಯವನ್ನು ಮಾಡಿದನು, ಹಾಗೂ ಗೋಪೀ ನಾಥನೆಂಬ ಬ್ರಾಹ್ಮಣನು ಪೂಜೆಮಾಡಿದನು. ವೈಖಾನಸ ರೀತ್ಯ ನಡೆಯುತ್ತಿದ್ದ ಪೂಜೆಯನ್ನು ಬದಲಿಸಲಾಗಿಲ್ಲ. ಪಲ್ಲವರು, ಕದಂಬರು, ಬಾಣರು, ಮೈಸೂರಿನ ಒಡೆಯರು, ವಿಜಯನಗರದ ರಾಜರು, ದೇವಾಲಯದ ನಿರ್ಮಾಣಕ್ಕೆ ನೆರವಾಗಿ, ಮೂರ್ತಿಗಾಗಿ ಅಮೂಲ್ಯವಾದ ವಿವಿಧ ಆಭರಣಗಳನ್ನು ಮಾಡಿಸಿಕೊಟ್ಟಿದ್ದಾರೆ.

ಇಲ್ಲಿರುವ ಶೇಷಾಚಲ ಬೆಟ್ಟವು ಹೆಡೆ ಬಿಚ್ಚಿದ ಹಾವಿನಂತೆ ಕಾಣುತ್ತದೆ. ಇಲ್ಲಿ ರುವ ಪರ್ವತ ಪಂಕ್ತಿಗಳು ಆದಿಶೇಷನ ಪ್ರತೀಕಗಳು. ಗುಡ್ಡದ ಏಳು ಶಿಖರಗಳೂ ಆದಿಶೇಷನ ಹೆಡೆಗಳು.

ಕಟ್ಯಾವಲಂಬಿ ವರದ ಹಸ್ತವು ವೀರತ್ವ, ಭೋಗ, ಯೋಗಗಳನ್ನೆಲ್ಲ ನೀಡಬಲ್ಲು ದೆಂದು ತಿಳಿದೇ ಎಲ್ಲ ಆಳ್ವಾರುಗಳೂ ಈ ಸ್ವಾಮಿಯನ್ನು ಸ್ತುತಿಸಿದ್ದಾರೆ. ನಮ್ಮಾಳ್ವಾರರ ತಿರುಪತಿ ಸ್ವಾಮಿಯ ಮೇಲಿನ ಪಾಶುರಗಳಿಂದ ಪ್ರಭಾವಿತರಾದ ನಾಥ ಮುನಿಗಳು ತಿರುಮಲೆಯ ಮಹಿಮೆಯನ್ನರಿತು ಇಲ್ಲಿಗೆ ಬಂದಿದ್ದರು. ನಾಥಮುನಿ ಗಳಿಂದ ಪ್ರಭಾವಿತರಾದ ಯಾಮುನರೂ ಇಲ್ಲಿ ಬಂದಿದ್ದು, ಮೊಮ್ಮಗನೂ, ಮುಖ್ಯ ಶಿಷ್ಯನೂ ಆದ ಪೆರಿಯ ತಿರುಮಲೆ ನಂಬಿಯನ್ನು ಇಲ್ಲಿ ಅಭಿಷೇಕದ ತೀರ್ಥ ಮತ್ತು ಪುಷ್ಪ ಸರಬರಾಜು ಮಾಡುವ ಶ್ರೀನಿವಾಸನ ಕೈಂಕರ್ಯ ಮಾಡಿಕೊಂಡಿರುವಂತೆ ಮಾಡಿದರು. ರಾಮಾನುಜರೂ ಇಲ್ಲಿಗೆ ಬಂದು ತಿರುಮಲೆ ನಂಬಿಗಳ ಬಳಿ ರಾಮಾಯಣದ ಗೂಢಾರ್ಥವನ್ನು ಕಲಿತರು. ಆಗ ಶ್ರೀನಿವಾಸನ ಸೇವೆಮಾಡಿದರು.

ಮತ್ತೆ ರಾಜನ ಪ್ರಾರ್ಥನೆಯಂತೆ ಇಲ್ಲಿಗೆ ಬಂದ, ಆದಿಶೇಷನ ಅವತಾರವಾದ ರಾಮಾನುಜರ ಪ್ರಾರ್ಥನೆಯನ್ನು ಮನ್ನಿಸಿ ಇಲ್ಲಿನ ಮೂರ್ತಿಯು ವಿಷ್ಣು ಸಂಕೇತ ವಾದ ಶಂಖ ಚಕ್ರಗಳನ್ನು ಕೈಗಳಲ್ಲಿಯೂ, ಮಹಾಲಕ್ಷ್ಮಿಯನ್ನು ಎದೆಯ ಮೇಲೂ

ಧರಿಸಿದ್ದಾನೆ. ಇದರಿಂದ ಇಲ್ಲಿನ ಅರ್ಚಾಮೂರ್ತಿಯು ಶೈವ-ವೈಷ್ಣವ ಎಂಬು ದರ ಬಗ್ಗೆ ಇದ್ದ ವಿವಾದವು ಪರಿಹಾರವಾಗಿ ಅದು ವೈಷ್ಣವಮೂರ್ತಿ ಎಂಬುದು ಖಚಿತ ವಾಗಿ ಸ್ಥಾಪಿತವಾಯಿತು. ಈ ಕಾರ್ಯದಲ್ಲಿ ನಲ್ಲಾನ್ ಚಕ್ರವರ್ತಿ ಪರಂಪರೆಯ ವರದಾಚಾರ್ಯರು ರಾಮಾನುಜರಿಗೆ ನೆರವಾದರು.

ರಾಮಾನುಜರು ಈ ದೇವಾಲಯದಲ್ಲಿ ಅನೇಕ ಸುಧಾರಣೆಗಳನ್ನು ತರುವುದರ ಮೂಲಕ ಇಲ್ಲಿನ ಆಡಳಿತವು ವ್ಯವಸ್ಥಿತವಾಗಿ ನಡೆದು ಅದು ಪ್ರಖ್ಯಾತಿ ಹೊಂದಲು ಕಾರಣರಾಗಿದ್ದಾರೆ. ಶ್ರೀವೈಷ್ಣವ ಸಮುದಾಯದ ಶಾತ್ತಿನವರು ಮಠದ ವ್ಯವಸ್ಥೆ ಯನ್ನೂ, ಶಾತ್ತಾದವರು ಪುಷ್ಪಮಾಲಾ ಕೈಂಕರ್ಯವನ್ನೂ ಕೈಗೊಳ್ಳುವಂತೆ ಮಾಡಿ, ಗುಡಿಯಲ್ಲಿ ಎರಡೂ ಪಂಗಡದವರಿಂದ ಸೇವೆ ಸಲ್ಲುವ ವ್ಯವಸ್ಥೆ ಮಾಡಿ, ಆ ಮೂಲಕ ದೇವರೆದುರಿನಲ್ಲಿ ಜಾತಿ ಮತ ಹಾಗೂ ಮೇಲು ಕೀಳುಗಳ ಭೇದ ಸಲ್ಲದು ಎಂಬುದನ್ನು ತೋರಿಸಿಕೊಟ್ಟರು. ರಾಮಾನುಜರ ಆಜ್ಞೆಯಂತೆ ಶಿಷ್ಯ ಅನಂತಾ ರ್ಯರು ದೇವರಿಗೆ ತೀರ್ಥ, ಪುಷ್ಪ ಕೈಂಕರ್ಯಗಳನ್ನು ಮಾಡಿದರು. ರಾಮಾನುಜರು ತಮ್ಮ ತತ್ತ್ವದರ್ಶನವನ್ನು ವೇದಾರ್ಥಸಂಗ್ರಹವೆಂಬ ಉಪನ್ಯಾಸದ ಮೂಲಕ ಅರ್ಪಿಸಿರುವುದು ಈ ದೇವರಿಗೆ. ಶ್ರೀಭಾಷ್ಯದ ಮಂಗಳ ಶ್ಲೋಕವೂ ಈ ದೇವರನ್ನು ಕುರಿತದ್ದು.

ಮಾಧ್ವ ಮಠದ ವ್ಯಾಸತೀರ್ಥರು ಈ ಗುಡಿಯಲ್ಲಿ ಕೆಲವು ವರ್ಷ ದೇವರ ಪೂಜೆ ಯನ್ನು ಮಾಡಿದ್ದಾರೆ. ಇವರ ಶಿಷ್ಯರಾದ ದಾಸಕೂಟದವರಿಗೆ ತಿರುಪತಿಯ ತಿಮ್ಮಪ್ಪನು ಅಚ್ಚುಮೆಚ್ಚಿನ ದೇವರು. ಪುರಂದರದಾಸರು, ತ್ಯಾಗರಾಜರು, ಅನ್ನಮಾಚಾರ್ಯರು ಕೊಂಡಾಡಿದ್ದಾರೆ.

ಇಲ್ಲಿನ ದೇವಾಲಯದ ಘಂಟೆಯೇ ವೇದಾಂತ ದೇಶಿಕರಾಗಿ ಅವತರಿಸಿ ರಾಮಾನುಜ ಸಿದ್ಧಾಂತದ ಪ್ರಚಾರವನ್ನು ಚೆನ್ನಾಗಿ ಮಾಡಿದೆ.

"ವೇಂಕಟಾದ್ರಿ ಸಮಂ ಸ್ಥಾನಂ ನ ಭೂತೋ ನ ಭವಿಷ್ಯತಿ"

ಎಂದು ವೇದಾಂತದೇಶಿಕರು ಈ ಸ್ಥಳದ ಮಹಿಮೆಯನ್ನು ಕೊಂಡಾಡಿದ್ದಾರೆ.

ಈ ವೆಂಕಟೇಶ ದೇವರನ್ನು ಬ್ರಹ್ಮಾದಿ ದೇವತೆಗಳು ರಾತ್ರಿಯಲ್ಲಿ ಪೂಜಿಸುತ್ತಾ ರೆಂದು ಪ್ರತೀತಿ. ಈ ದೇವರೇ ಪೂಜಿಸಿದ ಆದಿವರಾಹಮೂರ್ತಿಯ ದೇವಾಲಯ ಇಲ್ಲಿದೆ. ಸ್ವಾಮಿ ಪುಷ್ಕರಿಣಿ, ಆಕಾಶಗಂಗೆ, ಪಾಪನಾಶನಂ ಎಂಬ ಪವಿತ್ರ ತೀರ್ಥ ಗಳಿವೆ. ರಾಮಾನುಜ ಪೀಠಗಳಿವೆ.

ಬೆಟ್ಟದ ಬಳಿ ಇರುವ ತಿರುಪತಿ ಅಥವಾ ಗೋವಿಂದರಾಜ ಪಟ್ಟಣದ ಸ್ಥಾಪನೆ-ವ್ಯವಸ್ಥೆಗಳೂ, ಗೋವಿಂದರಾಜ, ಕೋದಂಡರಾಮ, ಗೋದಾದೇವಿ ಮೂರ್ತಿಗಳನ್ನು ಪ್ರತಿಷ್ಠಿಸಿದುದೂ ರಾಮಾನುಜರ ಮುಖ್ಯ ಸಾಧನೆಗಳಲ್ಲಿ ಒಂದು. ಹತ್ತಿರದಲ್ಲಿರುವ ತಿರುಚಾನೂರಿನಲ್ಲಿ ಅಲಮೇಲುಮಂಗೈ ಅಥವಾ ಪದ್ಮಾವತಿಯ ದೇವಾಲಯವಿದೆ.

## 3. ಹಸ್ತಿಶೈಲದ ವರದರಾಜ

ತಮಿಳು ನಾಡಿನಲ್ಲಿರುವ ಇದು ಕಂಚಿ, ಕಾಂಚೀಪುರ, ಹಸ್ತಿಗಿರಿ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿರುವ ಪುಣ್ಯಸ್ಥಳ. ಕೃತಯುಗದ ಆದಿಯಲ್ಲಿ ಬ್ರಹ್ಮನು ಹರಿಯನ್ನು ಆರಾಧಿಸಿದುದರಿಂದ ಇದಕ್ಕೆ ಕಂಚಿ ಎಂದು ಹೆಸರು ಬಂದಿತು. ಬ್ರಹ್ಮದೇವನು ಸತ್ಯವ್ರತ ಕ್ಷೇತ್ರವೆನಿಸಿದ ಇಲ್ಲಿ ನಡೆಸಿದ ಅಶ್ವಮೇಧಯಾಗದ ಕುಂಡದಿಂದ ಉದ್ಭವಿಸಿದ ಮೂರ್ತಿಯೇ ಇಲ್ಲಿನ ಪ್ರಸಿದ್ಧ ದೇವಾಲಯದಲ್ಲಿದೆ. ಈ ದೇವರಿಗೆ ವರದ, ದೇವರಾಜ, ದೇವಾಧಿರಾಜನ್, ದೇವಪ್ಪೆರುಮಾಳ್, ಅರುಳಾಳನ್, ಹಸ್ತಿಗಿರಿನಾಥನ್ ಎಂಬ ಹೆಸರುಗಳಿವೆ. ಈ ಊರಿನಲ್ಲಿ ವೈಕುಂಠ ಪೆರುಮಾಳ್ ದೇವಾಲಯವೂ ಇದೆ. ರಾಮಾನುಜರು ಸ್ಥಾಪಿಸಿದ ಮಠಪೀಠವಿದೆ. ಹತ್ತಿರದ ತೂಪ್ಪಿಲ್ ಅಗ್ರಹಾರವು ನಿಗಮಾಂತ ಮಹಾದೇಶಿಕರ ಜನ್ಮಸ್ಥಳ. ಬ್ರಹ್ಮನ ಪತ್ನಿ ಸರಸ್ವತಿಯು ದಕ್ಷಿಣದ ಕಡೆ ವೇಗವತಿ ನದಿಯಾಗಿ ಹರಿಯುತ್ತಿದ್ದಾಳೆಂದು ಪ್ರತೀತಿ.

ಅಯೋಧ್ಯೆ, ಮಥುರ, ಮಾಯ (ಹರಿದ್ವಾರ), ಕಾಶಿ, ಕಂಚಿ, ಅವಂತಿಕಾ (ಉಜ್ಜಯಿನಿ), ದ್ವಾರಕ —ಎಂಬೀ ಮೋಕ್ಷದಾಯಕವಾದ ಏಳು ಪವಿತ್ರ ನಗರಗಳಲ್ಲಿ ಕಂಚಿಯೇ ಅತಿ ಮುಖ್ಯವೆಂದು ಅಭಿಪ್ರಾಯಪಟ್ಟಿದ್ದಾರೆ. ವೈಕುಂಠದಲ್ಲಿ ಮೋಕ್ಷವನ್ನು ಅನುಭವಿಸುವುದಕ್ಕಿಂತಲೂ ಇಲ್ಲಿ ವರದರಾಜನನ್ನು ಪೂಜಿಸುತ್ತ ಜೀವಿಸುವುದು ಉತ್ತಮ ಎಂದೂ ದೇಶಿಕರು ಹೇಳಿದ್ದಾರೆ. 'ನಗರಗಳಲ್ಲಿ ಕಂಚಿ' ಎಂದು ಮಹಾಕವಿ ಕಾಳಿದಾಸ ಇದನ್ನು ಹೊಗಳಿದ್ದಾನೆ. ಅರ್ಥಶಾಸ್ತ್ರವನ್ನು ಬರೆದ ಕೌಟಿಲ್ಯ ಅಥವಾ ಚಾಣಕ್ಯನು ಇಲ್ಲಿಯವನು. ಹರ್ಷವರ್ಧನನು ಸ್ಥಾಪಿಸಿದ ನಲಂದ ವಿಶ್ವವಿದ್ಯಾಲಯದ ಕುಲಪತಿಯಾಗಿದ್ದ ಧರ್ಮಪಾಲನು ಶಿಕ್ಷಣ ಪಡೆದುದು ಕಂಚಿಯಲ್ಲಿ. ಏಳನೆ ಶತಮಾನದಲ್ಲಿ ಇಲ್ಲಿಗೆ ಭೇಟಿಯಿತ್ತಿದ್ದ ಚೈನಾ ಯಾತ್ರಿಕ ಹ್ಯೂಯನ್‌ತ್ಸಾಂಗನು ಇಲ್ಲಿ ಬಹಳವಾಗಿ ಘನವಿದ್ವಾಂಸರಿದ್ದಾರೆಂದು ಬರೆದಿದ್ದಾನೆ. ಆಳ್ವಾರಾಚಾರ್ಯರು ಇದ್ದು ಶ್ರೀವೈಷ್ಣವ ಮತದ ಪ್ರಮುಖ ಕೇಂದ್ರವೆನಿಸಿದೆ.

ವಿಶಿಷ್ಟಾದ್ವೈತದ ರಕ್ಷಣೆ, ವಿಕಾಸ, ಪ್ರಚಾರಗಳಿಗೆಲ್ಲ ಕಂಚಿಯ ವರದರಾಜ ಸ್ವಾಮಿಯ ಕೊಡುಗೆ, ಸಹಾಯಗಳು ಅಪರಿಮಿತವಾದುವು. ರಾಮಾನುಜರಿಗೆ

ಅದ್ವೈತ ಸಿದ್ಧಾಂತದ ಪಾತ ಆದುದು ಇಲ್ಲಿ ; ರಾಮಾನುಜರು ವಿಶಿಷ್ಟಾದ್ವೈತದ ಸ್ಥಾಪಕರಾಗುವಂತೆ ಅನುಗ್ರಹಿಸೆಂದು ಯಾಮುನರು ಬೇಡಿಕೊಂಡುದು ಈ ಸ್ವಾಮಿಯ ಸನ್ನಿಧಿಯಲ್ಲಿ ; ಬೇಡದಂಪತಿಗಳ ವೇಷದಲ್ಲಿ ರಾಮಾನುಜರನ್ನು ಕಾಪಾಡಿ, ವಿಂಧ್ಯಾರಣ್ಯದಿಂದ ಕಂಚಿಗೆ ಒಂದೇ ರಾತ್ರಿಯಲ್ಲಿ ಕರೆದುಕೊಂಡು ಬಂದು ಬಿಟ್ಟವರು ಈ ವರದರಾಜಸ್ವಾಮಿ ಮತ್ತು ಅವನ ಪತ್ನಿ ಪೆರುಂದೇವಿ ತಾಯಿ ; ಬೇಡರ ವೇಷ ಧರಿಸಿ, ನೀರು ತರಿಸಿಕೊಂಡು ಕುಡಿದ ಶಾಲಕಿಣರ್ ಎಂಬ ಭಾವಿ ಯಿಂದ ಸ್ವಾಮಿಯ ತಿರುಮಜ್ಜನಕ್ಕಾಗಿ ತೀರ್ಥವನ್ನು ಕೊಂಡೊಯ್ಯುವ ಸೇವೆಯ ಮೂಲಕ ರಾಮಾನುಜರ ದೇವತಾ ಕೈಂಕರ್ಯವು ಆರಂಭವಾದುದು ಇಲ್ಲಿ ; ತೀರ್ಥ ವನ್ನು ತರುವಾಗ ಇಲ್ಲಿ ಕಿವಿಗೆ ಬಿದ್ದ ಯಾಮುನರ ಸ್ತೋತ್ರರತ್ನವೇ ರಾಮಾನುಜರು ವಿಶಿಷ್ಟಾದ್ವೈತವನ್ನು ಅವಲಂಬಿಸಲು ಕಾರಣವಾದುದು ; ಭಕ್ತಾಗ್ರೇಸರನಾದ ತಿರುಕ್ಕಚ್ಚಿ ನಂಬಿಯ ಮೂಲಕವಾಗಿ ರಾಮಾನುಜರ ಸಂದೇಹಗಳಿಗೆ ಷಡರ್ಥಗಳ ಉತ್ತರವನ್ನು ನೀಡಿ ಅವರಿಗೆ ಜ್ಞಾನಾನಂದದ ಮಾರ್ಗದರ್ಶನ ನೀಡಿದವನು ಈ ಸ್ವಾಮಿ ; ಮಾಯವಾದಿ ಸಂನ್ಯಾಸಿ ಯಜ್ಞಮೂರ್ತಿಯ ಬಹು ಕಠಿಣವಾದ ಪ್ರಶ್ನೆಗೆ, ಕನಸಿನಲ್ಲಿ ಸಾಕ್ಷಾತ್ಕಾರವಾದ ವಿಶೇಷ ಅರ್ಥಗಳು ಅವನನ್ನು ಸೋಲಿಸಲು ರಾಮಾನುಜರಿಗೆ ಸಾಧ್ಯವಾದುದು ಈ ಸ್ವಾಮಿಯ ಕೃಪೆಯಿಂದ ; ಶ್ರೀಭಾಷ್ಯವನ್ನು ಬರೆಯಲು ಶ್ರೀವತ್ಸಾಂಕಮಿಶ್ರರಂತಹ ಪ್ರತಿಭಾಶಾಲಿ ಶಿಷ್ಯನನ್ನು ರಾಮಾನುಜರಿಗೆ ಒದಗಿಸಿಕೊಟ್ಟವನು ಈ ಸ್ವಾಮಿ ; ವಿಶಿಷ್ಟಾದ್ವೈತವು ರಾಮಾನುಜ ಸಿದ್ಧಾಂತವೆನಿ ಸಿದುದು ಈ ದೇವರ ಪ್ರಸಾದದಿಂದ ; ಶ್ರೀಭಾಷ್ಯದ ಮೇಲಿನ ಸುಪ್ರಸಿದ್ಧ ಟೀಕೆ ಯಾದ 'ಶ್ರುತ ಪ್ರಕಾಶಿಕಾ' ಗ್ರಂಥವು ರಚಿತವಾದುದು ಇಲ್ಲಿ ; ವೇದಾಂತದೇಶಿಕ ಎನಿಸಿ ವಿಶಿಷ್ಟಾದ್ವೈತವನ್ನು ಸ್ಥಿರವಾಗಿ ಪ್ರತಿಷ್ಠಾಪನೆಮಾಡಿ ಪ್ರಖ್ಯಾತರಾದ ವೆಂಕಟ ನಾಥನನ್ನು ವಾತ್ಸ್ಯವರದಾಚಾರ್ಯರು ಹರಸಿದುದು ಇಲ್ಲಿ ; ಶ್ರೀಭಾಷ್ಯದ ಸಾರ, ಅರ್ಥಪಂಚಕದ ಮೂಲಗಳು ಕಾಣಬರುವುದು, ವೇದಾಂತದೇಶಿಕರು ತಮ್ಮ ಇಷ್ಟ ದೇವತೆಯನ್ನು ಕುರಿತು ರಚಿಸಿದ ವರದರಾಜ ಪಂಚಾಶತ್ ಎಂಬ ಸ್ತೋತ್ರದಲ್ಲಿ.

ಒಟ್ಟಿನಲ್ಲಿ ರಾಮಾನುಜರು ಶ್ರೀರಂಗದ ರಂಗನಾಥ ದೇವಾಲಯದ ಆಸ್ತಿಯನ್ನು ವ್ಯವಸ್ಥೆಮಾಡಿ, ಅದು ಸರಿಯಾಗಿ ನಡೆದುಕೊಂಡು ಬರುವಂತೆ ಮಾಡಿದರು ; ತಿರುಮಲೆಯ ಶ್ರೀನಿವಾಸ ದೇವರನ್ನು ಪುನರುಜ್ಜೀವನಗೊಳಿಸಿದವರೂ ರಾಮಾನುಜರು ; ಮೇಲುಕೋಟೆಯ ನಾರಾಯಣ ದೇವರನ್ನು ಪುನರುಜ್ಜೀವನ ಗೊಳಿಸಿದವರೂ ರಾಮಾನುಜರು ; ಆದರೆ ಈ ಮೂರೂ ದೇವರಿಗೆ ಸಹಾಯ ಮಾಡಿದ ರಾಮಾನುಜರನ್ನು ಸೃಷ್ಟಿಸಿದವನು ಕಂಚಿಯ ವರದರಾಜಸ್ವಾಮಿ. ಆದುದರಿಂದ ಶ್ರೀವೈಷ್ಣವ ಮತದಲ್ಲಿ ಕಂಚಿಯ ಸ್ವಾಮಿಗೇ ಹೆಚ್ಚು ಪ್ರಾಧಾನ್ಯತೆ ಉಂಟು ಎಂಬುದು ನಿರ್ವಿವಾದವಾದುದು.

ಶ್ರೀರಂಗದ ರಂಗನಾಥ-ನಾಚ್ಚಿಯಾರ್ ಸೇರಿದ ಸೇವೆ ಸಿಗುವುದು ವರ್ಷದಲ್ಲಿ ಒಂದು ಸಲ ; ತಿರುಮಲೆಯ ಶ್ರೀನಿವಾಸ-ಪದ್ಮಾವತಿ ಸೇರುವುದೇ ಇಲ್ಲ ; ಆದರೆ ದಿವ್ಯ ದಂಪತಿಗಳಾದ ವರದರಾಜ–ಪೆರುಂದೇವಿ ಅನೇಕ ಉತ್ಸವಗಳಲ್ಲಿ ಒಟ್ಟಿಗೆ ದರ್ಶನ ವನ್ನು ಕರುಣಿಸುತ್ತಾರೆ. ವರದರಾಜಸ್ವಾಮಿಯು ಗರುಡಾರೂಢನಾಗಿ ವಿಶೇಷ ಛತ್ರಿ ಯೊಡನೆ ಕೂಡಿದ ಉತ್ಸವವು ಬಹು ಪ್ರಸಿದ್ಧಿಯಾದುದು.

ಪಂಚಮತಭಂಜನ ತಾತಾಚಾರ್ಯರು, ಕೋಟಿ ಕನ್ಯಾದಾನಂ ಲಕ್ಷ್ಮೀ ಕುಮಾರ ತಾತಾಚಾರ್ಯರೂ ಅವರ ವಂಶದವರೂ, ಆ ದೇವಸ್ಥಾನದ ಶ್ರೀಕಾರ್ಯಕರ್ತ ರಾಗಿ ದೇವರನ್ನು ಪೂಜಿಸಿ, ವಿಶಿಷ್ಟಾದ್ವೈತವನ್ನು ಪ್ರಚಾರಮಾಡಿ, ಇದನ್ನು ಕೀರ್ತಿ ಶಾಲಿಯಾಗಿಮಾಡಲು ಶ್ರಮಿಸಿದ್ದಾರೆ.

## 4. ಯದುಶೈಲದ ಚಲುವ ನಾರಾಯಣ

ಕರ್ನಾಟಕದ ಮಂಡ್ಯ ಜಿಲ್ಲೆಯಲ್ಲಿರುವ ಇದು ದಕ್ಷಿಣ ಬದರಿಕಾಶ್ರಮ, ವೈಕುಂಠ ವರ್ಧನ ಕ್ಷೇತ್ರ ಎಂದು ಪ್ರಸಿದ್ಧಿಯಾಗಿದೆ.

ಕೃತಯುಗದಲ್ಲಿ ಬ್ರಹ್ಮನಿಂದ ಅವನ ಮಾನಸ ಪುತ್ರನಾದ ಸನತ್ಕುಮಾರನಿಗೆ ಕೊಡಲ್ಪಟ್ಟ ತಿರುನಾರಾಯಣ ಸ್ವಾಮಿಯ ವಿಗ್ರಹವು ಇಲ್ಲಿ ಸ್ಥಾಪಿಸಲ್ಪಟ್ಟುದರಿಂದ ನಾರಾಯಣಾದ್ರಿ ; ತ್ರೇತಾಯುಗದಲ್ಲಿ ಪುರಾಣ ಪ್ರಸಿದ್ಧವಾದ ಯದುಶೈಲವೆಂಬ ಪರ್ವತದಲ್ಲಿ ಪವಿತ್ರ ತೀರ್ಥವಾದ ವೇದ ಪುಷ್ಕರಣಿಯ ದಡದಲ್ಲಿ, ತ್ರಿಮೂರ್ತಿ ಸ್ವರೂಪರಾದ ದತ್ತಾತ್ರೇಯರು ವೇದಗಳನ್ನು ಪ್ರವಚನ ಮಾಡಿದುದರಿಂದ ವೇದಾದ್ರಿ ; ದ್ವಾಪರ ಯುಗದಲ್ಲಿ ಕೃಷ್ಣ, ಬಲರಾಮನೊಂದಿಗೆ ಯಾದವರು ಬಂದು ಈ ದೇವರನ್ನು ಸಂದರ್ಶಿಸಿ, ಪೂಜಿಸಿದುದರಿಂದ ಯದುಗಿರಿ ಅಥವಾ ಯಾದವಾದ್ರಿ ; ಕಲಿಯುಗದಲ್ಲಿ ಮುಚ್ಚಿಹೋಗಿದ್ದ ಇದು ರಾಮಾನುಜರಿಂದ ಜೀರ್ಣೋದ್ಧಾರವಾದುದ ರಿಂದ ಯತಿಶೈಲ ; ಇಲ್ಲಿನ ದೇವಾಲಯದ ಮೂಲಮೂರ್ತಿ ಚಲುವನಾರಾಯಣ ಆದುದರಿಂದ ತಿರುನಾರಾಯಣಪುರ; ಮೇಲುಭಾಗದಲ್ಲಿ ರಾಜರು ಕೋಟೆಗಳನ್ನು ಕಟ್ಟಿಸಿದುದರಿಂದ ಮೇಲುಕೋಟೆ- ಹೀಗೆ ಇದಕ್ಕೆ ಬೇರೆಬೇರೆ ಕಾರಣಗಳಿಂದ ಬೇರೆಬೇರೆ ಹೆಸರುಗಳಿವೆ. ಹತ್ತಿರದ ಪರ್ವತದ ಶಿಖರದ ಮೇಲೆ ಇರುವ ನಾರಸಿಂಹ ಕ್ಷೇತ್ರದಲ್ಲಿ ಯೋಗಾನೃಸಿಂಹ ದೇವಾಲಯವಿದೆ.

ವಿಷ್ಣುವು ವರಾಹನಾಗಿ ಭೂದೇವಿಯನ್ನು ಎತ್ತಿಕೊಂಡು ಬಂದುದರಿಂದ ಉಂಟಾದ ಶ್ರಮದಿಂದ ಆತನ ಮೈಯಿಂದ ಸುರಿದ ಬೆವರು ಒಟ್ಟುಗೂಡಿ ಇಲ್ಲಿನ

ಪವಿತ್ರವಾದ ಕಲ್ಯಾಣಿ ತೀರ್ಥವಾಯಿತು. ಇದರ ದಡದಲ್ಲಿಯೇ ಆದಿವರಾಹ ಮೂರ್ತಿಯಿಂದ ಭೂದೇವಿಗೆ ಚರಮಶ್ಲೋಕದ ಉಪದೇಶವಾಯಿತು. ಇಲ್ಲಿನ ಸೀತಾ ರಣ್ಯವೆಂಬ ಸ್ಥಳದಲ್ಲಿ ಶ್ರೀರಾಮನು ಸೀತಾಲಕ್ಷ್ಮಣ ಸಮೇತನಾಗಿ ಪರ್ಣಶಾಲೆಯನ್ನು ನಿರ್ಮಿಸಿಕೊಂಡು ಕೆಲಕಾಲ ಇದ್ದನು. ಇಲ್ಲಿನ ತಾರ್ಕ್ಷ್ಯ ಕ್ಷೇತ್ರದಲ್ಲಿ ನಾರಾಯಣನ ಆಜ್ಞೆಯಂತೆ ಗರುಡನು ಶ್ವೇತದ್ವೀಪದಿಂದ ತಂದ ಬಿಳಿಯ ಮಣ್ಣಿನ ಗುಡ್ಡೆ ಇದ್ದು ಶ್ರೀವೈಷ್ಣವರಿಗೆ ನಾಮ ಧರಿಸಲು ಸಹಾಯವಾಗಿದೆ. ಶುಕ, ಪುಂಡರೀಕ, ರುಕ್ಮಾಂಗದ, ಅಂಬರೀಷ, ಪ್ರಹ್ಲಾದ ಎಂಬೀ ಪಂಚ ಭಾಗವತರು ಇಲ್ಲಿನ ಜ್ಞಾನಾಶ್ವತ್ಥದ ಕೆಳಗೆ ನಾರಾಯಣನ ಧ್ಯಾನದಲ್ಲಿ ನಿರತರಾಗಿದ್ದರು.

ರಾಮಾನುಜರು ಮೂಲಮೂರ್ತಿಯ ಪ್ರತಿಷ್ಠಾಪನೆ ಮತ್ತು ದೇವಾಲಯ ನಿರ್ಮಾಣಗಳಲ್ಲಿ ವಿಷ್ಣುವರ್ಧನನ ಸಹಾಯವನ್ನು ಪಡೆದರು. ಆಮೇಲೆ ಅವರು ಬಹಳ ಶ್ರಮವಹಿಸಿ ತಂದು ಪ್ರತಿಷ್ಠಿಸಿದ ಇಲ್ಲಿನ ತಿರುನಾರಾಯಣ ದೇವಾಲಯದ ಉತ್ಸವಮೂರ್ತಿಯು ಶ್ರೀರಾಮನು ಪ್ರೀತಿಯಿಂದ ಅರಾಧಿಸುತ್ತಿದ್ದ ರಾಮಪ್ರಿಯ. ಈ ಮೂರ್ತಿಗೆ ಶೆಲ್ವಪ್ಪಿಳ್ಳೈ, ಸಂಪತ್ಕುಮಾರ, ಚಲುವನಾರಾಯಣ ಎಂಬ ಹೆಸರುಗಳೂ ಇವೆ. ಈ ಉತ್ಸವಮೂರ್ತಿಗೆ ಗರುಡ ಅಥವಾ ವೈನತೇಯನಿಂದ ತಂದು ತೊಡಿಸಲ್ಪಟ್ಟ ನವರತ್ನ ಖಚಿತವಾದ ವೈರಮುಡಿ ಕಿರೀಟದೊಂದಿಗೆ ನಡೆಯುವ ಉತ್ಸವವು ವಿಶ್ವಪ್ರಸಿದ್ಧಿಯಾದುದು. ಇಲ್ಲಿ ನಡೆಯುವ ರಾಮಾನುಜರ ತಿರುನಕ್ಷತ್ರ ಉತ್ಸವವೂ ವೈಭವಪೂರ್ಣವಾದುದು.

ಶ್ರೀವೈಷ್ಣವಮತದಲ್ಲಿ ಶ್ರೀರಂಗ, ಕಂಚಿಗಳಷ್ಟೇ ಖ್ಯಾತಿಯು ಮೇಲುಕೋಟೆಗೂ ಇದೆ. ಶೈವಪಕ್ಷಪಾತಿಗಳಾದ ಚೋಳರಾಜನಿಂದ ತೊಂದರೆಯಾಗುವುದೆಂಬ ಭಯವನ್ನುಂಟುಮಾಡಿ, ತನ್ನ ಸಾನ್ನಿಧ್ಯಕ್ಕೆ ರಾಮಾನುಜರನ್ನು ಬರಮಾಡಿಕೊಂಡು ದರ್ಶನವನ್ನಿತ್ತು ಅವರನ್ನು ಆನಂದಗೊಳಿಸಿ, ಜನರನ್ನು ಸತ್ಪಥದಲ್ಲಿ ಒಯ್ಯುವ ಉತ್ಸಾಹವನ್ನು ಅವರಲ್ಲಿ ಉಂಟುಮಾಡಿದ ಕರುಣಾಮಯಿ ದೇವರು ಮೇಲುಕೋಟೆಯ ಚಲುವನಾರಾಯಣಮೂರ್ತಿ; ಏತ್ತಕಲಂಗಳ್ ಎಂಬ ಗೋದಾದೇವಿಯ ತಿರುಪ್ಪಾವೈ ಪಾಶುರವನ್ನು ರಾಮಾನುಜರು ಸ್ಮರಿಸಿಕೊಂಡುದು ಇಲ್ಲಿದ್ದಾಗಲೇ; ಶ್ರೀರಂಗದಿಂದ ತಪ್ಪಿಸಿಕೊಂಡು ಬರುವಾಗ ಧರಿಸಿಕೊಂಡು ಬಂದಿದ್ದ ಬಿಳಿಯ ವಸ್ತ್ರಗಳನ್ನು ಕಳಚಿಹಾಕಿ, ವೇದಪುಷ್ಕರಣಿಯಲ್ಲಿ ಸ್ನಾನಮಾಡಿ, ದತ್ತಾತ್ರೇಯರು ತಮ್ಮ ಉಡುಪನ್ನು ಇಟ್ಟಿದ್ದ ಪರಿಧಾನ ಶಿಲೆಯ ಮೇಲಿನಿಂದ ಕಾಷಾಯ ವಸ್ತ್ರಗಳನ್ನು ಎತ್ತಿಕೊಂಡು ಮತ್ತೆ ಸಂನ್ಯಾಸಿ ವೇಷವನ್ನು ಧರಿಸಿದುದು ಇಲ್ಲಿ; ಬಿಟ್ಟಿದೇವನನ್ನು ವಿಷ್ಣುವರ್ಧನನಾಗಿ ಮಾಡಿದುದು ಇಲ್ಲಿ; ಗೀತಾಭಾಷ್ಯವನ್ನು ರಾಮಾನುಜರು ಬರೆದುದು ಇಲ್ಲಿ; ರಾಮಾನುಜರ ಶಿಷ್ಯರಲ್ಲಿ ಅನೇಕ ಆಚಾರ್ಯರು ಇಲ್ಲಿ ಇದ್ದು, ದೇವರನ್ನು ಸ್ತುತಿಸಿ, ರಾಮಾನುಜ ಸಿದ್ಧಾಂತವನ್ನು ಪ್ರಚಾರಮಾಡಿದ್ದಾರೆ.

ಉತ್ಸವ ವಿಗ್ರಹವನ್ನು ದೂರದಿಂದ ಸುರಕ್ಷಿತವಾಗಿ ಯದುಗಿರಿಗೆ ತರಲು ನೆರವು ನೀಡಿದ ಅಸ್ಪೃಶ್ಯರೆನಿಸಿದ ಹಿಂದೂಗಳಿಗೆ, ತೀರ್ಥ, ಸ್ನಾನ, ದೇವಾಲಯ ಪ್ರವೇಶ, ದೇವತಾ ದರ್ಶನಗಳ ಹಕ್ಕನ್ನು ಕೊಟ್ಟು ಅವರಿಗೆ ಶ್ರೀವೈಷ್ಣವ ದೀಕ್ಷೆಯನ್ನು ಕೊಟ್ಟು, ಅವರನ್ನು ತಿರುಕುಲತ್ತಾರ್ ಎಂದು ರಾಮಾನುಜರು ಕರೆದುದು ಇಲ್ಲಿ; ತನಗೆ ಪ್ರಾಣಪ್ರಿಯವಾಗಿದ್ದ ವಿಗ್ರಹವನ್ನು ಅಗಲಿರಲಾರೆನೆಂದು ತಿರುನಾರಾಯಣಪುರಕ್ಕೆ ಬಂದ ಮುಸಲ್ಮಾನ ದೊರೆಯ ಮಗಳಾದ ಬೀಬಿ ನಾಚ್ಚಿಯಾರ್, ರಂಗನಾಥನಲ್ಲಿ ಗೋದಾದೇವಿಯು ಆದಂತೆ, ಈ ದೇವರಲ್ಲಿ ಐಕ್ಯಳಾದಳು. ಅವಳ ವಿಗ್ರಹವು ಮೂಲ ವಿಗ್ರಹದ ಪಾದದ ಬಳಿ ಇರುವಂತೆ ರಾಮಾನುಜರು ಆದೇಶನೀಡಿದ್ದರು.

ಹೀಗೆ ಖಿಲವಾಗಿ ಹೋಗಿದ್ದ ಯದುಶೈಲ ಕ್ಷೇತ್ರವನ್ನು ಪುನಃ ಮೇಲೆತ್ತಿ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ, ಈ ಕ್ಷೇತ್ರದ ಪಾವಿತ್ರ್ಯವನ್ನು ಉಜ್ಜ್ವಲಗೊಳಿಸಿದವರು ರಾಮಾನುಜರು. ಆದುದರಿಂದಲೇ ಅವರು ಶ್ರೀರಂಗಕ್ಕೆ ಹಿಂದಿರುಗುವಾಗ ಸ್ವತಃ ಪ್ರಾಣಪ್ರತಿಷ್ಠೆ ಮಾಡಿ, ಆಶೀರ್ವದಿಸಿ ಕೊಟ್ಟ ಅವರ ವಿಗ್ರಹವು ಇಲ್ಲಿನ ದೇವಾಲಯದಲ್ಲಿದೆ. ಇಲ್ಲಿಗೆ ಭೇಟಿ ನೀಡಿ ಸ್ವಾಮಿಯ ಕೃಪೆಗೆ ಪಾತ್ರರಾದ ವೇದಾಂತ ದೇಶಿಕರ, ಹಾಗೂ ಮಣವಾಳ ಮಾಮುನಿಗಳ ಸನ್ನಿಧಿಗಳೂ ಇಲ್ಲಿವೆ. ಇತ್ತೀಚೆಗೆ ವಿಶಿಷ್ಟಾದ್ವೈತ ವೇದಾಂತದ ಸಂಶೋಧನ ಕೇಂದ್ರವೂ ಇಲ್ಲಿ ಆರಂಭವಾಗಿದೆ.

## VII. ನಿತ್ಯೋಪಯುಕ್ತ ಸ್ತೋತ್ರಗೀತೆಗಳು

ಧ್ಯಾಯನ್ ಕೃತೇಯಜನ್ ಯ ಜ್ಞೈಃ ತ್ರೇತಾಯಾಂ
ದ್ವಾಪರೇಽರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯಕೇಶವಂ ॥

ಎಂಬಂತೆ ಕೃತಯುಗದಲ್ಲಿ ಧ್ಯಾನ–ಜಪಗಳಿಂದ, ತ್ರೇತಾಯುಗದಲ್ಲಿ ಯಜ್ಞ–ಯಾಗ ಗಳಿಂದ, ದ್ವಾಪರ ಯುಗದಲ್ಲಿ ನಾಲ್ಕು ಯೋಗಗಳಿಂದ, ಹೊಂದತಕ್ಕ ಫಲವನ್ನು ಕಲಿಯುಗದಲ್ಲಿ ಭಗವನ್ನಾಮ ಸಂಕೀರ್ತನದಿಂದಲೇ ಹೊಂದಬಹುದು.

ಹರೇರ್ನಾಮೈವ ನಾಮೈವ ನಾಮೈವ ಭವ ಭೇಷಜಂ ।
ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥

ಎಂಬಂತೆ ಕಲಿಯುಗದಲ್ಲಿ ಇತರ ಸಾಧನೋಪಾಯಗಳಾವುದನ್ನೂ ಆಚರಿಸಲು ಸಾಧ್ಯ

ವಿಲ್ಲದ ಜನರಿಗೆ ಭಗವಂತನ ನಾಮಸ್ಮರಣೆಯೇ ಇಹಪರಗಳೆರಡರಲ್ಲಿಯೂ ಸಕಲ ಸನ್ಮಂಗಳವನ್ನು ಉಂಟುಮಾಡಬಲ್ಲುದು. ಹೀಗೆ ಸಂಸಾರ ಕಷ್ಟನಿವಾರಣೆಗೆ, ಭಗವದನುಗ್ರಹಕ್ಕೆ ಹಾಗೂ ಮೋಕ್ಷ ಪ್ರಾಪ್ತಿಗೆ ಭಗವನ್ನಾಮಸ್ಮರಣೆಯೇ ಮುಖ್ಯವಾದುದೆಂದು ಮಹರ್ಷಿಗಳು, ಆಳ್ವಾರುಗಳು, ಆಚಾರ್ಯರುಗಳು ಮತ್ತು ಭಕ್ತರು ಸ್ಪಷ್ಟವಾಗಿ ತಿಳಿಸಿದ್ದಾರೆ.

ಪರಿಮಿತವಾದ ಪುರುಷ ಶಕ್ತಿಯು ಕುಗ್ಗಿದಾಗ, ಮಾನವನ ಸಾಮರ್ಥ್ಯದಿಂದ ಧ್ಯೇಯಸಾಧನೆ ಆಗದಿದ್ದಾಗ, ಜಗತ್ತಿನ ಮೂಲ ಕಾರಣ, ಅತೀತ, ಅತೀಂದ್ರಿಯ ಅವ್ಯಕ್ತ ಆದ ಭಗವಂತನ ಪೂಜೆ–ಜಪ–ಧ್ಯಾನಗಳನ್ನು ಮಾಡಿ ಅವನಿಗೆ ಶರಣು ಹೋಗುವುದೇ ಭಕ್ತರ ಕಾರ್ಯಸಿದ್ಧಿಗೆ ಪರಮೋಪಾಯ. ನಿಶ್ಚಲ ಭಕ್ತಿಯಿಂದ ನಾಮಸ್ಮರಣೆ ಮಾಡುವುದರಿಂದ ಸುಲಭವಾಗಿ ಆತನ ಅನುಗ್ರಹವನ್ನು ಪಡೆಯಬಹುದು.

ಮುಖ್ಯವಾಗಿ ಭಕ್ತಿಪಂಥವಾದ ರಾಮಾನುಜರ ವಿಶಿಷ್ಟಾದ್ವೈತ ವೇದಾಂತದಲ್ಲಿ, ಅಪಾರ ಹಾಗೂ ಉತ್ಕೃಷ್ಟ ಆದ ಸ್ತೋತ್ರ ಸಾಹಿತ್ಯವು ಬೆಳೆದು ಬಂದಿದೆ. ಕುಲಶೇಖರ, ಯಾಮುನ, ರಾಮಾನುಜ, ಕೂರೇಶ, ಪರಾಶರಭಟ್ಟ, ವೇದಾಂತ ದೇಶಿಕ ಮುಂತಾದ ಆಳ್ವಾರಾಚಾರ್ಯರು ರಾಮಾನುಜ ದರ್ಶನದ ಸಾರಸರ್ವಸ್ವವನ್ನು ತಮ್ಮ ಸ್ತೋತ್ರಗಳಲ್ಲಿ ಭಟ್ಟಿ ಇಳಿಸಿದ್ದಾರೆ.

ಪ್ರಾರ್ಥನೆಯು ಪರಮಾತ್ಮನಲ್ಲಿ ಮಾಡುವ ವಾಕ್ ರೂಪವಾದ ಆರಾಧನೆ ಅಥವಾ ಕೈಂಕರ್ಯ ಆಗಿರುತ್ತದೆ. ಸ್ತೋತ್ರಗಳ ಪಾರಾಯಣದಿಂದ ಅನೇಕ ರೀತಿಯ ಲಾಭವಿದೆಯೆಂಬುದು ಪೂರ್ವಾಚಾರ್ಯರ ಅಭಿಮತ. ಸ್ತೋತ್ರಗಳ ಅರ್ಥ ಜ್ಞಾನಯುತ ಪಠನ ಉತ್ತಮವಾದರೂ, ಅರ್ಥಜ್ಞಾನವಿಲ್ಲದೆ ಪಠಿಸುವುದರಿಂದಲೂ ಅಪೇಕ್ಷಿತ ಫಲ ಸಿಗುವುದರಲ್ಲಿ ಸಂದೇಹವಿಲ್ಲ.

ರುಚಿ, ಗುಣ, ಸತ್ತ್ವಗಳಿಂದ ಕೂಡಿದ ಹಾಗೂ ಜನರ ಮನಸ್ಸನ್ನು ಆಕರ್ಷಿಸುವ, ಕೆಲವು ಜನಪ್ರಿಯ ಸ್ತೋತ್ರಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

## 1. ಉಷಃಕಾಲ ಧ್ಯಾನಶ್ಲೋಕಾಃ

ಗ್ರಾಹಗ್ರಸ್ತೇ ಗಜೇಂದ್ರೇ ರುವತಿ ಸರಭಸಂ ತಾರ್ಕ್ಷ್ಯಮಾರುಹ್ಯ ಧಾವ
ನ್ವ್ಯಾಘೂರ್ಣನ್ಮಾಲ್ಯ ಭೂಷಾವಸನ ಪರಿಕರೋ ಮೇಘ ಗಂಭೀರ ಘೋಷಃ ॥
ಆಭಿಭ್ರಾಣೋ ರಥಾಂಗಂ ಶರಮಸಿಮಭಯಂ ಶಂಖಚಾಪೌ ಸಖೇಟೌ
ಹಸ್ತೈಃ ಕೌಮೋದಕೀ ಮಪ್ಯವತು ಹರಿರಸಾವಂಹಸಾಂ ಸಂಹತೇರ್ನಃ ॥ ೧ ॥

ನಕ್ರಾಕ್ರಾಂತೇ ಕರೀಂದ್ರೇ ಮುಕುಳಿತ ನಯನೇ ಮೂಲಮೂಲೇತಿ ಖಿನ್ನೇ
ನಾಹನ್ನಾಹನ್ನ ಚಾಹನ್ನ ಚಭವತಿ ಪುನಸ್ತಾದೃಶೋ ಮಾದೃಶೇಷು ||
ಇತ್ಯೇವನ್ತ್ಯಕ್ತ ಹಸ್ತೇ ಸಪದಿ ಸುರಗಣೇ ಭಾವಶೂನ್ಯೇ ಸಮಸ್ತೇ
ಮೂಲಂ ಯ ತ್ಪ್ರಾದುರಾಸೀತ್ಸದಿಶತು ಭಗವಾನ್ಮಂಗಳಂ ಸಂತತಂ ನಃ || ೨ ||

ಪ್ರಾತಃ ಸ್ಮರಾಮಿ ಭವಭೀತಿ ಮಹಾರ್ತಿ ಶಾಂತ್ಯೈ
ನಾರಾಯಣಂ ಗರುಡವಾಹನ ಮಂಜನಾಭಂ ||
ಗ್ರಾಹಾಭಿಭೂತ ಮದವಾರಣ ಮುಕ್ತಿ ಹೇತುಂ
ಚಕ್ರಾಯುಧಂ ತರುಣವಾರಿಜ ಪತ್ರನೇತ್ರಂ || ೩ ||

ಪ್ರಾತರ್ನಮಾಮಿ ಮನಸಾವಚಸಾ ಚ ಮೂರ್ಧ್ನಾ
ಪಾದಾರವಿಂದಯುಗಳಂ ಪರಮಸ್ಯ ಪುಂಸಃ ||
ನಾರಾಯಣಸ್ಯನರಕಾರ್ಣವ ತಾರಣಸ್ಯ
ಪಾರಾಯಣ ಪ್ರವಣ ವಿಪ್ರ ಪರಾಯಣಸ್ಯ || ೪ ||

ಪ್ರಾತರ್ಭಜಾಮಿ ಭಜತಾಮಭಯಂ ಕರಂತಂ
ಪ್ರಾಕ್ಸರ್ವ ಜನ್ಮಕೃತ ಪಾಪ ಭಯಾಪನುತ್ತ್ಯೈ ||
ಯೋಗ್ರಾಹವಕ್ತ್ರಪತಿತಾಂಘ್ರಿ ಗಜೇಂದ್ರ ಘೋರ
ಶೋಕ ಪ್ರಣಾಶನ ಕರೋ ಧೃತ ಶಂಖ ಚಕ್ರಃ || ೫ ||

## 2. ಪುರುಷ ಸೂಕ್ತಂ

ಹರಿಃ ಓಂ |
ಸಹಸ್ರ ಶೀರ್ಷಾ ಪುರುಷಃ | ನಹಸ್ರಾಕ್ಷಸ್ಸಹಸ್ರಪಾತ್ |
ನ ಭೂಮಿಂ ವಿಶ್ವತೋವೃತ್ವಾ | ಅತ್ಯತಿಷ್ಠದ್ದಶಾಂಗುಲಂ || ೧ ||
ಪುರುಷ ಏವೇದಂ ಸರ್ವಂ | ಯದ್ಭೂತಂ ಯಚ್ಚ ಭವ್ಯಂ |
ಉತಾಮೃತತ್ವ ಸ್ಯೇಶಾನಃ | ಯದನ್ನೇ ನಾ ತಿರೋಹತಿ || ೨ ||
ಏತಾವಾನಸ್ಯಮಹಿಮಾ | ಅತೋಜ್ಯಾಯಾಗ್ಂಶ್ಚ ಪೂರುಷಃ |
ಪಾದೋಸ್ಯವಿಶ್ವಾಭೂತಾನಿ | ತ್ರಿಪಾದಸ್ಯಾಮೃತಂದಿವಿ || ೩ ||
ತ್ರಿಪಾದೂರ್ಧ್ವ ಉದೈತ್ಪುರುಷಃ | ಪಾದೋಸ್ಯೇಹಾಭವಾತ್ಪುನಃ |
ತತೋ ವಿಷ್ವಙ್ವ್ಯಕ್ರಾಮತ್ | ಸಾಶನಾನಶನೇ ಅಭಿ || ೪ ||

ತಸ್ಮಾದ್ವಿರಾಡಜಾಯತ । ವಿರಾಜೋ ಅಧಿಪೂರುಷಃ ।
ಸಜಾತೋ ಅತ್ಯರಿಚ್ಯತ । ಪಶ್ಚಾದ್ಭೂಮಿ ಮಥೋಪುರಃ ॥ ೫ ॥
ಯತ್ಪುರುಷೇಣಹವಿಷಾ । ದೇವಾಯಜ್ಞಮತನ್ವತ ।
ವಸಂತೋ ಅಸ್ಯಾಸೀದಾಜ್ಯಂ । ಗ್ರೀಷ್ಮ ಇಧ್ಮಶ್ಶರದ್ಧವಿಃ ॥ ೬ ॥
ಸಪ್ತಾಸ್ಯಾ ಸನ್ಪರಿಧಯಃ । ತ್ರಿಸ್ಸಪ್ತ ಸಮಿಧಃ ಕೃತಾಃ ।
ದೇವಾಯದ್ಯಜ್ಞಂ ತನ್ವಾನಾಃ । ಅಬಧ್ನನ್ ಪುರುಷಂ ಪಶುಂ ॥ ೭ ॥
ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ । ಪುರುಷಂ ಜಾತಮಗ್ರತಃ
ತೇನದೇವಾ ಅಯಜಂತ । ಸಾಧ್ಯಾಋಷಯಶ್ಚಯೇ ॥ ೮ ॥
ತಸ್ಮಾದ್ಯಜ್ಞಾತ್ಸರ್ವಹುತಃ । ಸಂಭೃತಂ ಪೃಷದಾಜ್ಯಂ ।
ಪಶೂಗ್ಂ ಸ್ತಾಗ್ಂಶ್ಚಕ್ರೇವಾಯವ್ಯಾನ್ । ಆರಣ್ಯಾನ್ ಗ್ರಾಮ್ಯಾಶ್ಚಯೇ ॥ ೯ ॥
ತಸ್ಮಾದ್ಯ ಜ್ಞಾತ್ಸರ್ವಹುತಃ । ಋಚಸ್ಸಾಮಾನಿ ಜಜ್ಞಿರೇ ।
ಛಂದಾಗ್ಂಸಿ ಜಜ್ಞಿರೇ ತಸ್ಮಾತ್ । ಯಜುಸ್ತಸ್ಮಾದಜಾಯತ ॥ ೧೦ ॥
ತಸ್ಮಾದಶ್ವಾ ಅಜಾಯಂತ । ಯೇಕೇಚೋ ಭಯಾದತಃ ।
ಗಾವೋಹಜಜ್ಞಿರೇ ತಸ್ಮಾತ್ । ತಸ್ಮಾಜ್ಜಾತಾ ಅಜಾವಯಃ ॥ ೧೧ ॥
ಯತ್ಪುರುಷಂ ವ್ಯದಧುಃ । ಕಥಿ ತಾವ್ಯ ಕಲ್ಪಯನ್ ।
ಮುಖಂ ಕಿಮಸ್ಯಕೌ ಬಾಹೂ । ಕಾವೂರೂಪಾದಾ ಉಚ್ಯೇತೇ ॥ ೧೨ ॥
ಬ್ರಾಹ್ಮಣೋಸ್ಯಮುಖಮಾಸೀತ್ । ಬಾಹೂರಾಜನ್ಯಃ ಕೃತಃ ।
ಊರೂತದಸ್ಯಯದ್ವೈಶ್ಯಃ । ಪದ್ಭ್ಯಾಗ್ಂ ಶೂದ್ರೋ ಅಜಾಯತ ॥ ೧೩ ॥
ಚಂದ್ರಮಾ ಮನಸೋಜಾತಃ । ಚಕ್ಷೋಸ್ಸೂರ್ಯೋ ಅಜಾಯತ ।
ಮುಖಾದಿಂದ್ರಶ್ಚಾಗ್ನಿಶ್ಚ । ಪ್ರಾಣಾದ್ವಾಯು ರಜಾಯತ ॥
ನಾಭ್ಯಾ ಆಸೀದಂತರಿಕ್ಷಂ । ಶೀರ್ಷ್ಣೋ ದ್ಯೌ ಸ್ಸಮವರ್ತತ ।
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ । ತಥಾಲೋಕಾಗ್ಂ ಅಕಲ್ಪಯನ್ ॥ ೧೪ ॥
ವೇದಾಹಮೇತಂ ಪುರುಷಂ ಮಹಾಂತಂ । ಆದಿತ್ಯವರ್ಣಂ ತಮಸಸ್ತುಪಾರೇ
ಸರ್ವಾಣಿ ರೂಪಾಣಿ ವಿಚಿತ್ಯಧೀರಃ । ನಾಮಾನಿ ಕೃತ್ವಾ ಅಭಿವದನ್‌ಯದಾಸ್ತೇ ॥೧೫॥
ಧಾತಾಪುರಸ್ತಾದ್ಯಮುದಾಜಹಾರ । ಶಕ್ರಃ ಪ್ರವಿದ್ವಾನ್ಪ್ರದಿಶಶ್ಚ ತಸ್ರಃ ।
ತಮೇವಂ ವಿದ್ವಾನಮೃತ ಇಹಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ ॥೧೬॥
ಯಜ್ಞೇನ ಯಜ್ಞಮಯ ಜಂತದೇವಾಃ । ತಾನಿಧರ್ಮಾಣಿ ಪ್ರಥಮಾನ್ಯಾಸನ್ ।
ತೇಹನಾಕಂ ಮಹಿಮಾನಸ್ಸಚಂತೇ । ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ॥ ೧೭ ॥
ಅದ್ಭ್ಯಸ್ಸಂಭೂತ ಪೃಥಿವ್ಯೈರಸಾಚ್ಚ । ವಿಶ್ವಕರ್ಮಣಸ್ಸಮವರ್ತತಾಧಿ ।
ತಸ್ಯತ್ವಷ್ಟಾ ವಿದಧದ್ರೂಪಮೇತಿ । ತತ್ಪುರುಷಸ್ಯ ವಿಶ್ವಮಾಜಾನಮಗ್ರೇ ॥ ೧೮ ॥
ವೇದಾಹಮೇತಂ ಪುರುಷಂ ಮಹಾಂತಂ । ಆದಿತ್ಯವರ್ಣಂ ತಮಸಃ ಪರಸ್ತಾತ್ ।
ತಮೇವಂ ವಿದ್ವಾನಮೃತ ಇಹಭವತಿ । ನಾನ್ಯಃ ಪಂಥಾ ವಿದ್ಯತೇಯನಾಯ ॥ ೧೯ ॥

ಪ್ರಜಾಪತಿಶ್ಚರತಿಗರ್ಭೇ ಅಂತಃ । ಅಜಾಯಮಾನೋ ಬಹುಧಾವಿಜಾಯತೇ ।
ತಸ್ಯಧೀರಾಃ ಪರಿಜಾನಂತಿಯೋನಿಂ । ಮರೀಚೀನಾಂ ಪದಮಿಚ್ಛಂತಿ ವೇಧಸಃ ॥ ೨೦ ॥
ಯೋದೇವೇಭ್ಯ ಆತಪತಿ । ಯೋದೇವಾನಾಂ ಪುರೋಹಿತಃ ।
ಪೂರ್ವೋಯೋದೇವೇಭ್ಯೋಜಾತಃ । ನಮೋರುಚಾಯ ಬ್ರಾಹ್ಮಯೇ ॥ ೨೧ ॥
ರುಚಂ ಬ್ರಾಹ್ಮಂ ಜನಯಂತಃ । ದೇವಾ ಅಗ್ರೇ ತದಬ್ರುವನ್ ॥
ಯಸ್ತ್ವೈವಂ ಬ್ರಾಹ್ಮಣೋ ವಿದ್ಯಾತ್ । ತಸ್ಯದೇವಾ ಅಸನ್ವಶೇ ॥ ೨೨ ॥
ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ । ಅಹೋರಾತ್ರೇಪಾರ್ಶ್ವೇ ।
ನಕ್ಷತ್ರಾಣಿರೂಪಂ । ಅಶ್ವಿನೌವ್ಯಾತ್ತಂ । ಇಷ್ಟಂಮನಿಷಾಣ ।
ಅಮುಂಮನಿಷಾಣ ॥ ಸರ್ವಂಮನಿಷಾಣ ॥ ೨೩ ॥

ಓಂ ಶಾಂತಿಃ ಶಾಂತಿಃ ಶಾಂತಿಃ

---

## 3. (1) ಶ್ರೀಸೂಕ್ತಂ

ಹರಿಃ ಓಂ ॥

ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತ ಸ್ರಜಾಂ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮಮಾವಹ ॥ ೧ ॥
ತಾಂಮಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಂ ।
ಯಸ್ಯಾಂ ಹಿರಣ್ಯಂ ವಿಂದೇಯಂ ಗಾಮಶ್ವಂ ಪುರುಷಾನಹಂ ॥ ೨ ॥
ಅಶ್ವಪೂರ್ವಾಂ ರಥಮಧ್ಯಾಂ ಹಸ್ತಿನಾದ ಪ್ರಬೋಧಿನೀಂ ॥
ಶ್ರಿಯಂದೇವೀಮುಪಹ್ವಯೇ ಶ್ರೀರ್ಮಾದೇವೀ ಜುಷತಾಂ ॥ ೩ ॥
ಕಾಂಸೋಸ್ಮಿತಾಂ ಹಿರಣ್ಯ ಪ್ರಾಕಾರಾಮಾರ್ದ್ರಾಂ ಜ್ವಲಂತೀಂ
ತೃಪ್ತಾಂ ತರ್ಪಯಂತೀ ।
ಪದ್ಮೇಸ್ಥಿತಾಂ ಪದ್ಮವರ್ಣಾಂ ತ್ವಾಮಿ ಹೋಪಹ್ವಯೇಶ್ರಿಯಂ ॥ ೪ ॥
ಚಂದ್ರಾಂಪ್ರಭಾಸಾಂಯಶಸಾಜ್ವಲಂತೀಂ, ಶ್ರಿಯಂ ಲೋಕೇದೇವಜುಷ್ಟಾಮುದಾರಾಂ ।
ತಾಂ ಪದ್ಮಿನೀಮೀಗ್ಂ ಶರಣಮಹಂ ಪ್ರಪದ್ಯೇ, ಅಲಕ್ಷ್ಮೀ ರ್ಮೇನಶ್ಯತಾಂ ತ್ವಾಂ ವೃಣೇ ॥ ೫ ॥
ಆದಿತ್ಯವರ್ಣೇತಪಸೋಧಿ ಜಾತೋ, ವನಸ್ಪತಿ ಸ್ತವ ವೃಕ್ಷೋಥ ಬಿಲ್ವಃ ।
ತಸ್ಯಫಲಾನಿತಪಸಾನುದಂತು ಮಾಯಾಂತ ರಾಯಾಶ್ಚ ಬಾಹ್ಯಾ ಅಲಕ್ಷ್ಮೀಃ ॥ ೬ ॥

ಉಪೈತುಮಾಂ ದೇವಸಖಃ ಕೀರ್ತಿಶ್ಚ ಮಣಿನಾಸಹ ।
ಪ್ರಾದುರ್ಭೂತೋಸ್ಮಿರಾಷ್ಟ್ರೇಸ್ಮಿನ್ ಕೀರ್ತಿಮೃದ್ಧಿಂ ದದಾತುಮೇ || ೭ ||

ಕ್ಷುತ್ಪಿಪಾಸಾಮಲಾಂ ಜ್ಯೇಷ್ಠಾಮಲಕ್ಷ್ಮೀಂ ನಾಶಯಾಮ್ಯಹಂ ।
ಅಭೂತಿಮಸಮೃದ್ಧಿಂಚ ಸರ್ವಾಂ ನಿರ್ಣುದ ಮೇಗೃಹಾತ್ || ೮ ||

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂಕರೀಷಿಣೀಂ ।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ || ೯ ||

ಮಾನಸಃ ಕಾಮಮಾಕೂತಿಂ ವಾಚಃ ಸತ್ಯಮಶೀಮಹಿ ।
ಪಶೂನಾಂ ರೂಪಮನ್ನಸ್ಯ ಮಯಿ ಶ್ರೀಶ್ಶ್ರಯ ತಾಂ ಯಶಃ || ೧೦ ||

ಕರ್ದಮೇನ ಪ್ರಜಾಭೂತಾ ಮಯಿ ಸಂಭವ ಕರ್ದಮ ।
ಶ್ರಿಯಂ ವಾಸಯ ಮೇಕುಲೇ ಮಾತರಂ ಪದ್ಮಮಾಲಿನೀಂ || ೧೧ ||

ಆಪಃ ಸೃಜಂತು ಸ್ನಿಗ್ಧಾನಿ ಚಿಕ್ಲೀತವಸಮೇಗೃಹೇ ।
ನಿಚದೇವೀಂ ಮಾತರಂ ಶ್ರಿಯಂ ವಾಸಯಮೇಕುಲೇ || ೧೨ ||

ಆರ್ದ್ರಾಂ ಪುಷ್ಕರಿಣೀಂ ಪುಷ್ಟಿಂ ಪಿಂಗಳಾಂ ಪದ್ಮಮಾಲಿನೀಂ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ || ೧೩ ||

ಆರ್ದ್ರಾಂ ಪುಷ್ಕರಿಣೀಂ ಪುಷ್ಟಿಂ ಸುವರ್ಣಾಂ ಹೇಮಮಾಲಿನೀಂ ।
ಸೂರ್ಯಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ || ೧೪ ||

ತಾಂಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಂ ।
ಯಸ್ಯಾಂ ಹಿರಣ್ಯಂ ಪ್ರಭೂತಂ ಗಾವೋದಾಸ್ಯೋಶ್ವಾನ್ವಿಂದೇಯಂ
ಪುರುಷಾನಹಂ || ೧೫ ||

ಪದ್ಮಪ್ರಿಯೇ ಪದ್ಮಿನಿ ಪದ್ಮಹಸ್ತೇ, ಪದ್ಮಾಲಯೇ ಪದ್ಮದಳಾಯತಾಕ್ಷೀ ।
ವಿಶ್ವಪ್ರಿಯೇ ವಿಷ್ಣುಮನೋನುಕೂಲೇ, ತ್ವತ್ಪಾದ ಪದ್ಮಂ ಮಯಿ ಸನ್ನಿಧತ್ಸ್ವ || ೧೬ ||

ಶ್ರಿಯೈಜಾತಶ್ರಿಯ ಆನಿರ್ಯಾಯ, ಶ್ರಿಯಂ ವಯೋ
ಜನಿತೃಭ್ಯೋದದಾತು ।
ಶ್ರಿಯಂವಸಾನಾ ಅಮೃತತ್ತ್ವಮಾಯನ್, ಭವಂತಿಸದ್ಯಃ ಸಮಿಧಾ
ಮಿತ ದ್ಯೂನ್ || ೧೭ ||

ಶ್ರಿಯ ಏವೈನಂ ತಚ್ಛ್ರಿಯಾ ಮಾದಧಾತಿ । ಸಂತತಮೃಚಾವಷಟ್ಕೃತಂ
ಸಂಧತ್ತಂ ಸಂಧೀಯತೇ ಪ್ರಜಯಾ ಪಶುಭಿಃ । ಯ ಏವಂ ವೇದ ।
ಓಂ ಮಹಾಲಕ್ಷ್ಮ್ಯೈಚವಿದ್ಮಹೇ ವಿಷ್ಣುಪತ್ನ್ಯೈಚ ಧೀಮಹಿ ।
ತನ್ನೋ ಲಕ್ಷ್ಮೀಃ ಪ್ರಚೋದಯಾತ್ ||

ಹರಿಃ ಓಂ ||

ಹರಿಃ ಓಂ ।

## (2) ಭೂಸೂಕ್ತಂ

ಸಹಸ್ರ ಪರಮಾದೇವೀ ಶತಮೂಲಾ ಶತಾಂಕುರಾ ।
ಸರ್ವಗ್ಂ ಹರತುಮೇಪಾಪಂ ದೂರ್ವಾದುಸ್ಸ್ವಪ್ನನಾಶನೀ ॥ ೧ ॥
ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರಾ ।
ಶಿರಸಾಧಾರಿತಾದೇವಿ ರಕ್ಷಸ್ವಮಾಂ ಪದೇ ಪದೇ ॥ ೨ ॥
ಉದ್ಧೃತಾಸಿವರಾಹೇಣ ಕೃಷ್ಣೇನ ಶತಬಾಹುನಾ ।
ಭೂಮಿರ್ಧೇನುರ್ಧರಣೀ ಲೋಕಧಾರಿಣೀ ॥ ೩ ॥
ಮೃತ್ತಿಕೇ ಹನಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ,
ತ್ವಯಾಹತೇನ ಪಾಪೇನ ಜೀವಾಮಿ ಶರದಶ್ಶತಂ ॥
ಮೃತ್ತಿಕೇ ದೇಹಿಮೇ ಪುಷ್ಟಿಂ ತ್ವಯಿ ಸರ್ವಂ ಪ್ರತಿಷ್ಠಿತಂ ॥ ೪ ॥
ಗಂಧದ್ವಾರಾಂ ಧುರಾಧರ್ಷಾಂ ನಿತ್ಯ ಪುಷ್ಟಾಂ ಕರೀಷಿಣೀಂ ।
ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥ ೫ ॥
ವಿಷ್ಣುಪತ್ನೀಂ ಮಹೀಂದೇವೀಂ ಮಾಧವೀಂ ಮಾಧವಪ್ರಿಯಾಂ ।
ಲಕ್ಷ್ಮೀಂ ಪ್ರಿಯಸಖೀಂ ದೇವೀಂ ನಮಾಮ್ಯಚ್ಯುತ ವಲ್ಲಭಾಂ ॥ ೬ ॥
ಓಂ ಧನುರ್ಧರಾಯವಿದ್ಮಹೇ ಸರ್ವ ಸಿದ್ಧ್ಯೈಚ ಧೀಮಹಿ ।
ತನ್ನೋಧರಾಃ ಪ್ರಚೋದಯಾತ್ ॥

ಹರಿಃ ಓಂ॥

---

## (3) ನೀಳಾಸೂಕ್ತಂ

ಹರಿಃ ಓಂ ।
ನೀಳಾಂದೇವೀಗ್ಂ ಶರಣಮಹಂಪ್ರಪದ್ಯೇ ಸುತರ ಸಿತರ ಸೇನಮಃ ।
ಗೃಣಾಹಿ । ಘೃತವತೀ ಸವಿತರಾಧಿ ಪತ್ಯೈಃ ಪಯಸ್ವತೀ ರಂತಿರಾಶಾನೋ
ಅಸ್ತು ॥ ೧ ॥
ಧ್ರುವಾದಿಶಾಂ ವಿಷ್ಣು ಪತ್ನ್ಯ ಘೋರಾಸ್ಯೇಶಾನಾ ಸಹಸೋಯಾಮನೋತಾ ।
ಬೃಹಸ್ಪತಿರ್ಮಾತರಿಶ್ವೋತವಾಯಸ್ಸಂಧುವಾನಾವಾತಾ ಅಭಿನೋಗೃಣಂತು ॥ ೨ ॥
ವಿಷ್ಟಂಭೋದಿವೋ ದರುಣಃ ಪೃಥಿವ್ಯಾ ಅಸ್ಯೇಶಾನಾ ಜಗತೋ ವಿಷ್ಣುಪತ್ನೀ ॥
ಓಂ ಮಹಾದೇವ್ಯೈಚವಿದ್ಮಹೇ ವಿಷ್ಣು ಪತ್ನ್ಯೈಚ ಧೀಮಹಿ ।
ತನ್ನೋ ನೀಳಾಃ ಪ್ರಚೋದಯಾತ್ ॥

ಹರಿಃ ಓಂ ॥

---

## 4. ಪರತ್ವಾದಿ ಪಂಚಕಸ್ತುತಿ

ಉದ್ಯದ್ಭಾನು ಸಹಸ್ರ ಭಾಸ್ವರ ಪರವ್ಯೋಮಾಸ್ಪದಂ ನಿರ್ಮಲ
ಜ್ಞಾನಾನಂದ ಘನಸ್ವರೂಪಮಮಲಂ ಜ್ಞಾನಾದಿಭಿಷ್ಷಡ್ಗುಣ್ಯೈಃ ||
ಜುಷ್ಟಂ ಸೂರಿ ಜನಾಧಿಪಂ ಧೃತರಥಾಂಗಾಬ್ಜಂ ಸುಭೂಷೋಜ್ವಲಂ
ಶ್ರೀ ಭೂ ಸೇವ್ಯಮನಂತಭೋಗಿ ನಿಲಯಂ ಶ್ರೀ ವಾಸುದೇವಂ ಭಜೇ || || ೧ ||

ಆಮೋದೇ ಭುವನೇ ಪ್ರಮೋದಉತ ಸಮ್ಮೋದೇಚ ಸಂಕರ್ಷಣಂ
ಪ್ರದ್ಯುಮ್ನಂ ಚ ತಥಾಽನಿರುದ್ಧ ಇತಿತಾಸ್ಸೃಷ್ಟಿ ಸ್ಥಿತೀ ಚಾಪ್ಯಯಂ ||
ಕುರ್ವಾಣಾನ್ಮತಿಮುಖ್ಯ ಷಡ್ಗುಣವರೈರ್ಯುಕ್ತಾಂಸ್ತ್ರಿಯುಗ್ಮಾತ್ಮಕೈ
ರ್ವ್ಯೂಹಾಧಿಷ್ಠಿತ ವಾಸುದೇವ ಮಪಿತಂ ಕ್ಷೀರಾಬ್ಧಿನಾಥಂ ಭಜೇ || || ೨ ||

ವೇದಾನ್ವೇಷಣ ಮಂದರಾದ್ರಿಭರಣ ಕ್ಷ್ಮೋದ್ಧಾರಣ ಸ್ವಾಶ್ರಿತ
ಪ್ರಹ್ಲಾದಾವನ ಭೂಮಿ ಭಿಕ್ಷಣ ಜಗದ್ವಿಕ್ರಾಂತಯೋ ಯತ್ಕ್ರಿಯಾಃ ||
ದುಷ್ಟಕ್ಷತ್ರ ನಿಬರ್ಹಣಂ ದಶಮುಖಾದ್ಯುನ್ಮೂಲನಂಕರ್ಷಣಂ
ಕಾಳಿಂದ್ಯಾ ಅತಿಪಾಪಕಂಸ ನಿಧನಂ ಯತ್ಕ್ರೀಡಿತಂ ತಂನುಮಃ || || ೩ ||

ಯೋ ದೇವಾದಿಚತುರ್ವಿಧೇಷು ಜನಿಷು ಬ್ರಹ್ಮಾಂಡ ಕೋಶಾಂತರೇ
ಸಂಭಕ್ತೇಷು ಚರಾಚರೇಷು ನಿವಸನ್ನಾಸ್ತೇ ಸದಾಂತರ್ಬಹಿಃ ||
ವಿಷ್ಣುಂತಂ ನಿಖಿಲೇಷ್ವಣುಷ್ವಣುತರಂ ಭೂಯಸ್ಸು ಭೂಯಸ್ತರಂ
ಸ್ವಾಂಗುಷ್ಠಪ್ರಮಿತಂ ಚ ಯೋಗಿ ಹೃದಯೇ ಷ್ವಾಸೀನಮೀಶಂಭಜೇ || || ೪ ||

ಶ್ರೀರಂಗಸ್ಥಲ ವೇಂಕಟಾದ್ರಿ ಕರಿಗಿರ್ಯಾದೌ ತಥಾಷ್ಟೋತ್ತರ
ಸ್ಥಾನೇ ಗ್ರಾಮನಿಕೇತನೇಷು ಚ ಸದಾಸಾನ್ನಿಧ್ಯ ಮಾಸೇದುಷೇ |
ಅರ್ಚಾರೂಪಿಣ ಮರ್ಚಕಾಭಿಮತಿತಸ್ಸ್ವೀ ಕುರ್ವತೇ ವಿಗ್ರಹಂ
ಪೂಜಾಂಚಾಖಿಲ ವಾಂಛಿತಾನ್ವಿತರತೇ ಶ್ರೀಶಾಯ ತಸ್ಮೈ ನಮಃ || || ೫ ||

---

## 5. ಮಂಗಳಾಶಾಸನ ಪಂಚಕಂ

ವಿಧಿವಿಹಿತಸಪರ್ಯಾಂ ವೀತದೋಷಾನುಷಂಗಾಂ
ಉಪಚಿತ ಧನಧಾನ್ಯಾ ಮುತ್ಸವೈ ಸ್ಸಾನ್ತ್ಯನ ಹರ್ಷಾಂ ||
ಸ್ವಯಮುಪಚಿನುನಿತ್ಯಂ ರಂಗಧಾಮನ್ ಸುರಕ್ಷಾಂ
ಶಮಿತ ವಿಮತಪಕ್ಷಾಂ ಶಾಶ್ವತೀಂ ರಂಗಲಕ್ಷ್ಮೀಂ || || ೧ ||

